# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು


**ಕೇಂದ್ರ ಮತ್ತು ಕರ್ನಾಟಕ ಬಜೆಟ್ಟುಗಳು : ೨೦೧೮–೨೦೧೯**
*ಡಾ॥ ಟಿ. ಆರ್. ಚಂದ್ರಶೇಖರ* ... ೦೯

**ವೈಜ್ಞಾನಿಕ ಹಾದಿಯತ್ತ** *ಡಾ॥ ಜಿ. ರಾಮಕೃಷ್ಣ* ... ೧೫

**ಅಂಬೇಡ್ಕರ್, ಸಂವಿಧಾನ ಮತ್ತು ಲಿಂಗರಾಜಕಾರಣ**
*ಡಾ॥ ವಿನಯಾ ಒಕ್ಕುಂದ* ... ೨೫

**ಡಾ॥ ಬಿ. ಆರ್. ಅಂಬೇಡ್ಕರ್ ಮತ್ತು ಕಾಲದ ಕರೆ**
*ಶ್ರೀಸುಮಿತ್ರಾಸುತ ಅಗಸಬಾಳ* ... ೫೩

**ಪ್ರಜಾಪ್ರಭುತ್ವ ಅಳಿವು ಉಳಿವು ಪ್ರಶ್ನೆ** *ಡಾ॥ ರಾಜೇಗೌಡ ಹೊಸಹಳ್ಳಿ* ... ೪೨

**ಎಕ್ಕಾ ಗಾಡಿ** *ಗವಿಸಿದ್ದ ಹೊಸಮನಿ* ... ೨೧

**ಪುರಸೊತ್ತಿಲ್ಲದ ದಲ್ಲಾಳಿಯ ಪ್ರೇಮಾಯಣ** *ಇಂಗ್ಲಿಷ್ ಮೂಲ: ಓ. ಹೆನ್ರಿ*
*ಕನ್ನಡಕ್ಕೆ : ಟಿ. ವಿ. ಮಾಗಳದ* ... ೪೭

**ಕಾವ್ಯಲೋಕ :** ೧೧, ೧೯, ೨೮, ೩೨, ೩೭, ೫೭

**ಜಾಗತೀಕರಣದಿಂದಾಗಿ ಕೃಷಿಕರ ಸಮಸ್ಯೆಗಳು : ಅವಲೋಕನ**
*ಶಂಕರ ಆರ್., ಡಾ॥ ಬಿ. ಆರ್. ವಿಜಯೇಂದ್ರ* ... ೩೩

**ಕಪ್ಪು ಕುಳಿಯ ವಕ್ತಾರ ಸ್ಟೀಫನ್ ಹಾಕಿಂಗ್** *ಎಸ್. ಮಂಜುನಾಥ* ... ೫೯

**ಮರೆಯಲಾಗದ ಮಹಾನ್ ಕಲಾವಿದ ಏಣಗಿ ಬಾಳಪ್ಪ** *ಗಣೇಶ ಅಮೀನಗಡ* ... ೫೧

**ಎ. ಕೆ. ರಾಮಾನುಜನ್ ನೋಟಕ್ರಮದ ವಿಶಿಷ್ಟತೆ** *ಡಾ॥ ರಹಮತ್ ತರೀಕೆರೆ* ... ೨೯

**ಯೂರಿಪಿಡಿಸ್‌ನ ನಾಟಕದಲ್ಲಿನ ಹೆಲೆನ್ ಹಾಗೂ ಮಹಾಕಾವ್ಯದ ಸೀತೆ**
*ತಾರಾಮಣಿ ಆರ್.* ... ೨೩

**ವೀರರಾಣಿ ಬೆಳವಡಿ ಮಲ್ಲಮ್ಮ** *ಜಬೀನಾ ನದಾಫ್* ... ೪೧

**ಎಚ್. ಎಸ್. ದೊರೆಸ್ವಾಮಿ ಎಂಬ ಹರಿಯುವ ನದಿ, ಆಲದ ಮರ !**
*ಮಲ್ಲಿಗೆ ಸಿರಿಮನೆ* ... ೫೫

**ಧರೆಗಿಳಿದ ಸ್ವರ್ಗ ಮಾರಿಷಸ್!** *ಬಳಕೂರು ವಿ. ಎಸ್. ನಾಯಕ್* ... ೪೩

**ನಾನು ಓದಿದ ಪುಸ್ತಕ : ನವಿರಾದ ಭಾವಾಭಿವ್ಯಕ್ತಿಯ ಕಾವ್ಯ "ಪರದೆ ಸರಿದಂತೆ" ಮತ್ತು ಅನಿಸಿದ್ದು ಆಡಿದ್ದು** *ಸತೀಶ ಕುಲಕರ್ಣಿ* ... ೫೯

**ವಿಶ್ವವೀಕ್ಷಣೆ : ಉತ್ತರ ಕೊರಿಯ – ಅಮೆರಿಕ ಮಧ್ಯೆ ಶೃಂಗಸಭೆ ಸಾಧ್ಯತೆ**
*ಸೀಯಾರ್ಕೆ* ... ೫೦

**ನಭಾವಲೋಕನ : ಗುರು ಮತ್ತು ಚಂದ್ರ** *ಡಾ॥ ಬಿ. ಎಸ್. ಶೈಲಜಾ* ... ೫೮

**ಹೊಸ ಓದು** *ಡಾ॥ ರಂಗಾರೆಡ್ಡಿ ಕೋಡಿರಾಂಪುರ,*
*ಡಾ॥ ಎಂ. ವೆಂಕಟಸ್ವಾಮಿ* ... ೪೬

**ತಿಳಿವು : ಕನ್ನಡಕದ ಓರೆಕೋರೆಗಳನ್ನು ತೋರಿಸುವ ಎಚ್ಚರಿಕೆಗೆ ಸ್ವಾಗತ**
*ಮೂಲ : ಟಿ. ಎಂ. ಕೃಷ್ಣ*
*ಕನ್ನಡಕ್ಕೆ : ಪ್ರೊ॥ ಟಿ. ಎಸ್. ವೇಣುಗೋಪಾಲ್, ಪ್ರೊ॥ ಶೈಲಜ* ... ೬೧



**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ಸೃಜನ್, ವಿ. ಗೋಪಾಲ್, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ

**ಮುಖಪುಟ :** ಲೆನಿನ್, ಅಂಬೇಡ್ಕರ್, ಪೆರಿಯಾರ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಈಶಾನ್ಯ ಭಾರತದಲ್ಲಿ ಜಯ ಗಳಿಸಿದ ಭಾರತೀಯ ಜನತಾ ಪಾರ್ಟಿ ನಡೆಸಿದ ದಾಂಧಲೆ ತಲೆತಗ್ಗಿಸುವಂಥದ್ದು. ಕೇಂದ್ರದಲ್ಲಿ ನಾಲ್ಕು ವರ್ಷಗಳ ಹಿಂದೆ ನರೇಂದ್ರ ಮೋದಿ ನೇತೃತ್ವದಲ್ಲಿ ಭಾಜಪ ಅಧಿಕಾರ ಗ್ರಹಣ ಮಾಡಿದ ಮೇಲೆ ಸಂಘಪರಿವಾರದ ಭಂಟರು ದೇಶದಲ್ಲಿ ಸಾಕಷ್ಟು ಉಪಟಳ ಮಾಡಿದ್ದಾರೆ. ಹಿಂದೂ ಸಾಮ್ರಾಜ್ಯ ಕಟ್ಟಲು ಕಾತುರರಾಗಿರುವ ಪರಿವಾರದ ಅಂಚು ಸಂಘಟನೆಗಳು, ಅಲ್ಪಸಂಖ್ಯಾತರು ಮತ್ತು ದಲಿತರು ಮೊದಲಾದವರ ಮೇಲೆ ನಡೆಸಿರುವ ಹಲ್ಲೆಗಳಿಗೆ ಲೆಕ್ಕವೇ ಇಲ್ಲ. ಇಷ್ಟಾದರೂ ಮೋದಿ ಸರಕಾರ ಯಾವ ಕ್ರಮವನ್ನೂ ಕೈಗೊಂಡಿಲ್ಲ. ಇದು ಒಂದು ರೀತಿಯಲ್ಲಿ ಮಾಮೂಲಿ ಸಂಗತಿಯಾಗಿಬಿಟ್ಟಿದೆ. ಚರ್ಚು, ದರ್ಗಾಗಳ ಮೇಲೆ ನಡೆಸುತ್ತಿದ್ದ ದಾಳಿ ಈಗ ಮೂರ್ತಿಭಂಜನಕ್ಕೆ ತಿರುಗಿದೆ. ತ್ರಿಪುರಾದಲ್ಲಿ ಜಯ ಗಳಿಸಿದ ಮೇಲೆ ಲೆನಿನ್ ಪುತ್ಥಳಿ ಉರುಳಿಸುವುದರೊಂದಿಗೆ ಪ್ರಾರಂಭವಾದ ಮೂರ್ತಿಭಂಜನೆ ಕಾರ್ಯಕ್ರಮವನ್ನು ಸಂಘಪರಿವಾರ ಪೆರಿಯಾರ್ ರಾಮಸ್ವಾಮಿ ನಾಯಕರ್, ಅಂಬೇಡ್ಕರ್ ಮೂರ್ತಿಗಳನ್ನು ವಿಕೃತಗೊಳಿಸುವವರೆಗೆ ನಡೆಯಿತು. ಇವೆಲ್ಲ ನಡೆದದ್ದು ಭಾರತೀಯ ಸಂಸ್ಕೃತಿ ರಕ್ಷಣೆಯ ಹೆಸರಿನಲ್ಲಿಯೇ! ಪ್ರಾಯಶಃ ಈ ಅನಾಗರಿಕತೆಯ ಪ್ರದರ್ಶನವೇ ಆರೆಸ್ಸೆಸ್‌ನ ಸಂಸ್ಕೃತಿ ಇರಬೇಕು. ಇಡೀ ದೇಶದ ಜನತೆ ಇಂಥ ಧೂರ್ತತನವನ್ನು ಖಂಡಿಸಿದೆ. ವಿದೇಶೀಯರೂ ಕೂಡ ಪ್ರಕರಣವನ್ನು ಖಂಡಿಸಿದ್ದಾರೆ. ಇಷ್ಟೆಲ್ಲ ಅವಾಂತರವನ್ನು ಭಾಜಪ ಮತ್ತು ಸಂಘಪರಿವಾರದವರು ನಡೆಸಿದಾಗ್ಯೂ ಪ್ರಧಾನಿ ಮಾತ್ರ ಎಂದಿನಂತೆ ಮೌನಕ್ಕೆ ಶರಣಾಗಿದ್ದಾರೆ. ಪಾರ್ಲಿಮೆಂಟಿನ ಕಲಾಪಗಳಿಗೆ ಮೂರ್ತಿ ಭಂಜನ ನಡವಳಿಕೆ ಅಡ್ಡಿಯಾದರೂ ಮೋದಿ–ಷಾ ಜೋಡಿ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ಆರೆಸ್ಸೆಸ್ ನಾಯಕರು ಲೆನಿನ್, ಮಾರ್ಕ್ಸ್ ಪ್ರತಿಮೆಗಳ ಧ್ವಂಸವನ್ನು ಸಮರ್ಥಿಸಿಕೊಂಡಿರುವ ರೀತಿ ಅಸಹ್ಯಕರ. ಪ್ರಜಾಪ್ರಭುತ್ವದಲ್ಲಿ ಇಂಥ ಪ್ರಕರಣಗಳು ಸರ್ವಥಾ ಸಮ್ಮತವಲ್ಲ. ಚುನಾವಣೆಗಳಲ್ಲಿ ಜಯಾಪಜಯಗಳು ಇದ್ದದ್ದೆ. ಆದರೆ ಅಹಂಕಾರದಿಂದ ವರ್ತಿಸುವುದು ಸಮರ್ಥನೀಯವಲ್ಲ.

✶ ✶ ✶

ವಿಜಯದ ಮತ್ತಿನ ಹಿಂದೆಯೇ ಭಾಜಪ ತನ್ನ ಭದ್ರಕೋಟೆಯಲ್ಲೇ ಸೋಲಿನ ಕಹಿಯನ್ನೂ ಉಂಡಿದೆ. ಉತ್ತರಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಪಾರ್ಲಿಮೆಂಟಿಗೆ ನಡೆದ ಉಪಚುನಾವಣೆಗಳಲ್ಲಿ ಮುಖಭಂಗವನ್ನು ಅನುಭವಿಸಿದೆ. ಉತ್ತರಪ್ರದೇಶದ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ್ ಹತ್ತಾರು ವರ್ಷಗಳಿಂದ ಪ್ರತಿನಿಧಿಸಿದ್ದ ಗೋರಖ್‌ಪುರ ಕ್ಷೇತ್ರದಲ್ಲಿ ದಲಿತ ನಾಯಕಿ ಮಾಯಾವತಿ ಬೆಂಬಲಿತ ಸಮಾಜವಾದಿ ಪಕ್ಷದ ಅಭ್ಯರ್ಥಿ ಭಾರಿ ಅಂತರದಿಂದ ಜಯ ಗಳಿಸಿದ್ದಾರೆ, ಹಾಗೆಯೇ ಫೂಲ್‌ಪುರ ಮತ್ತು ಬಿಹಾರದ ಅರಾರಿಯ ಕ್ಷೇತ್ರಗಳಲ್ಲೂ ವಿಪಕ್ಷದ ಅಭ್ಯರ್ಥಿಗಳು ಜಯ ಗಳಿಸಿದ್ದಾರೆ. ಈ ಎರಡೂ ಹಿಂದೀ ರಾಜ್ಯಗಳಲ್ಲಿ ನಡೆದ ಉಪಚುನಾವಣೆಗಳ ಫಲಿತಾಂಶ ಭಾಜಪಗೆ ಎಚ್ಚರಿಕೆಯ ಗಂಟೆಯಾಗಿದೆ. ೨೦೧೯ರ ಪಾರ್ಲಿಮೆಂಟರಿ ಚುನಾವಣೆಗಳು ಬಹಳ ದೂರವೇನಿಲ್ಲ. ಜಾತ್ಯತೀತತೆ ಮತ್ತು ಸಂವಿಧಾನದಲ್ಲಿ ವಿಶ್ವಾಸ ಹೊಂದಿರುವ ಎಲ್ಲ ಪ್ರತಿಪಕ್ಷಗಳೂ ಒಂದಾಗಿ ಎದುರಿಸಿದಲ್ಲಿ ಭಾಜಪ ಅಜೇಯವೇನಲ್ಲ. ಅಂಥ ಪ್ರಯತ್ನಗಳೂ ಕೂಡ ನಡೆಯುತ್ತಿವೆ. ಭಾಜಪದ ಮುನ್ನಡೆಗೆ ಕಡಿವಾಣ ಹಾಕುವುದು ಅಸಾಧ್ಯವೇನಲ್ಲ. ಹಾಗಾಗಿ ಅಂಥ ಎಲ್ಲ ಪ್ರಯತ್ನಗಳಿಗೂ ಯಶಸ್ಸನ್ನು ಹಾರೈಸೋಣ.

✶ ✶ ✶

ಈ ಹಿನ್ನೆಲೆಯಲ್ಲೇ ಮುಂಬರುವ ಕರ್ನಾಟಕ ರಾಜ್ಯ ವಿಧಾನಸಭಾ ಚುನಾವಣೆಗಳನ್ನು ಪರಿಶೀಲಿಸಬೇಕು. ಚುನಾವಣೆಗಳು ಇನ್ನೂ ಐವತ್ತು ದಿನಗಳು ಬಾಕಿ ಇದ್ದರೂ ಪ್ರಚಾರದ ಅಬ್ಬರ ಜೋರಾಗಿಯೇ ನಡೆದಿದೆ. ಕರ್ನಾಟಕವನ್ನು ಕಾಂಗ್ರೆಸ್ ಮುಕ್ತ ರಾಜ್ಯವಾಗಿಸಬೇಕು ಎಂಬುದಾಗಿ ಭಾಜಪ ಪಣತೊಟ್ಟು ಮೋದಿ, ಷಾ, ಯೋಗಿ ಮಹಾನಾಯಕರುಗಳೆಲ್ಲ ಈಗಾಗಲೇ ಪ್ರವಾಸ ಮಾಡಿಯಾಗಿದೆ. ಕಾಂಗ್ರೆಸ್ ತನ್ನ ಭದ್ರಕೋಟೆಯನ್ನು

(೬ನೇ ಪುಟಕ್ಕೆ )



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೯ ಸಂಚಿಕೆ–೯ ಏಪ್ರಿಲ್ ೨೦೧೮





■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೧, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨



**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಮೂರ್ತಿಭಂಜಕರ ಉದ್ದೇಶ ಮತ್ತು ಸಂದೇಶ

**ಕ**ಳೆದ ತಿಂಗಳು ತ್ರಿಪುರಾ ವಿಧಾನಸಭಾ ಚುನಾವಣೆಯ ಫಲಿತಾಂಶ ಪ್ರಕಟವಾದ ಕೇವಲ ಎರಡು ದಿನದಲ್ಲಿ ತ್ರಿಪುರಾ ರಾಜ್ಯದಲ್ಲಿನ ಲೆನಿನ್ ಪ್ರತಿಮೆಯನ್ನು ಉರುಳಿಸಲಾಯಿತು. ಅದಾದ ನಂತರ ತಮಿಳುನಾಡಿನಲ್ಲಿ ಪೆರಿಯಾರ್ ಅವರ ಪ್ರತಿಮೆಯನ್ನೂ ಅದಾದ ನಂತರ ಉತ್ತರಪ್ರದೇಶದಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಪ್ರತಿಮೆಯನ್ನು ಉರುಳಿಸಲಾಯಿತು. ಈ ಪ್ರತಿಮೆಗಳನ್ನು ಉರುಳಿಸಿದ ವಿಷಯ ದೇಶದಾದ್ಯಂತ ಪ್ರತಿಭಟನೆಗೆ ಕಾರಣವಾಯಿತು. ಈ ಪ್ರತಿಮೆಗಳನ್ನು ಉರುಳಿಸಿದ್ದು ಯಾರು ಎನ್ನುವುದಕ್ಕಿಂತಲೂ ಎಂಥ ಸಂದರ್ಭದಲ್ಲಿ ಎನ್ನುವುದನ್ನು ಗಮನಿಸಬೇಕು. ತ್ರಿಪುರಾ ಎಂಬ ಪುಟ್ಟ ರಾಜ್ಯದಲ್ಲಿ ಬಿ.ಜೆ.ಪಿ. ಮೈತ್ರಿಕೂಟಕ್ಕೆ ಬಹುಮತ ದೊರೆತು ಅಲ್ಲಿನ ಎಡಪಕ್ಷಗಳ ಮೈತ್ರಿಕೂಟಕ್ಕೆ ಸೋಲಾಗಿತ್ತು. ಈಶಾನ್ಯ ಭಾರತದಲ್ಲಿ ಬಿ.ಜೆ.ಪಿ. ಮೊಟ್ಟಮೊದಲ ಬಾರಿಗೆ ಅಧಿಕಾರದ ಬಾಗಿಲಿಗೆ ಬಂದಿತ್ತು. ಇನ್ನೂ ಸರಕಾರ ರಚನೆ ಆಗಿರಲಿಲ್ಲ. ಆಗಲೇ ಒಂದು ಉನ್ಮತ್ತ ಗುಂಪು ಲೆನಿನ್ ಪ್ರತಿಮೆಯನ್ನು ಜೆ.ಸಿ.ಬಿ. ಯಂತ್ರ ತಂದು ರಾಜಾರೋಷವಾಗಿ ಉರುಳಿಸಿ ಕೇಕೆ ಹಾಕಿತು. ಈ ಘಟನೆಯಿಂದ ಪ್ರಭಾವಿತರಾದ ಮತಾಂಧ ಶಕ್ತಿಗಳು ಪೆರಿಯಾರ್ ಮತ್ತು ಅಂಬೇಡ್ಕರ್ ಅವರ ಮೂರ್ತಿಗಳ ಮೇಲೆ ದಾಳಿ ನಡೆಸಿದರು. ಮೂರ್ತಿಗಳು ಯಾರದೇ ಇರಲಿ ಅವು ನಿರ್ದಿಷ್ಟ ಜನಸಮೂಹದ ಭಾವನೆಗಳ ಮೂರ್ತರೂಪ. ಇಂಥ ಜನಸಮೂಹದ ಭಾವನೆಗಳನ್ನೂ, ಚಿಂತನೆಗಳನ್ನೂ ಸಹಿಸದ ಒಂದು ಗುಂಪು ಈ ಮೂರ್ತಿ ಭಂಜಕತನಕ್ಕೆ ಮುಂದಾಗಿದೆ. ಒಂದು ರಾಜ್ಯದ ಆಡಳಿತ ವ್ಯವಸ್ಥೆ ಕೈಗೆ ಬರುತ್ತಿರುವಾಗ, ದೇಶದ ಆಡಳಿತ ವ್ಯವಸ್ಥೆ ತಮ್ಮ ಕೈಯ್ಯಲ್ಲೇ ಇರುವಾಗ ಯಾವ ನಿಯಂತ್ರಣವೂ ಇಲ್ಲದೆ ತಮಗೆ ತಿಳಿದ ಹಾಗೆ ಒಂದು ಉನ್ಮತ್ತ ಗುಂಪು ಇಂಥ ಕೆಲಸ ಮಾಡುತ್ತದೆ. ಅದೇ ಸಂದರ್ಭದಲ್ಲಿ ಆಳುವ ವರ್ಗದ ಮುಖ್ಯಸ್ಥರಾಗಲೀ, ಆಳುವ ವರ್ಗದ ಮೈತ್ರಿಕೂಟದ ಪಕ್ಷಗಳ ಮುಖಂಡರಾಗಲೀ ಇಂಥ ಘಟನೆಯನ್ನು ಖಂಡಿಸುವುದಿಲ್ಲ, ಮಾತ್ರವಲ್ಲ, ಪರೋಕ್ಷವಾಗಿ ಬೆಂಬಲಿಸುತ್ತಾರೆ. ತಮ್ಮ ಚಿಂತನೆಗೆ ಎದುರಾದವರನ್ನು ದೈಹಿಕವಾಗಿಯೇ ಮುಗಿಸುವ ಮತಾಂಧರಿಗೆ ಮೂರ್ತಿಗಳನ್ನು ಉರುಳಿಸುವುದು ದೊಡ್ಡ ಕೆಲಸವೇನಲ್ಲ. ಮಾನವ ಇತಿಹಾಸದಲ್ಲಿ ಇದು ಮೊದಲನೆಯದೂ ಅಲ್ಲ, ಕೊನೆಯದೂ ಅಲ್ಲ. ಅದರಲ್ಲೂ ಜನಪರ ಚಿಂತಕರು, ಹೋರಾಟಗಾರರು, ಮೌಢ್ಯ ವಿರೋಧಿ ವೈಚಾರಿಕ ಚಳುವಳಿಗಾರರು, ಜಾತಿ, ಧರ್ಮಗಳ ಜಡತ್ವ, ತಾರತಮ್ಯ ನೀತಿಯನ್ನು ವಿರೋಧಿಸುವವರು ವಿವಿಧ ರೀತಿಯ ದಾಳಿಗೊಳಗಾಗಿದ್ದಾರೆ. ಆದರೆ ಅವರಾರನ್ನೂ ಜನಮಾನಸದಿಂದ ಅಳಿಸಿಹಾಕಲಾಗಿಲ್ಲ ಎಂಬ ಸತ್ಯವನ್ನು ಮರೆಮಾಚಲು ಸಾಧ್ಯವಿಲ್ಲ.

ಲೆನಿನ್, ಪೆರಿಯಾರ್, ಅಂಬೇಡ್ಕರ್ ಮೂರ್ತಿಗಳ ಮೇಲಿನ ದಾಳಿಗೆ ಕಾರಣ ಅವರು ಜನರ ಪರವಾಗಿದ್ದರು ಮತ್ತು ಶೋಷಕರಿಗೆ ವಿರುದ್ಧವಾಗಿದ್ದರು, ಮಾತ್ರವಲ್ಲ ಶತಮಾನಗಳು ಕಳೆದರೂ ಮಾಸಿಹೋಗದ ಸಿದ್ಧಾಂತ ಮತ್ತು ಶೋಷಣೆಯ ವಿರುದ್ಧದ ಎಚ್ಚರವನ್ನು, ಹೋರಾಟದ ಮಾದರಿಗಳನ್ನು ಕೊಟ್ಟುಹೋಗಿದ್ದಾರೆ. ಒಂದು ವರ್ಗದಿಂದ ಇನ್ನೊಂದು ವರ್ಗದ ಶೋಷಣೆಯನ್ನು ತೊಡೆದುಹಾಕುವ ಸಿದ್ಧಾಂತವಾದ ಮಾರ್ಕ್ಸ್‌ವಾದವನ್ನು ಲೆನಿನ್ ಜಾರಿಗೆ ತರುವ ಮೂಲಕ ಅದೊಂದು ಕಾಲ್ಪನಿಕ ಸಿದ್ಧಾಂತವಲ್ಲ ಎಂದು ರಷ್ಯನ್ ಕ್ರಾಂತಿಯ ಮೂಲಕ ಸಾಬೀತುಪಡಿಸಿದರು. ಅಕ್ಟೋಬರ್ ಕ್ರಾಂತಿಯ ರೂವಾರಿಯಾದ ಲೆನಿನ್ ಒಂದು ಸಮಾಜವಾದಿ ವ್ಯವಸ್ಥೆಯನ್ನು ಮೊಟ್ಟಮೊದಲ ಬಾರಿಗೆ ಜಾರಿಗೆ ತಂದರು, ಅದರ ಪರಿಣಾಮ ಹಲವಾರು ದೇಶಗಳಲ್ಲಿ ಸಮಾಜವಾದಿ ವ್ಯವಸ್ಥೆ ಜಾರಿಯಾಗಿ ವಿಶ್ವದಾದ್ಯಂತ ದುಡಿವ ವರ್ಗಕ್ಕೆ ಸ್ಫೂರ್ತಿ ನೀಡಿತು. ವಿಶ್ವದ ಬಂಡವಾಳಶಾಹಿಗಳಿಗೆ, ಸುಲಿಗೆಕೋರರಿಗೆ ಸಮಾಜವಾದ, ಮಾರ್ಕ್ಸ್, ಲೆನಿನ್ ಪದಗಳೇ ಭಯ ಹುಟ್ಟಿಸಿದವು. ಇಂದಿಗೂ ಕಾರ್ಪೊರೇಟ್ ಕಂಪನಿಗಳಿಗೆ ಅದರ 'ಛಾಯಾವಾದಿ'ಗಳಾದ ಧರ್ಮಾಂಧರಿಗೆ ಲೆನಿನ್ ಕಂಡರೆ ಭಯ, ಅಸಹನೆ, ಅದಕ್ಕೆ ಅವರ ಮೂರ್ತಿಯ ಮೇಲೆ ದಾಳಿ.

ಈರೋಡು ವೆಂಕಟಸ್ವಾಮಿ ನಾಯ್ಕರ್ ಒಬ್ಬ ದೊಡ್ಡ ವಿಚಾರವಾದಿ. ಪೆರಿಯಾರ್ ಎಂಬ ಹೆಸರಿನಿಂದ ಪ್ರಸಿದ್ಧರಾದ ಇವರನ್ನು ದಕ್ಷಿಣ ಪೂರ್ವ ಏಷಿಯಾದ ಸಾಕ್ರೆಟಿಸ್ ಎಂದು ಯುನೆಸ್ಕೊ ಬಣ್ಣಿಸಿದೆ. 'ದೇವರಿಲ್ಲ, ದೇವರನ್ನು ನಂಬುವಾತ ಮೂರ್ಖ' ಎಂದು ಬಹಿರಂಗವಾಗಿ ಘೋಷಿಸಿದವರು. ಇಡೀ ದಕ್ಷಿಣ ಭಾರತದಲ್ಲಿ ಇವರ ವೈಚಾರಿಕ ಚಿಂತನೆ ಒಂದು ಆಂದೋಲನವಾಗಿ ಬೆಳೆಯಿತು. ಆರ್ಯರು 'ಅಸುರ'ರೆಂದು ಬಣ್ಣಿಸಿ ದ್ರಾವಿಡ ಜನಾಂಗವನ್ನು ಬೇಟೆಯಾಡುವಾಗ 'ಸ್ವ–ಮರ್ಯಾದೆ' ಚಳುವಳಿ ಕಟ್ಟಿ ದ್ರಾವಿಡ, ತಮಿಳು ಜನಾಂಗದ ಸ್ವಾಭಿಮಾನವನ್ನು ಜಾಗೃತಗೊಳಿಸಿದರು. ಕೋಮುವಾದಿಗಳ ಅಸ್ತ್ರವಾದ ಮೂಢನಂಬಿಕೆಗೆದುರಾಗಿ

‘ರ್ಯಾಶನಲಿಸ್ಟ್ ಫೋರಂ’ ಕಟ್ಟಿ ವೈಜ್ಞಾನಿಕ ಮನೋಭಾವ ಬೆಳೆಸಿದರು. ಕಾಂಗ್ರೆಸ್‌ನಿಂದ ಹೊರಬಂದು ಜಸ್ಟಿಸ್ ಪಾರ್ಟಿ ಕಟ್ಟಿದರು, ಅದನ್ನು ‘ದ್ರಾವಿಡರ್ ಕಳಗಂ’ ಎಂದು ಬದಲಾಯಿಸಿದರು. ‘ತಮಿಳುನಾಡು ತಮಿಳಿಗರಿಗೆ’ ಎಂದು ಹೇಳಿದ ಪೆರಿಯಾರ್ ‘ದ್ರಾವಿಡ ರಾಷ್ಟ್ರ’ದ ಕಲ್ಪನೆಯನ್ನು ಆರ್ಯರಿಗೆದುರಾಗಿ ಪ್ರಚಾರ ಮಾಡಿದರು. ಇಂಥ ನಾಸ್ತಿಕ, ಮಹಾನ್ ಚಿಂತಕನನ್ನು ಅವರ ಮೂರ್ತಿಯನ್ನು ಬಿ.ಜೆ.ಪಿ.ಯವರು, ಕೋಮುವಾದಿಗಳು, ಮೌಢ್ಯವನ್ನೇ ಬಂಡವಾಳ ಮಾಡಿಕೊಂಡು ಕಾರ್ಪೊರೇಟ್ ಕಂಪನಿಗಳ ಗುಲಾಮಗಿರಿ ಮಾಡುವವರು ಅದ್ಹೇಗೆ ಸಹಿಸಲು ಸಾಧ್ಯ?

ಡಾ॥ ಬಿ. ಆರ್. ಅಂಬೇಡ್ಕರ್ ಮತಾಂಧರ ಮಡಿಲ ಬೆಂಕಿ. ಮತ(ಧರ್ಮ)ವನ್ನೇ ‘ಮತ’ (ಓಟು)ಗಳನ್ನಾಗಿ ಪರಿವರ್ತಿಸುವ ಹುನ್ನಾರ ಮಾಡುವ ಪಕ್ಷಕ್ಕೆ ‘ನಾನು ಹಿಂದೂವಾಗಿ ಹುಟ್ಟಿದ್ದೇನೆ ಹಿಂದೂ ಆಗಿ ಸಾಯಲಾರೆ’ ಎಂದು ೧೯೫೬ರಲ್ಲಿ ಬೌದ್ಧಧರ್ಮಕ್ಕೆ ಸೇರಿದವರು ಅದ್ಹೇಗೆ ಸಹನೆಯಾಗುತ್ತಾರೆ. ಹಿಂದುತ್ವವಾದಿಗಳು ಭಾರತದ ಸಂವಿಧಾನ ಎಂದು ನಂಬಿಸಲು ಹೊರಟ ‘ಮನುಸ್ಮೃತಿ’ಯನ್ನು ಸುಟ್ಟುಹಾಕಿ, ಸರ್ವ ಜಾತಿ, ಮತ, ಧರ್ಮಗಳನ್ನು ಗೌರವಿಸುವ, ಜಾತಿವ್ಯವಸ್ಥೆಯನ್ನೇ ಬಹಿಷ್ಕರಿಸುವ, ಸಮಾನತೆಯ ಆಶಯದ ಸಂವಿಧಾನ ಕೊಟ್ಟವರು ಅಂಬೇಡ್ಕರ್. ಯಾವ ಧರ್ಮಕ್ಕೆ ಅಸ್ಪೃಶ್ಯತೆಯೇ ಆಧಾರವೋ ಅಂಥ ಧರ್ಮದಲ್ಲಿನ ಅಸ್ಪೃಶ್ಯರಿಗೆ ಸ್ವಾಭಿಮಾನ, ಸ್ವಾವಲಂಬನೆಯ ಸೂತ್ರ ಹೇಳಿಕೊಟ್ಟರು. ರಾಜಕೀಯ ದಲಿತರ, ಬಡವರ ದಮನಕ್ಕೆ ಬಳಕೆಯಾಗುವಾಗ, ‘ಪ್ರಭುತ್ವ’ ಶೋಷಣೆಯನ್ನು ತೊಡೆದುಹಾಕುವ ಬೀಗದಕೈ ಎಂದು ಶೋಷಿತರಿಗೆ ರಾಜಕೀಯ ನಡೆ ತೋರಿದರು. ಇಂಥ ಅಂಬೇಡ್ಕರ್ ಅವರನ್ನು, ಅವರ ಮೂರ್ತಿಯನ್ನು ಮತಾಂಧರು ಅದ್ಹೇಗೆ ಸಹಿಸಲು ಸಾಧ್ಯ?

ಮೂರ್ತಿಭಂಜಕರ ಕಣ್ಣೆದುರಿಗೆ ಈಗ ಈ ಮೂವರು ಚಿಂತಕರು ಇದ್ದರೆ ಅವರ ಮನದಲ್ಲಿ ಇಂಥ ನೂರಾರು ಜನ ಇದ್ದಾರೆ. ಅವರಲ್ಲಿ ಬುದ್ಧ, ಬಸವ, ಗಾಂಧಿ, ಭಗತ್, ಸುಭಾಸ್.... ಹೀಗೆ ಸಮಾನತೆ, ಸೌಹಾರ್ದತೆ, ಸ್ವಾಭಿಮಾನ, ಸ್ವಾವಲಂಬನೆ, ವೈಚಾರಿಕತೆ, ಮಾನವೀಯತೆ ಬೋಧಿಸಿದ ಯಾರನ್ನೂ ಇವರು ಸಹಿಸುವುದಿಲ್ಲ. ಅವರ ಚಿಂತನೆಗಳನ್ನು ಅಳಿಸಿಹಾಕಲು ಇವರಿಗೆ ಸಾಧ್ಯವಿಲ್ಲದಿದ್ದರೂ ಪ್ರತಿಸಿದ್ಧಾಂತಗಳನ್ನು ಸೃಷ್ಟಿಸಿ ಗೊಂದಲ ಉಂಟುಮಾಡುತ್ತಾರೆ. ಈಗ ‘ಗಾಂಧಿ ದೇಶದ್ರೋಹಿ, ಗೋಡ್ಸೆ ದೇಶಭಕ್ತ’ ಎಂಬ ಘೋಷಣೆಯನ್ನು ಹರಿಬಿಡುತ್ತಿದ್ದಾರೆ. ಮುಂದೆ ಇವೆಲ್ಲ ಶಾಲಾ ಪಠ್ಯಗಳಾದರೂ ಅಚ್ಚರಿ ಇಲ್ಲ. ಇದೇನೇ ಇರಲಿ. ಅವರು ಅಧಿಕಾರ ಪಡೆಯಲು, ಪಡೆದ ಅಧಿಕಾರ ಉಳಿಸಿಕೊಳ್ಳಲು ಎಲ್ಲ ಕಸರತ್ತು ಮಾಡುತ್ತಾರೆ. ಈಗ ಲೆನಿನ್, ಪೆರಿಯಾರ್, ಅಂಬೇಡ್ಕರ್ ಮೂರ್ತಿಗಳ ಮೇಲೆ ದಾಳಿ ಮಾಡಿ ಒಂದು ‘ಸಂದೇಶ’ವನ್ನು ಪರೋಕ್ಷವಾಗಿ ಕೊಟ್ಟಿದ್ದಾರೆ. ಒಂದೇ ಗುರಿಯನ್ನು ವಿಭಿನ್ನ ಮಾರ್ಗಗಳಿಂದ ತಲುಪಲು ಹೋರಾಡುತ್ತಿರುವ ಲೆನಿನ್, ಅಂಬೇಡ್ಕರ್, ಪೆರಿಯಾರ್ ಮುಂತಾದವರ ಸಿದ್ಧಾಂತಗಳನ್ನು ಮಾನ್ಯ ಮಾಡುವವರು, ಅನುಸರಿಸುವವರೆಲ್ಲ ಒಟ್ಟಾಗಬೇಕೆಂಬುದೇ ಆ ಸಂದೇಶ. ಈ ಮೂವರು ಮಹನೀಯರ ಮೂರ್ತಿಗಳ ಮೇಲೆ ದಾಳಿ ನಡೆದಾಗ ಹೋರಾಟಗಾರರು ಮೂರೂ ಜನರ ಚಿತ್ರ ಕೈಯ್ಯಲ್ಲಿ ಹಿಡಿದು ಪ್ರತಿಭಟಿಸಿದ್ದರು. ಬರೀ ಲೆನಿನ್, ಪೆರಿಯಾರ್, ಅಂಬೇಡ್ಕರ್‌ವಾದಿಗಳು ಮಾತ್ರವಲ್ಲ, ಸಮಾನತೆಯನ್ನು, ಸ್ವಾಭಿಮಾನವನ್ನು, ಮಾನವ ಘನತೆಯನ್ನು ಗೌರವಿಸುವ, ಪ್ರೀತಿಸುವ ಎಲ್ಲರೂ ಒಂದಾಗಬೇಕಿದೆ ಬೇರೆ ಬೇರೆ ಪ್ರತಿಮೆಗಳು ಉರುಳುವ ಮುನ್ನ. ಹೀಗೆ ಒಂದುಗೂಡುವವರು ಪ್ರತಿಮಾವಾದಿಗಳಾಗಬೇಕಿಲ್ಲ, ಆದರೆ ಪ್ರತಿಮೆಗಳ ಭಂಜಕರ ಒಡಲಲ್ಲಿರುವ ಜೀವವಿರೋಧಿ ಚಿಂತನೆಗಳನ್ನು ಸದೆಬಡಿಯುವುದು ಪ್ರಥಮ ಆದ್ಯತೆ ಆಗಬೇಕಿದೆ.

ತ್ರಿಪುರಾ ಚುನಾವಣೆ ಬಿಜೆಪಿಗೆ ಅಧಿಕಾರದ ಬಾಗಿಲು ತೆರೆದರೆ, ಉತ್ತರ ಪ್ರದೇಶ ಮತ್ತು ಬಿಹಾರದಲ್ಲಿನ ಲೋಕಸಭೆಯ ಉಪಚುನಾವಣೆಗಳು ಬಿಜೆಪಿಯ ಆಡಳಿತದ ತಳಪಾಯದಲ್ಲಿ ಬಿರುಕು ಮೂಡಿರುವುದನ್ನು ಸಾಬೀತುಪಡಿಸಿವೆ. ಇಂಥ ಸಂದರ್ಭದಲ್ಲಿ ಮತಾಂಧರು ತಮ್ಮ ರಾಜಕೀಯ ನೆಲೆಯನ್ನು ಗಟ್ಟಿಗೊಳಿಸಿಕೊಳ್ಳಲು ಸಾಮಾಜಿಕ ವಾತಾವರಣವನ್ನು ಕಲುಷಿತಗೊಳಿಸಿ ಸಮಾಜವನ್ನು ಧ್ರುವೀಕರಣ ಗೊಳಿಸುವ ಪ್ರಯತ್ನವನ್ನು ತೀವ್ರವಾಗಿ ಮಾಡುತ್ತಾರೆ. ಮತೀಯ ರಾಜಕಾರಣದ ನಿಲುವು ಸ್ಪಷ್ಟವಾಗಿದೆ. ಆದರೆ ದೇಶದ ಜಾತ್ಯತೀತ, ಪ್ರಜಾಸತ್ತಾತ್ಮಕ, ಎಡಪಂಥೀಯರ ಐಕ್ಯತೆ ಸ್ಪಷ್ಟ ರೂಪ ಪಡೆಯುತ್ತಿಲ್ಲ. ಉತ್ತರ ಪ್ರದೇಶದ ಲೋಕಸಭೆಯ ಉಪಚುನಾವಣೆಯಲ್ಲಿ ಮಾಯಾವತಿ ಮತ್ತು ಅಖಿಲೇಶ ಯಾದವ ಅವರು ಒಂದು ಮಾದರಿಯನ್ನು ಮುಂದಿಟ್ಟು ಅದರ ಫಲಿತಾಂಶವನ್ನೂ ಪಡೆದಿದ್ದಾರೆ. ಇದು ದೇಶದ ಎಲ್ಲ ಜನಪರ ಶಕ್ತಿಗಳಿಗೆ ಮಾದರಿಯಾಗಬೇಕು. ಅದರಲ್ಲೂ ಹತ್ತಾರು ಬಣಗಳಾಗಿರುವ ಎಡಪಂಥೀಯರಿಗೆ ಇದು ದೊಡ್ಡ ಪಾಠ. ಇನ್ನೂ ಕೂದಲು ಸೀಳುವ ಸೈದ್ಧಾಂತಿಕ ವಿಶ್ಲೇಷಣೆ ಮಾಡುತ್ತ ಕುಳಿತರೆ ಎಡಪಂಥೀಯರು ಕಾಲದ ಕರೆಗೆ ಬೆನ್ನು ತೋರಿಸಿದಂತೆ. ಇನ್ನಾದರೂ ದೇಶದ ಜನಪರ ಪಕ್ಷಗಳು ಸಂಘಟನೆಗಳು ಒಂದಾಗಲೆಂದು ಹಾರೈಸೋಣ.

ಸಿದ್ದನಗೌಡ ಪಾಟೀಲ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





■ ***ಚಂದಾ ವಿವರಗಳು***

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

■ ***ನವಕರ್ನಾಟಕ ಶಾಖೆಗಳು***

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಉಳಿಸಿಕೊಳ್ಳುವುದಕ್ಕೆ ಶ್ರಮಿಸುತ್ತಿದೆ. ಮುಖ್ಯಮಂತ್ರಿ ಸಿದ್ದರಾಮಯ್ಯ – ಪರಮೇಶ್ವರ ಕಂಪೆನಿಯೇನೋ ನೂರೈವತ್ತು ಸ್ಥಾನಗಳು ಕಾಂಗ್ರೆಸ್‌ಗೆ ಗಟ್ಟಿ ಎಂದು ಲೆಕ್ಕ ಹಾಕಿದೆ. ಯಾರಿಗೆ ಏನು ಲಭಿಸುವುದೋ ನೋಡಬೇಕಿದೆ. ಮೂರನೇ ಪಕ್ಷ ಕುಮಾರಸ್ವಾಮಿಯ ಜಾತ್ಯತೀತ ಜನತಾದಳದವರ ಲೆಕ್ಕಾಚಾರವೇ ಬೇರೆ. ತಾನೇ ಮುಖ್ಯಮಂತ್ರಿ ಎಂದು ಹೇಳಿಕೊಳ್ಳುತ್ತಿದ್ದಾಗ್ಯೂ ಕುಮಾರಸ್ವಾಮಿ ಈಗಾಗಲೇ ಯಾರ ಕಡೆ ವಾಲಿದರೆ ಎಷ್ಟು ಲಾಭ ಎನ್ನುವ ವಿಚಾರ ಮಾಡುತ್ತಿದ್ದಾರೆ. ಕೆಲ ದಿನಗಳಲ್ಲೇ ನಡೆಯಲಿರುವ ರಾಜ್ಯಸಭಾ ಚುನಾವಣೆ ಫಲಿತಾಂಶ ಹೊರಬಿದ್ದಾಗ ಬೇಳೆಕಾಳು ತಿಳಿಯುತ್ತದೆ. ಸಾಧನಾ ಸಮಾವೇಶ, ಪರಿವರ್ತನಾ ರ್‍ಯಾಲಿ, ಜನಸಂಪರ್ಕ ಯೋಜನೆ ಇವು ಮೂರೂ ಪ್ರಮುಖ ಪಕ್ಷಗಳ ಅಬ್ಬರ. ಜೊತೆಗೆ ಮಾಧ್ಯಮಗಳಿಗೆ ಜಾಹೀರಾತಿನ ಸುಗ್ಗಿ. ಆರೋಪ ಪ್ರತ್ಯಾರೋಪಗಳ ಸುರಿಮಳೆ. ಜಾತಿ ರಾಜಕಾರಣ, ಧರ್ಮರಾಜಕಾರಣ ಮೂರೂ ಪಕ್ಷಗಳಲ್ಲಿ ತಾಂಡವವಾಡುತ್ತಿದೆ. ಟಿಕೇಟು ಹಂಚಿಕೆ, ಆಕಾಂಕ್ಷಿಗಳ ಪರದಾಟ ನಡೆದಿದೆ ಎಲ್ಲ ಪಕ್ಷಗಳಲ್ಲೂ. ಪಕ್ಷಾಂತರಿಗಳಿಗೆ ಗಾಳ, ಕುದುರೆ ವ್ಯಾಪಾರ ಈಗಾಗಲೇ ಪ್ರಾರಂಭವಾಗಿದೆ. ಒಟ್ಟಿನಲ್ಲಿ ಈ ಸಲ ಕರ್ನಾಟಕದ ಚುನಾವಣೆ ಕುತೂಹಲಕರ. ಕನ್ನಡಾಭಿಮಾನಿಗಳ ಮನವೊಲಿಕೆಗಾಗಿ ಪ್ರತ್ಯೇಕ ಧ್ವಜದ ಅಂಗೀಕಾರದ ಮುದ್ರೆ ನೀಡಿದ್ದಾರೆ ಮುಖ್ಯಮಂತ್ರಿ ಸಿದ್ದರಾಮಯ್ಯ. ಹಾಗೆಯೇ ಧರ್ಮರಾಜಕಾರಣ ನಡೆಸಿ ಧರ್ಮಸಂಕಟಕ್ಕೂ ಸಿಕ್ಕಿಕೊಂಡಿದ್ದಾರೆ.

✶ ✶ ✶

ಕರ್ನಾಟಕ ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ತೀರಾ ಹದಗೆಟ್ಟಿದೆ. ಲೋಕಾಯುಕ್ತ ವಿಶ್ವನಾಥ ಶೆಟ್ಟಿಯವರ ಮೇಲೆ ನಡೆದ ಹಲ್ಲೆ ಇತ್ತೀಚಿನದು. ಹಲ್ಲೆ ನಡೆಸಿದ ಆರೋಪಿಯ ಆಗ್ರಹ ಏನೇ ಇರಲಿ ಕೃತ್ಯ ಖಂಡನೀಯ. ಈ ಪ್ರಕರಣಕ್ಕೆ ಕೆಲದಿನಗಳ ಹಿಂದೆ ಐಷಾರಾಮಿ ಹೋಟೆಲೊಂದರಲ್ಲಿ ಎಮ್ಮೆಲ್ಯೇ ಪುತ್ರ ನಡೆಸಿದ ದಾಂಧಲೆ, ಕುಡಿದ ಅಮಲಿನಲ್ಲಿ ಉದ್ಯಮಿಯ ಪುತ್ರನೊಬ್ಬನನ್ನು ಹೊಡೆದು ಚಚ್ಚಿದ್ದು, ಆತ ಆಸ್ಪತ್ರೆ ಸೇರಿದ್ದು, ಆರೋಪಿಗಳು ಪರಪ್ಪನ ಅಗ್ರಹಾರ ವಾಸಿಗಳಾಗಿರುವುದು ನೆನಪಿನಿಂದ ಮಾಸಿಲ್ಲ. ಇಂಥ ಪ್ರಕರಣಗಳು ಹಾಗೂ ಹೊಡೆದಾಟ ಬಡಿದಾಟಗಳು ಮಾಮೂಲಿಯಾಗಿಬಿಟ್ಟಿವೆ. ಎರಡೂವರೆ ವರ್ಷಗಳು ಕಳೆದರೂ ಇನ್ನೂ ಕಲ್ಬುರ್ಗಿಯವರ ಹಂತಕರು ಪತ್ತೆಯಾಗಿಲ್ಲ. ಈ ಮಧ್ಯೆ ಗೌರಿ ಲಂಕೇಶ್ ಕೊಲೆ ಮಾಡಿದ ಆರೋಪಿಯನ್ನು ಬಂಧಿಸಿರುವುದಾಗಿ ಸರಕಾರ ಕೊಚ್ಚಿಕೊಳ್ಳುತ್ತಿದೆ. ನ್ಯಾಯಾಲಯದಲ್ಲಿ ಸಾಬೀತಾಗುವವರೆಗೆ ಏನೂ ಹೇಳಲಿಕ್ಕಾಗದು. ಸದ್ಯಕ್ಕೆ ಪೊಲೀಸರ ವಶದಲ್ಲಿರುವ ಈತ ಮಂಪರು ಪರೀಕ್ಷೆಗೆ ಒಳಗಾಗುತ್ತಿದ್ದಾನೆ. ಚುನಾವಣೆ ಸಮೀಪಿಸುತ್ತಿದ್ದ ಹಾಗೇ ಇದೂ ಒಂದು ಕುತಂತ್ರ ಇರಬಹುದೇನೋ ಎಂಬ ಆತಂಕ ಜನರಲ್ಲಿದೆ. ಈ ಮಧ್ಯೆ ಪೊಲೀಸು ಅಧಿಕಾರಿಗಳ ಮೇಲೆ ರಾಜಕೀಯ ಒತ್ತಡ ಹೇರಲಾಗುತ್ತಿದೆ ಎನ್ನುವ ಗಂಭೀರ ಆರೋಪವನ್ನು ಪೊಲೀಸು ಉನ್ನತಾಧಿಕಾರಿಯೇ ಮಾಡಿದ್ದಾರೆ. ಮುಖ್ಯಮಂತ್ರಿ ಸಿದ್ದರಾಮಯ್ಯ ಇದರಿಂದ ಅಧಿಕಾರಿಗಳ ಮೇಲೆ ಗರಂ ಆಗಿದ್ದಾರೆ. ಅಧಿಕಾರಿಗಳ ಸಭೆ ಕರೆದು ಎಚ್ಚರಿಕೆ ನೀಡಿದ್ದಾರೆ.

✶ ✶ ✶

ದಯಾನಿಧಿ ಮತ್ತು ಕಲಾನಿಧಿ ಮಾರನ್ ಬಂಧುಗಳು ಸರ್ವಥಾ ತಪ್ಪಿತಸ್ಥರಲ್ಲವೆಂದು ಸಿ.ಬಿ.ಐ. ನ್ಯಾಯಾಲಯ ಘೋಷಿಸಿದೆ. ಅವರ ಮೇಲಿನ ಆಪಾದನೆಗಳನ್ನು ಸಾಬೀತುಪಡಿಸಲು ಸಿಬಿಐ ಪೊಲೀಸರು ಸೋತುಹೋದರಂತೆ. ಹೀಗೆ ಸೋಲಲು ಸಹ ಅದೆಷ್ಟು ವರ್ಷಗಳು ಬೇಕು! ನಮ್ಮ ನ್ಯಾಯಮಂದಿರಗಳು ಅಷ್ಟು ಸೂಕ್ಷ್ಮವಾಗಿ ವಿಚಾರಣೆ ನಡೆಸುತ್ತವೆಂದು ಒಪ್ಪಲೇಬೇಕಲ್ಲವೇ? ಏನೋ ಬೇಕಾಬಿಟ್ಟಿ ತೀರ್ಪುಕೊಡುವುದಾದರೆ ಬೇಗ ಆ ಕೆಲಸ ಮಾಡಿಬಿಡುತ್ತಿದ್ದರೆಂದು ಭಾವಿಸಬೇಕಾಗಿದೆ. ಎಷ್ಟೊಂದು ಕೋಟಿಗಳ ಹಗರಣ, ಎಷ್ಟು ಚಮತ್ಕಾರ, ಎಂತಹ ಮೋಸ ಎಂದೆಲ್ಲಾ ಮಾಧ್ಯಮಗಳು ತಿಂಗಳುಗಟ್ಟಲೆ ಇನ್ನೇನು ಆಪಾದಿತರನ್ನು ಘೋರ ಶಿಕ್ಷೆಗೆ ಗುರಿ ಮಾಡುವುದೊಂದೇ ಬಾಕಿ ಎಂಬಂತೆ ಅಬ್ಬರಿಸಿದ್ದವು. ಮಾರನ್ ಸೋದರರು ಈಗ ಮಾನನಷ್ಟ ಮೊಕದ್ದಮೆಯನ್ನು ಹೂಡುವಂತಿದ್ದರೆ ಇನ್ನೊಂದಷ್ಟು ದಿನ ರೋಚಕ ಸುದ್ದಿಗಳನ್ನು ಮಾಧ್ಯಮಗಳು ಬಿರುಸಿನಿಂದ ಬಿತ್ತರಿಸುತ್ತಿದ್ದವು. ಅಂತಹ ಸದವಕಾಶ ತಪ್ಪಿಹೋಗಿದೆ. ಆದರೆ ಜನ ಹತಾಶರಾಗಬೇಕಿಲ್ಲ, ಏಕೆಂದರೆ ಬೇರೊಂದು 'ಮನರಂಜನೆ' ನೀಡಲು ಸಿಬಿಐ ಸಿದ್ಧವಾಗುತ್ತಿದೆ. ಈಗಿನ ತೀರ್ಪನ್ನು ಪ್ರಶ್ನಿಸಿ ಇನ್ನೂ ಮೇಲಿನ ನ್ಯಾಯಾಲಯಕ್ಕೆ ತೆರಳಿ ಅಲ್ಲಿ "ನ್ಯಾಯ" ದೊರಕಿಸಲು ಆ ತನಿಖಾ ಸಂಸ್ಥೆಯು ಸಜ್ಜಾಗುತ್ತಿದೆ. ಜೊತೆಗೆ ಕಲ್ಲಿದ್ದಲು ಗಣಿಗಳನ್ನು ಖಾಸಗಿ ಕಂಪನಿಗಳಿಗೆ ನೀಡುವಾಗ ಸ್ವತಃ ಅಂದಿನ ಪ್ರಧಾನಿ ಮನಮೋಹನ ಸಿಂಗ್ 'ಅಪರಾಧ' ವೆಸಗಿದ್ದಾರೆಂಬ ಆಪಾದನೆಯನ್ನು ಹೊರಿಸಿ ಅವರನ್ನು ತನಿಖೆಗೆ ಒಳಪಡಿಸಿದಾಗ ಮುಂದಿನ ಕೆಲವು ತಿಂಗಳುಗಳಲ್ಲಿ 'ಬಿಸಿ ಸುದ್ದಿ' ಇದ್ದೇ ಇರುತ್ತದೆಂದು ಖಾತ್ರಿಯಾಗಿದೆ. ಅಮಿತ್ ಷಾ ಮೇಲಿನ ಆಪಾದನೆಯ ವಿಚಾರಣೆಯು ಅಷ್ಟು ವಿಪುಲವಾಗಿ ದೀರ್ಘಕಾಲ 'ಕಥಾವಸ್ತು' ಆಗುವ ಮೊದಲೇ ನ್ಯಾಯಾಲಯವು ಅವರನ್ನು ಖುಲಾಸೆ ಮಾಡಿ ಮಾಧ್ಯಮದವರಿಗೆ ಬೇಸರ ಉಂಟಾಗಿಸಿಬಿಟ್ಟಿತು. ಆದರೇನಂತೆ, ನ್ಯಾಯಮೂರ್ತಿ ಲೋಯಾ ಸಾವು ಭರ್ಜರಿ ಸುದ್ದಿ ಮಾಡುತ್ತಿದೆ. ಏನಿಲ್ಲವೆಂದರೂ ವಕೀಲ ದುಷ್ಯಂತ ದವೆ ಅವರ ಮೊನಚಾದ ಪ್ರಖರ ವಾಗ್ಬಾಣಗಳನ್ನು ಪತ್ರಿಕೆಗಳಲ್ಲಿ ಐದಾರು ನಿಮಿಷ ಓದಿ ಸುಖಿಸಬಹುದು. ನಮ್ಮ ದೇಶದ ತನಿಖಾ ತಂಡಗಳು ಸದಾ ಕ್ರಿಯಾಶೀಲವಾಗಿ ಏನಾದರೊಂದು ಹೊಸ ಸವಾಲನ್ನು ಎದುರಿಸುತ್ತಿರುತ್ತವೆ. ಬೆಟ್ಟ ಅಗೆಯಲು ಬಹಳ ಸಮಯ ಹಿಡಿಯುತ್ತದೆ. ಕಡೆಗೆ ಇಲಿಯೂ ಸಿಕ್ಕದಿದ್ದರೆ ಆ ತಂಡಗಳೇನು ಮಾಡಿಯಾವು! ನಮ್ಮ ರಾಜ್ಯದಲ್ಲಿ ಸದ್ಯಕ್ಕೆ ಶಾಸಕ ಹ್ಯಾರಿಸ್‌ರ ಪುತ್ರನ ಸರದಿ. ಅದಿನ್ನೂ ಆರಂಭಿಕ ಹಂತದಲ್ಲೇ ಎರಡು ವಾರಗಳನ್ನು ಕಳೆದಿದೆ. ಮಂಗಳೂರು ಪಬ್ ದಾಳಿಯಲ್ಲಿ ಕೂಡ ಯಾರೂ ತಪ್ಪಿತಸ್ಥರಲ್ಲವೆಂಬ ತೀರ್ಪು ಹೊರಬಿದ್ದಿದೆ. ಅಂದಿನ ದಿನಗಳಲ್ಲಿ, ಪ್ರಮೋದ ಮುತಾಲಿಕರ ಆಮೋದ–ಪ್ರಮೋದಗಳು ಮುಗಿದುವು, ಅವರ ಸೈನ್ಯದೊಡನೆ ಕೃಷ್ಣನ ಜನ್ಮಭೂಮಿಗೆ ತೆರಳಿಬಿಡುವಂತೆ ಮಾಡಲಾಗುತ್ತದೆ ಎಂಬ ಗುಲ್ಲು ಎಲ್ಲೆಲ್ಲೂ ಹರಡಿತ್ತು. ಪೊಲೀಸರು ಸಹ ಅಂತಹ ಭಾವನೆಯನ್ನು ಕೆರಳಿಸುವಂಥ ಹೇಳಿಕೆಗಳನ್ನು ಕೊಡುತ್ತಿದ್ದರು. ಈಗ ನೋಡಿದರೆ ಅದು 'ಠುಸ್ ಪಟಾಕಿ' ಆಗಿಹೋಯಿತು. ಇಲ್ಲಿಯೂ ಮೇಲ್ಮನವಿಯ ಅವಕಾಶವಿನ್ನೂ ಇರುವುದರಿಂದ ಪ್ರಕರಣವು ಮಾಧ್ಯಮಗಳಿಗೆ ವಸ್ತುವಾಗಬಲ್ಲದು. ಮಂಗಳೂರು ಮೊಕದ್ದಮೆಯಲ್ಲಿ ಸಾಕ್ಷಿಗಳಲ್ಲಿ ಬಹುಂದಿ 'ಉಲ್ಟಾ ಹೊಡೆದರು' ಎಂದು ಹೇಳಲಾಗುತ್ತಿದೆ. ನ್ಯಾಯಾಲಯಗಳಿಗೆ ಹೋಗಿ ಸಾಕ್ಷಿ ಹೇಳುವುದಕ್ಕೆ ಎಷ್ಟು ಬಾರಿ ಕೋರ್ಟಿಗೆ ಹೋಗಿಬರಬೇಕಾಗುತ್ತದೆಂಬುದನ್ನು ನೆನೆದೇ ಅವರೆಲ್ಲಾ ತೀರಾ ಸುಸ್ತಾಗಿಬಿಟ್ಟರೋ ಏನೋ, ತಿಳಿಯುತ್ತಿಲ್ಲ. ಒಟ್ಟಿನಲ್ಲಿ ನ್ಯಾಯಮಂದಿರಗಳು ನ್ಯಾಯವನ್ನು ಕೊಟ್ಟಾದ ಮೇಲೆ ಮುತಾಲಿಕ್‌ರಂತಹ ಸುಸಂಸ್ಕೃತರು "ನಾನು ಮೊದಲೇ ಹೇಳಿರಲಿಲ್ಲವೇ? ನಾವು ಪರಮ ಸಾಧು ಸಂಸ್ಕಾರದವರು" ಎಂಬ ಹೇಳಿಕೆಯನ್ನು ನೀಡಲು ಅವಕಾಶವಿದೆ. ಕಟ್ಟಾ ಸುಬ್ರಹ್ಮಣ್ಯ ನಾಯ್ಡು ಎಂಬುವವರ ಹೆಸರೇ ಮರೆತುಹೋಗಿದೆ. ಇನ್ನು ಅವರ ತಥಾಕಥಿತ ಅಪರಾಧವೇನೆಂಬುದು ನೆನಪಿನಲ್ಲಿರಲು ಶಕ್ಯವೇ? ಆ ಮಹಾತ್ಮರು ಈಗೀಗ ಎಲ್ಲೆಡೆ ಕಾಣಿಸಿಕೊಳ್ಳುತ್ತಿದ್ದಾರಂತೆ; ಚುನಾವಣೆಯ ಕಾಲವಲ್ಲವೇ? ಅಂದ ಹಾಗೆ, ಅವರ ಸಕ್ಕರೆ ಕಾಯಿಲೆ ಶಮನವಾಯಿತೇ? ಮಾಧ್ಯಮಗಳು ಅದನ್ನಾದರೂ ಹೇಳಿ ಸಮಾಧಾನದ ಭಾವವನ್ನು ಹಂಚಬಹುದು. ಇವುಗಳ ನಡುವೆ ವೆಂಕಟೇಶ್ವರನಿಗೆ ೪೫ ಕೋಟಿ ರೂಪಾಯಿಯ ಕಿರೀಟ ತೊಡಿಸಿದ ಬಳ್ಳಾರಿ ಭೂಪನ ವಿಚಾರವೇನೋ ತಿಳಿಯದಾಗಿದೆ. ಕೋಟಿ ಕಿರೀಟ ತೊಟ್ಟ ಬೆಟ್ಟದ ಮೇಲಿನ ಭಗವಂತ ಸದರಿ 'ಆಪಾದಿತ'ರನ್ನು ಕಾಪಾಡದಿರುತ್ತಾನೆಯೇ? ಅಂತೂ ನಮ್ಮ ನ್ಯಾಯ ವ್ಯವಸ್ಥೆಯು ವೇದಾಂತವು ಪ್ರತಿಪಾದಿಸುವ 'ನಿತ್ಯತ್ವ'ದಲ್ಲಿ ನಂಬಿಕೆ ಇರಿಸಿದೆ. "ಇಂದೇ ಎಂಬ ಅವಸರ ಬೇಡ, ಕಾಲವು ನಿರವಧಿಯ ಲಕ್ಷಣ ಹೊಂದಿದೆ" ಎಂಬ ತತ್ವವು ತಂಗಾಳಿ ಯಂತಿದೆ. ನಮ್ಮ ರಾಜ್ಯದ ಲೋಕಾಯುಕ್ತ ಈಚೆಗೆ ಹಲ್ಲೆಗೊಳಗಾದರು. ಕ್ಷೇಮವಾಗಿ ಸ್ವಗೃಹಕ್ಕೆ ಆಸ್ಪತ್ರೆಯಿಂದ ಹಿಂದಿರುಗಿದ್ದಾರೆಂಬುದು ಸಿಹಿ ಸುದ್ದಿ. ಮಾನ್ಯ ಶ್ರೀ. ಸಂತೋಷ ಹೆಗ್ಡೆಯವರು ಲೋಕಾಯುಕ್ತ ರಾಗಿದ್ದಾಗ ಪ್ರತಿನಿತ್ಯ ಯಾರನ್ನಾದರೂ ಹಿಡಿದು ಅವರ ಆಸ್ತಿಯ ವಿವರಗಳನ್ನು ಸಾರ್ವಜನಿಕರಿಗೆ ಮುಟ್ಟಿಸುತ್ತಿದ್ದರು. ಹಾಗೆ ಬಲೆಗೆ ಬಿದ್ದಿದ್ದವರ ನಂತರದ ಬೆಳವಣಿಗೆಗಳು ಯಾರಿಗೂ ಆಸಕ್ತಿ ಹುಟ್ಟಿಸಿಲ್ಲದಿರುವುದು ಖೇದಕರ. ಯಾರದ್ದಾದರೂ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತೆ? ಅದೊಂದು ಯಕ್ಷಪ್ರಶ್ನೆ. ಸದ್ಯಕ್ಕೆ ಕಾರ್ತಿ ಎಂಬ

ಮಹಾನುಭಾವನು ಮಾಧ್ಯಮಗಳಲ್ಲಿ ಪ್ರಸಿದ್ಧಿ ಹೊಂದಿದ್ದಾನೆ. ಮಾರನ್ ತಾನೇ ಮಾರನಂತೆ ಕಂಗೊಳಿಸುತ್ತಿರುವಾಗ ಕಾರ್ತಿ ಭಯಭೀತ ನಾಗುವುದಿಲ್ಲ; ಆತನಿಗೂ ಕೆಲವು ವರ್ಷಗಳ ನಂತರ ತಂಗಾಳಿಯ ಸವಿ ದೊರಕಬಹುದೇನೋ. ಇನ್ನು ವಿಜಯ ಮಲ್ಯ, ನೀರವ ಮೋದಿ, ಚೋಕ್ಸಿ ಮುಂತಾದವರ ಮಾತೇ ಬೇಡ. ಅವರೆಲ್ಲಾ ಎಲ್ಲಿದ್ದಾರೋ ಅಲ್ಲೇ ನಮ್ಮ ದೇಶದ ಸಂಪತ್ತನ್ನು ಭೋಗಿಸುತ್ತಾ ತಮ್ಮ ಉದ್ದಿಮೆಗಳನ್ನು ಬೆಳೆಸಲು ಅಡ್ಡಿಯಿಲ್ಲವೆಂದು ತೋರುತ್ತದೆ. ನೀರವ ಮೋದಿಯು ತನ್ನ ಹೆಸರಿಗೆ ತಕ್ಕಂತೆ ಸದ್ದು ಮಾಡದೆ ದೇಶದಿಂದ ಕಾಲ್ಕಿತ್ತಿದ್ದಾನೆ. 'ನೀರವ' ಎಂದರೆ ನಿಶ್ಶಬ್ದ. ಅವನಿಗೆ ಅನುವು ಮಾಡಿಕೊಟ್ಟವರಿಗೆಲ್ಲಾ ಧಿಕ್ಕಾರವಿರಲಿ.

* * *

ಉತ್ತರ ಪ್ರದೇಶ ಮತ್ತು ಬಿಹಾರ ಇನ್ನೇನು ದೇಶದ ಆಸೆಯನ್ನು ಚಿಗುರಿಸಿಬಿಟ್ಟವೋ ಎಂಬಂತಹ ಉದ್ವೇಗದ ಮಾತುಗಳು ಕೇಳಿಬರುತ್ತಿವೆ. ಪತ್ರಿಕೆಗಳ ಅಂಕಣಕಾರರಿಗೆ ಇದೊಂದು ಸುಗ್ಗಿ; ದೃಶ್ಯ ಮಾಧ್ಯಮ ಗಳಲ್ಲಿ ಚೇತೋಹಾರಿ ಚರ್ಚೆಗಳು ಸಹ ನಡೆದು ಹೋಗುತ್ತವೆ. "ನಾವು ಸ್ವಲ್ಪ ಅಲಸಿಗಳಾದೆವು, ಹೇಗೂ ಗೆಲ್ಲುತ್ತೇವೆಂಬ ಭಾವನೆ ಅದಕ್ಕೆ ಕಾರಣ" ಎಂದು "ಯೋಗಿ" ಆದಿತ್ಯನಾಥ ಹೇಳಿದ್ದಾರೆ. "ದಯವಿಟ್ಟು ಹೀಗೇ ಅಲಸಿಗಳಾಗಿರಿ ಮತ್ತು ದೇಶಕ್ಕೆ ಒಳ್ಳೆಯದನ್ನು ಮಾಡಿ" ಎಂದಷ್ಟೇ ನಾವು ಅವರಲ್ಲಿ ಕೇಳಿಕೊಳ್ಳ ಬಹುದು. ಅಂದರೆ, ಯೋಗಿಯವರಿಗೆ ಜನರ ಮನಸ್ಸು ಅಷ್ಟು ಮುಖ್ಯವಲ್ಲ, ಅವರೆಲ್ಲೋ ನಿದ್ದೆಯಲ್ಲಿ ಕಮಲದ ಮೇಲೆ ಒತ್ತುವುದನ್ನು ಮರೆತಿದ್ದಾರೆಂಬುದು ಅವರ ಸಮಜಾಯಿಷಿ. ನಮ್ಮ ದೇಶದ ರಾಜಕೀಯ ಪಕ್ಷಗಳು ಕೆಲಕಾಲ ತಮ್ಮ ತಮ್ಮ ಸಿದ್ಧಾಂತಗಳನ್ನು ಇಂದಿನ ಅತ್ಯಂತ ಪ್ರಮುಖ ಕ್ರಿಯೆಗಳಿಗೆ ಒತ್ತಾಸೆ ನೀಡುವಂತೆ ವಿಶ್ಲೇಷಿಸಿಕೊಂಡರೆ ಪ್ರಧಾನಿ ಮಾನ್ಯ ಶ್ರೀ. ಮೋದಿಯವರ "ದೇಹಭಾಷೆ"ಯಿಂದ (ಈಗೆಲ್ಲಾ ಚಿಂತನೆಗಿಂತಲೂ 'ಬಾಡಿ ಲ್ಯಾಂಗ್ವೇಜ್' ಪ್ರಮುಖ ವಿಶ್ಲೇಷಣಾ ಸಾಧನವಾಗಿದೆ) ಸ್ವಲ್ಪ ಕಾಲ ಮುಕ್ತರಾಗಬಹುದೆನಿಸುತ್ತದೆ. ಸೋದರಿ ಮಾಯಾವತಿ ಮತ್ತು ಭಾಯಿ ಅಖಿಲೇಶ್ ಅದನ್ನು ಪ್ರಾಯೋಗಿಕ ವಾಗಿ ತೋರಿಸಿಕೊಟ್ಟಿದ್ದಾರೆ. ಉಪಚುನಾವಣೆಗಳ ಫಲಿತಾಂಶವು ಅಷ್ಟೊಂದು ಉತ್ಸಾಹವನ್ನು ಚಿಮ್ಮಿಸ ಬಾರದು. ಏಕೆಂದರೆ ಅದು ಮೂರು ಕ್ಷೇತ್ರಗಳಿಗೆ ಸೀಮಿತವಾಗಿದ್ದ ಚುನಾವಣೆ. ಒಂದಂತೂ ನಿಜ. ಶೇಕಡ ೩೪.೩ ಎಂಬುದು ಖಂಡಿತ ಶೇಕಡ ೫೧ಕ್ಕೆ ಸಮನಲ್ಲ. ಮಾನ್ಯ ಮೋದಿಯವರದು ಶೇ. ೫೧ ಮುಟ್ಟಲು ಇನ್ನೂ ಶೇಕಡ ೧೭ ಬಾಕಿ ಇದೆ. ಬೆಹೆನ್‌ಜಿ ಮತ್ತು ಭಾಯಿ ಜೊತೆಯಾದಂತೆ ಇನ್ನಿತರರೂ ಆ ಹಾದಿ ಹಿಡಿದರೆ ದೊಡ್ಡ ದುರಂತದಿಂದ ಪಾರಾಗಲು ಸಾಧ್ಯವಿದೆಯೆಂಬುದಂತೂ ಒಂದರ್ಥ ದಲ್ಲಿ ಖಚಿತವಾಗಿದೆ. ರಾಹುಲ ಗಾಂಧಿಯನ್ನೇ ಪ್ರಧಾನಿ ಮಾಡಬೇಕೆಂಬ ಮೂರ್ಖತನವು ಅಡ್ಡಿ ಉಂಟುಮಾಡದಿದ್ದರೆ ಇದನ್ನು ಸಾಧಿಸಬಹುದಾಗಿದೆ. ಸಿದ್ಧಾಂತ ಶಿಖಾಮಣಿಗಳಾದ ಕಮ್ಯುನಿಸ್ಟರು ಸಹ ಪ್ರಸ್ತುತ ಸಂದರ್ಭದ ಸಾಧ್ಯತೆಗಳನ್ನು ಉಪಚುನಾವಣೆ ಗಳ ಮೈತ್ರಿಕೂಟದ ಕೊಡುಗೆಯಿಂದ ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಉಳಿದ ಒಂದು ವರ್ಷದಲ್ಲಿ ಇಂತಹ ಮೈತ್ರಿಯ ವರ್ಧನೆಗೆ ಮುಂದಾಗುವುದು ಆರೋಗ್ಯಕರವೆನಿಸುತ್ತದೆ. ಬೆಹೆನ್–ಭಾಯಿ ಮೈತ್ರಿಕೂಟವು ಮತ್ತೊಂದು ಮುಖ್ಯ ವಿಷಯವನ್ನು ಅನಾವರಣಗೊಳಿಸಿದೆ. ನಮ್ಮ ದೇಶದ ಈಗಿನ ಚುನಾವಣಾ ಪದ್ಧತಿಯಲ್ಲಿ ಹತ್ತು ಜನರಲ್ಲಿ ಯಾರು ಅತ್ಯಧಿಕ ಮತಗಳನ್ನು ಗಳಿಸುತ್ತಾರೋ ಅವರೇ ವಿಜಯಿ. ಆ ವಿಜಯಿಗೆ ಮತ ಚಲಾಯಿಸಿದವರ ಪೈಕಿ ಶೇಕಡ ೧೧ ಮಂದಿ ಬೆಂಬಲ ನೀಡಿದ್ದರೂ ಸಾಕು, ಆ ವಿಜಯಿಯು ನೂರು ಮಂದಿಯ ಪ್ರತಿನಿಧಿ! ಇದೆಂತಹ ಪ್ರಜಾಪ್ರಭುತ್ವ? ನಿಜವಾದ ಅರ್ಥದಲ್ಲಿ ಬಹುಮತವು ಸಾಬೀತಾಗುವುದಕ್ಕೆ ದೇಶದ ಒಟ್ಟು ಮತಗಳಲ್ಲಿ ಅನುಪಾತ ಪ್ರಮಾಣದ ಪ್ರಕಾರ ಪ್ರಾತಿನಿಧ್ಯವಿದ್ದಾಗ ಮಾತ್ರ ಸಾಧ್ಯತೆಯುಂಟು. ಅಲ್ಲಿ ಯಾರ ಮತವೂ ನಿರರ್ಥಕವಾಗುವುದಿಲ್ಲ ಮತ್ತು ಚುನಾಯಿತರು ನಿಜವಾದ ಪ್ರತಿನಿಧಿಗಳಾಗುತ್ತಾರೆ. ಅಂತಹ ವ್ಯವಸ್ಥೆಯು ಇಲ್ಲದಿದ್ದಾಗ ಬೆಹೆನ್–ಭಾಯಿ ಮಾದರಿಯ ಮೈತ್ರಿಕೂಟವು ಅನುಪಾತ ಪ್ರಮಾಣದ ಪ್ರಾತಿನಿಧ್ಯವನ್ನು ತಕ್ಕಮಟ್ಟಿಗೆ ಕಲ್ಪಿಸಿಕೊಡುತ್ತದೆ. ನಮ್ಮ ದೇಶದಲ್ಲಿ ಫ್ಯಾಸಿಸಂ ಬೇರು ಬಿಡುತ್ತಿದೆಯೋ ಇಲ್ಲವೋ ಎಂಬುದು ಜಿಜ್ಞಾಸಾ ವಿಷಯವಾಗಿದೆ. ಅದಕ್ಕೆ ಯಾವ ಉತ್ತರ ಕೊಟ್ಟುಕೊಂಡರೂ ಸರಿಯೇ, ದೇಶವನ್ನು ಬೌದ್ಧಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ದಿವಾಳಿ ಮಾಡುತ್ತಿರುವ ಪಕ್ಷಕ್ಕೆ ಮತ್ತೆ ಕೇಂದ್ರಾಡಳಿತದ ಅವಕಾಶ ಕೂಡದು. ಇದು ಮೂಲಭೂತ ಆಕಾಂಕ್ಷೆ. ವಿಶಾಲ ತಳಹದಿಯ ಮೈತ್ರಿಕೂಟವು ಇದನ್ನು ಆಗುಮಾಡಬಲ್ಲದು ಮತ್ತು ನೈಜ ಪ್ರಮಾಣದ ಪ್ರಾತಿನಿಧ್ಯ ನೀಡಬಲ್ಲದು. ರಾಜಕೀಯ ಪಕ್ಷಗಳು ಮತ್ತು ರಾಜಕೀಯೇತರ ಸಂಸ್ಥೆಗಳು ಈ ದಿಕ್ಕಿನಲ್ಲಿ ಕಾರ್ಯೋನ್ಮುಖರಾಗಬೇಕು ಎಂಬುದು ಉಪಚುನಾವಣಾ ಫಲಿತಾಂಶದ ಆದೇಶ.

ನಮ್ಮ ರಾಜ್ಯದಲ್ಲಿ ಸದ್ಯದಲ್ಲೇ ಶಾಸನಸಭಾ ಚುನಾವಣೆ ನಡೆಯಲಿದೆ. ನಾವೇ ಗೆಲ್ಲುತ್ತೇವೆಂದು ಹೇಳುವ ಕಾಂಗ್ರೆಸ್ ಮತ್ತು "ಯಾರು ಎಷ್ಟೇ ಸ್ಥಾನ ಪಡೆಯಲಿ ನಾವೇ ನಿರ್ಧಾರಕ ಶಕ್ತಿ" ಎನ್ನುವ ಮಾಜಿ ಪ್ರಧಾನಿ ಶ್ರೀ. ದೇವೇಗೌಡ, ಇವೆರೆಡರ ಪರಿಣಾಮವಾಗಿ ಪರಪ್ಪನ ಅಗ್ರಹಾರದ ವೀರರು ಸರ್ಕಾರದ ಚುಕ್ಕಾಣಿ ಹಿಡಿಯುವಂತಾಗಬಾರದು. ಈಚೆಗೆ ಈ ಬಗ್ಗೆ ವ್ಯಾಪಕ ಚರ್ಚೆಗಳು ನಡೆಯುತ್ತಿವೆ. ಮಾನ್ಯ ಶ್ರೀ. ರಾಘವೇಂದ್ರ ಕುಷ್ಟಗಿಯವರ ಸಾರಥ್ಯದಲ್ಲಿ "ಸಂವಿಧಾನ ಉಳಿವಿಗಾಗಿ ಕರ್ನಾಟಕ" ಎಂಬ ಚಳವಳಿ ಆರಂಭವಾಗಿದೆ. ಅದರಲ್ಲಿ ನಾಲ್ಕು ಮೂಲಭೂತ ಆಶಯಗಳಿಗೆ ಒತ್ತುಕೊಟ್ಟಿದ್ದಾರೆ. ಅವುಗಳಲ್ಲಿ ಒಂದು ಹೀಗಿದೆ: "ನಮ್ಮ ಮೊದಲ ಆದ್ಯತೆ ಜನರ ದನಿಯನ್ನು ನಾಳೆಯ ವಿಧಾನಸಭೆಯಲ್ಲಿ ಎತ್ತಬಲ್ಲ ಜನಪರ ಅಭ್ಯರ್ಥಿಗಳೇ, ಆದರೆ ಈ ಪ್ರಯತ್ನವನ್ನು ಭ್ರಮೆ ಇಲ್ಲದೆ ವಾಸ್ತವಿಕ ನೆಲೆಗಟ್ಟಿನ ಮೇಲೆ ನಡೆಸಬೇಕು. ಗೆಲ್ಲುವ ಸಾಧ್ಯತೆ ಇರುವ, ಜನರ ನೋವಿಗೆ ದನಿಯಾಗಬಲ್ಲ ಅಭ್ಯರ್ಥಿ ಯಾವುದೇ ಪರ್ಯಾಯ ಪಕ್ಷಕ್ಕೆ ಸೇರಿದ್ದರೂ ಸ್ವತಂತ್ರವಾಗಿ ಸ್ಪರ್ಧಿಸುತ್ತಿದ್ದರೂ ತಾರತಮ್ಯ ಮಾಡದೆ ಸಂಪೂರ್ಣ ಬೆಂಬಲ ನೀಡಬೇಕು. ಅಂತಹವರನ್ನು ಗುರುತಿಸಿ ಅವರ ಗೆಲುವಿಗಾಗಿ ಎಲ್ಲರೂ ಸೇರಿ ಶ್ರಮಿಸಬೇಕು." ಈ ಸೂತ್ರವನ್ನು ಎಡಪಕ್ಷಗಳು ಸಹ ಅಳವಡಿಸಿಕೊಳ್ಳಲು ಸಾಧ್ಯವಿದೆ. ತಮ್ಮ ಪಕ್ಷಗಳ ಪ್ರಾತಿನಿಧ್ಯಕ್ಕೂ ಇದು ಪೂರಕವಾಗಬಲ್ಲದು. "ಉದ್ಯೋಗಕ್ಕಾಗಿ ಯುವಜನರು" ಎಂಬ ಇನ್ನೊಂದು ಬಣವು ತನ್ನ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದೆ. ಅದು ಸಮಗ್ರ ಬೆಳವಣಿಗೆಯನ್ನು ದೃಷ್ಟಿಯಲ್ಲಿಟ್ಟು ಕೊಂಡು ಅಭಿವೃದ್ಧಿ ಯೋಜನೆಯೊಂದನ್ನು ಮುಂದಿಟ್ಟಿದೆ. ಒಟ್ಟಿನಲ್ಲಿ ಪ್ರಜಾಪ್ರಭುತ್ವವಾದಿ ಪಕ್ಷಗಳು, ಬಣಗಳು ಮತ್ತು ವ್ಯಕ್ತಿಗಳು ಜನವಿರೋಧಿ ನೀತಿಗಳಿಗೆ ಹೆಸರಾಗಿರುವ, ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ, ಪಕ್ಷಕ್ಕೆ ಯಾವುದೇ ಕಾರಣಕ್ಕೂ ನಮ್ಮ ರಾಜ್ಯವನ್ನು ಒತ್ತೆ ಇಡಕೂಡದು.

* * *

ಕೇಂದ್ರ ಸಚಿವೆ ಶ್ರೀಮತಿ. ಸ್ಮೃತಿ ಇರಾನಿ ಮತ್ತು ಪ್ರಸಾರ ಭಾರತಿ ಅಧ್ಯಕ್ಷ ಶ್ರೀ. ಸೂರ್ಯಪ್ರಕಾಶ ಅವರ ನಡುವಿನ ಮುಸುಕಿನ ಗುದ್ದಾಟವು ಮುಗಿಯಿತೇ, ಹಾಗಿದ್ದರೆ ಪರಸ್ಪರ ಸಂಘರ್ಷವನ್ನು ಹೇಗೆ ಪರಿಹರಿಸಿಕೊಂಡರು ಎಂಬುದು ವರದಿಯಾಗಿಲ್ಲ. ಇಬ್ಬರೂ ಮಹಾ ಹುದ್ದರಿಗಳು, ಇಬ್ಬರೂ ತಾವು ಪ್ರಧಾನಿಗೆ ಆಪ್ತರೆಂದು ಘೋಷಿಸಿಕೊಳ್ಳುವವರು. ಅವರ ವ್ಯಾಜ್ಯದ ವಿವರಗಳಲ್ಲಿ ನಾವೇನೂ ಆಸಕ್ತಿ ಹೊಂದ ಬೇಕಾಗಿಲ್ಲ. ಆದರೆ ಇಬ್ಬರೂ ಒಂದೇ ಹುನ್ನಾರದವರು ಎಂಬುದನ್ನು ತಿಳಿಯಬೇಕು. ಪ್ರಸಾರ ಭಾರತಿ ಅಧ್ಯಕ್ಷರು ದೇಶದ ಪತ್ರಿಕೆಗಳಲ್ಲಿ ನಿಗದಿಯಾಗಿ ಲೇಖನಗಳನ್ನು ಬರೆಯುವ ಅವಕಾಶ ಕಲ್ಪಿಸಿಕೊಂಡಿದ್ದಾರೆ ಮತ್ತು ಆಕಾಶವಾಣಿಯಲ್ಲಿ ಹಿಂದಿಗೆ ಪ್ರಾಶಸ್ತ್ಯ ನೀಡಿ ದಕ್ಷಿಣ ಭಾರತದ ಮೇಲೆ ಆ ಭಾಷೆಯನ್ನು ಹೇರಿ ಶಾಭಾಸ್‌ಗಿರಿ ಪಡೆದುಕೊಳ್ಳುತ್ತಿದ್ದಾರೆ. 'ಭುವನದ ಭಾಗ್ಯ' ಎಂಬ ಸತ್ವರಹಿತ ಪ್ರಸಾರದಲ್ಲಿ ಶಿವಸ್ತೋತ್ರ ಸಹ ಹಿಂದಿಯದೇ ಆಗಿರುತ್ತದೆಂಬುದು ಸ್ವಾರಸ್ಯಕರ. ಜೊತೆಗೆ ಮೌಢ್ಯದ ಮತ್ತು ಮತಧರ್ಮೀಯ ಪ್ರಚಾರಕ್ಕೂ ಆಕಾಶವಾಣಿ ಯನ್ನು ಬಳಸಿಕೊಳ್ಳುತ್ತಿದ್ದಾರೆ. ದಕ್ಷಿಣ ಭಾರತದವರ 'ದೇಶಭಕ್ತಿ'ಗೆ ಇದೊಂದು ನಮೂನೆ ಎಂದು ಕೊಂಡಿದ್ದಾರೋ ಏನೋ! ಈ ಅಧ್ಯಕ್ಷರ ಅಗಾಧ ತಿಳಿವಳಿಕೆಯ ಪ್ರಕಾರ ಭಾರತದ ಇತಿಹಾಸದ ರಮ್ಯತೆಯನ್ನು ಮುಕ್ಕುಗೊಳಿಸಿರುವವರು ಮಾರ್ಕ್ಸ್ ವಾದಿಗಳು! ಮಾರ್ಕ್ಸ್‌ವಾದಿಗಳಿಗೆ ಅನಿರೀಕ್ಷಿತವಾಗಿ ಅಷ್ಟೊಂದು ಸಂಖ್ಯಾಬಲ ನೀಡಿರುವ ಅವರ ಸೌಜನ್ಯ ಮೆಚ್ಚುವಂಥದು. ಆದರೆ ಇತಿಹಾಸವು ಯಾರ ಏಕಸ್ವಾಮ್ಯದಲ್ಲೂ ಇರಲಾರದು. ವಾಮದೇವ ಶಾಸ್ತ್ರಿ ಉರುಫ್ ಡೇವಿಡ್ ಫ್ರಾಲಿ ಮತ್ತು ಫ್ರಾನ್ಸಿನ ಗೋತಿಯೆ ಹೇಳುವುದೇ ಶ್ರೀ. ಸೂರ್ಯಪ್ರಕಾಶರ ಬೌದ್ಧಿಕ ಪ್ರಕಾಶಕ್ಕೆ ತೈಲವನ್ನೊದಗಿಸಿರುವುದು ಸೋಜಿಗದ ಸಂಗತಿ. ಅಲ್ಲದೆ, ಅದೊಂದು ದುರಂತ ಸಹ. ●




✉ ತಮ್ಮ ಪತ್ರಿಕೆಯನ್ನು ಓದಿದೆವು ಅದರಲ್ಲಿ ಪ್ರಸ್ತುತ ಸಮಾಜಕ್ಕೆ ಬೇಕಾಗುವ ಎಲ್ಲಾ ಮಾಹಿತಿಯೂ ಇದೆ. ಆಧ್ಯಾತ್ಮಿಕ ಚಿಂತನೆಯಿಂದ ಮೊದಲ್ಗೊಂಡು ಸಾಮಾಜಿಕ ನ್ಯಾಯ, ನೈತಿಕತೆ, ಸ್ತ್ರೀ–ಸಮಾನತೆ, ಪರಿಸರ ಪ್ರಜ್ಞೆ, ಕಾವ್ಯ, ದೇಶದ ಆಗು–ಹೋಗುಗಳು, ಕರ್ನಾಟಕದ ಇತಿಹಾಸ, ವಿಜ್ಞಾನ, ರಾಜಕೀಯಕ್ಕೆ ಸಂಬಂಧಪಟ್ಟ ಎಲ್ಲಾ ಲೇಖನಗಳು ಅನುಭವಿ ಲೇಖಕರಿಂದ ಬರೆಯಲ್ಪಟ್ಟು ಆಯಾ ರಂಗದಲ್ಲಿ ಪೂರ್ಣ ಮಾಹಿತಿಯನ್ನು ನೀಡುತ್ತಿದೆ. ಪತ್ರಿಕೆಯು ಮಕ್ಕಳು, ಮಹಿಳೆಯರು, ವಿದ್ಯಾರ್ಥಿಗಳು ಮತ್ತು ಪುರುಷರು ಎಲ್ಲರಿಗೂ ಮಾರ್ಗದರ್ಶಕವಾಗಿದೆ. ಈ ಪತ್ರಿಕೆಯಿಂದ ಹತ್ತು ಹಲವಾರು ವಿಷಯಗಳಲ್ಲಿ ಜ್ಞಾನ ಪ್ರಸರಣವಾಗುತ್ತದೆ.

ಈ ವಿದ್ಯುನ್ಮಾನ ಯುಗದಲ್ಲಿ ಎಲ್ಲರೂ ಕಂಪ್ಯೂಟರ್ ಮೇಲೆ ಅವಲಂಬಿತರಾಗಿದ್ದಾರೆ. ಭಾಷೆಗೆ ಮತ್ತು ಸಾಹಿತ್ಯಕ್ಕೆ ಒತ್ತು ನೀಡಲು ಪತ್ರಿಕೆಗಳನ್ನು ಓದುವ ಹವ್ಯಾಸ ಮಾಡಿಕೊಳ್ಳಬೇಕು. ಈ ನಿಟ್ಟಿನಲ್ಲಿ ತಮ್ಮ ಪತ್ರಿಕೆ ವೈವಿಧ್ಯಮಯ ವಿಷಯಗಳಿಂದ ಓದುಗರನ್ನು ಆಕರ್ಷಿಸಿದೆ. ತಮ್ಮ ಪತ್ರಿಕೆ ಮುಂದೆಯೂ ಹೆಚ್ಚಿನ ಸಂಖ್ಯೆಯಲ್ಲಿ ಓದುಗರನ್ನು ಪಡೆದು ಉನ್ನತ ಮಟ್ಟಕ್ಕೇರಲಿ ಎಂದು ತುಂಬು ಹೃದಯದಿಂದ ಅಭಿನಂದಿಸುತ್ತೇವೆ.

*ಬೆಂಗಳೂರು* **ಸುಮಂಗಲಿ ಸೇವಾ ಆಶ್ರಮ**

✉ ಹಳ್ಳಿ ಅಗಸಿ ಕಟ್ಟೆ ಹತ್ರ ನಮ್ಮ ಮಯ್ಯಾಶೀನ ಕೂತ್ಕೊಂಡು, ಅಲ್ಲಲಾ ಈ ಊಟದ ವಿಷ್ಯಾನ ಎಷ್ಟು ದೊಡ್ಡದು ಮಾಡ್ತಾರೆ. ಅದ್ರಾಗೇನೈತಲೇ, ಅವರವರಿಗೆ ಏನು ಬೇಕು ಅದನ್ನ ತಿನ್ನತಾರಪ್ಪ ಅಂದ. ಅದಕ್ಕೆ ಶೀನ ಅದು ಹಂಗಲ್ಲ ಲೇ, ಸುಮ್ನೇ ಕುಂತ್ರೆ ಉಂಡ ಅನ್ನ ಹೇಗಾದ್ರೂ ಜೀರ್ಣ ಆಗಬೇಕು ಅಂತೀನಿ. ಅದು ಸರಿ ಬಿಡು ಆದ್ರೂ ನಂಗೆ ಬ್ಯಾಸ್ರಾ ಮಯ್ಯಾ. ಯಾಕಲೇ ಶೀನ, ಏನಾಯ್ತು ನಿಂಗೆ? ಅಲ್ಲಲೇ, ಮಾಂಸ ತಿಂದು ದೇವಸ್ಥಾನಕ್ಕೆ ಹೋದ್ರೆ ದೊಡ್ಡ ಸುದ್ದಿಯಾಗೈತೇ, ಕುಂತ್ರು ನಿಂತ್ರು ಅದೇ ಸುದ್ದಿ. ಮೊನ್ನೆ ನಾನು ಮಾಂಸ ತಿಂದ ನಂತರವೇ ಗುಡಿಗೆ ಹೋಗಿದ್ದೆ. ಅದನ್ನು ಯಾರೂ ಕೇಳಲೇ ಇಲ್ಲ ಅಂತೀನಿ. ನೀನ್ಯಾವ ಸೀಮೆ ಲೀಡರ್ ಅಂತ ಕೇಳಬೇಕು ಶೀನ. ಪರಮೇಶಿನೂ ಅವತ್ತು ಕೋಳಿ ತಿಂದೇ ಬಂದಿದ್ದ. ಹೀಗನ್ನುತ್ತಿರುವಾಗಲೇ ಕಟ್ಟೆ ಹತ್ತಿರ ಇನ್ನೊಂದಿಷ್ಟು ಮಂದಿ ಬಂದು ಕುಂತ್ರು. ಚರ್ಚೆ ರಂಗೇರಿತು.

ಬಂದವರಲ್ಲೊಬ್ಬ ಅಲ್ಲಲಾ ಮತ್ತೆ ಮಾಂಸ ತಿಂದು ದೇವಸ್ಥಾನಕ್ಕೆ ಹೋಗಬಹುದಾ ಅಂದ. ಅದಕ್ಕೆ ಮತ್ತೊಬ್ಬ ದೇವಸ್ಥಾನಕ್ಕೆ ಹೋಗಬೇಕಾದ್ರೆ ಅವನ್ನೆಲ್ಲಾ ತಿಂತಾರಾ? ಇವರ ಮಾತನ್ನು ಕೇಳುತ್ತ ನಿಂತವನೊಬ್ಬ "ತಿಂದ್ರೆ ಏನು ತಪ್ಪು? ದೇವರೇನಾದ್ರೂ ನನ್ನ ಬಳಿ ಬರುವಾಗ ಅದನ್ನು ತಿನ್ನಬೇಡಿ, ಇದನ್ನ ತಿನ್ನಬೇಡಿ ಅಂತಾನೆಯೇ?, ಏ ಏನು ಮಾತಾಡ್ತೀ ನೀನು. ಹಾಗೆಲ್ಲಾ ದೇವಸ್ಥಾನಕ್ಕೆ ಹೋಗಬಾರದಲ್ವಾ? ಹೋಗಬಾರದು ಅಂತ ನೀವು ಹೇಳ್ತೀರಾ. ಆದರೆ ಅವರು ಏನು ತಿಂದರೂ ತಾವು ತಿನ್ನೊ ಆಹಾರವನ್ನೇ ಭಯ ಭಕ್ತಿಯಿಂದ ಕಣ್ಣಿಗೊತ್ತಿಕೊಂಡು ತಿಂತಾರೆ. ತಾವು ತಿನ್ನೋದನ್ನೇ ದೇವರ ಪ್ರಸಾದ ಅಂತ ಭಾವಿಸ್ತಾರೆ. ನಿಜ ದೇವರ ಪ್ರಸಾದ ಅಂತ ತಿಳಿದು ತಿಂದು ನಿಷ್ಕಲ್ಮಷ ಮನಸ್ಸಿನಿಂದ ಇರುವ ಅವರ ಪವಿತ್ರ ಭಕ್ತಿ ಕಾಣದ ನಿಮಗೆ ಹೊಟ್ಟೆಯಲ್ಲಿನ ಊಟ ಕಾಣಿಸ್ತದೆ. ಅಷ್ಟೇ ಏಕೆ ಹಲವಾರು ದೇಗುಲಗಳಲ್ಲಿ ಬ್ಯಾಟಿ ಹೆಸರಿನಲ್ಲಿ ಕುರಿ, ಕೋಳಿ.... ಹೀಗೆ ಮಾಂಸದ ಅಡಿಗೆ ಮಾಡಿ, ಬಂಧು ಬಳಗ, ಗೆಳೆಯರನ್ನೆಲ್ಲಾ ಕರೆದು ಊಟ ಮಾಡುವುದು ನಮ್ಮೆಲ್ಲರಿಗೂ ತಿಳಿದೆ ಇದೆ.




ತಾವು ಮನೆಯಲ್ಲಿ ಮಾಂಸಾಹಾರ ತಿಂತಿದ್ರೂ. ಬಾಡಿಗೆದಾರರಿಗೆ ನೀವು ಕಪ್ಪ ಕಡಿ(ಮಾಂಸಾಹಾರ) ತಿಂತೀರಾ? ಹಾಗಾದ್ರೆ ನಾವು ಮನೆಯನ್ನ ಬಾಡಿಗೆಗೆ ಕೊಡುವುದಿಲ್ಲ ಎಂದು ಹೇಳುವ ಮಾತುಗಳು, ಸರಿಯೇ? ಬಾಡಿಗೆದಾರ ಬಾಡಿಗೆ ಕೊಟ್ಟು ಅವರ ಮನೆಯಲ್ಲಿರುವ ವರೆಗೂ ಕದ್ದು ಮುಚ್ಚಿ ತಿನ್ನಬೇಕು ಇಲ್ಲವೇ ತಿನ್ನದೇ ಇರಬೇಕು. ತಾನು ದುಡಿದೂ ಮನೆ ಮಾಲೀಕರಿಗೋಸ್ಕರ ಅವರಂತೆ ಬದುಕುವ ಪರಿ ಇವರದು.

ಚುನಾವಣೆ ಸಮೀಪಿಸುತ್ತಿದ್ದಂತೆ ದಲಿತರ ಮನೆಗೆ ಹೋಗಿ ಊಟ ಮಾಡ್ತೀನಿ ಅಂತ ಹೇಳೊ ನಮ್ಮ ನಿಮ್ಮ ನಾಯಕರೆಲ್ಲಾ, ಅದನ್ನು ಪದೇ ಪದೇ ಮಾಧ್ಯಮದ ಮುಂದೆ ಹೇಳೊದನ್ನ ಕಂಡ್ರೆ ನೋವಾಗುತ್ತೆ. ಯಾಕಂದ್ರೆ ದಲಿತರ ಮನೆಯಲ್ಲಿ ಊಟ ಮಾಡಬಾರದಾ? ಸ್ವಾತಂತ್ರ್ಯ ಬಂದು ೭೦ ವರ್ಷ ಆದರೂ ಇನ್ನೂ ಇಲ್ಲಿ ಅವರ ಮನೆಯಲ್ಲಿ ಊಟ ಮಾಡಲ್ವಾ? ಅನ್ನುವ ಪ್ರಶ್ನೆ ಕಾಡುತ್ತೆ, ಹಾಗೆ ದಲಿತರು ಊಟ ಮಾಡೋದು ಕೂಡ ಅನ್ನಾನೇ ಅನ್ನೋದು ಇವರಿಗ್ಯಾಕೆ ತಿಳಿಯಲ್ಲ. ದಲಿತರ ಮನೆಗೆ ಹೋಗಿ ಊಟ ಮಾಡ್ತೀನಿ ಅನ್ನೋ ನೀವು, ನೀವು ಬರ್ತೀರಾ ಅಂತ ತಿಳಿದು ಆತಿಥ್ಯ ನೀಡಲು ವಿಶೇಷ ಅಡುಗೆ ಮಾಡಿರ್ತಾರೆ. ಕೇರಿಗೆ ಬರುವ ನಾಯಕರ್ಯಾರೂ ತಮ್ಮ ಮನೆಗೆ ದಲಿತರನ್ನು ಊಟಕ್ಕೆ ಆಹ್ವಾನಿಸಿಲ್ಲ, ಆಹ್ವಾನಿಸುವುದಿಲ್ಲ. ಅಷ್ಟೇ ಏಕೆ ಇನ್ನೂ ಎಷ್ಟೋ ಧಾರ್ಮಿಕ ಕ್ಷೇತ್ರಗಳಲ್ಲಿ ಪ್ರಸಾದ ನಿಲಯಗಳಲ್ಲಿ ಮೈಮೇಲೆ ದಾರ ಇರುವವರಿಗೆ ಒಂದು ಪಂತಿ. ದಾರ ಇರದಿದ್ದವರಿಗೆ ಒಂದು ಪಂತಿ. ಈ ಕುರಿತು ಯಾರೂ ಯಾಕೆ ಮಾತನಾಡುವುದಿಲ್ಲ?

ಊಟ ಅನ್ನುವುದು ಅವರವರಿಗೆ ಬಿಟ್ಟಿದ್ದು. ತುತ್ತು ಅನ್ನ ತಿನ್ನೋಕೆ ಬೊಗಸೆ ನೀರು ಕುಡಿಯೋಕೆ ಅನ್ನೋ ಹಾಗೆ, ಮಾಂಸಾಹಾರನೋ, ಸಸ್ಯಾಹಾರನೋ ತಮಗೆ ಬೇಕಾದ್ದು ತಿಂತಾರೇ. ಊಟದ ವಿಷಯಕ್ಕೂ ತರಬೇಡಿ ಭೇದಾನಾ ಅನ್ನುತ್ತಿದ್ದಂತೆ ಅಲ್ಲಿದ್ದವರೆಲ್ಲಾ ಏಳ್ರೀ ಲೇ ಮ್ಯಾಗೆ ಕೆಲಸ ನೋಡ್ರಿ ಎನ್ನುತ್ತಾ ಅಲ್ಲಿಂದ ಕಾಲ್ಕಿತ್ತರು.

ಸಮಾಜದಲ್ಲಿ ಇಂದಿಗೂ ಒಂದು ವರ್ಗವನ್ನು ಮನುಷ್ಯರೆಂದೇ ಒಪ್ಪಿಕೊಳ್ಳಲು ತಯಾರಿಲ್ಲದ ಜನವರ್ಗದವರ ತಲೆಯಲ್ಲಿ ಸಮತೆಯ ಬೀಜ ಬಿತ್ತಿ, ಅದು ಮೊಳಕೆಯೊಡೆದು, ಬೆಳೆದು, ಫಲ ನೀಡುವ ಸುವರ್ಣ ಘಳಿಗೆಗಳು ಬೇಗ ಬರಲಿ ಎಂದು ಎದುರು ನೋಡುತ್ತಿದ್ದೇನೆ.

*ಕೊಪ್ಪಳ* **ದೇವೇಂದ್ರಪ್ಪ ಎನ್. ಡೊಳ್ಳಿನ**

✉ ಮಾರ್ಚ್–೨೦೧೮ರ 'ವಿಶ್ವ ಮಹಿಳಾ ದಿನಾಚರಣೆ'ಯ ನಿಮಿತ್ತ 'ಕ್ರಾಂತಿ ಕೆಂಡ ದೀಪವಾಗಬೇಕು ಅಕ್ಕಾ', ಮತ್ತು ಮಹಿಳೆಯರ ಲಿಂಗ ಅಸಮಾನತೆಯ ಬಗ್ಗೆ ಮೂಡಿಬಂದ ಲೇಖನ ಬಹು ಸೊಗಸಾಗಿದೆ. "ತವರು ಮತ್ತು ವರಕವಿ ಬೇಂದ್ರೆಯ ನೆನಪಲ್ಲಿ ಬಡ ಪ್ರೇಮಿಯ ಹಾಡು" ಸೊಗಸಾಗಿ ಮೂಡಿದೆ. ಹೀಗೆ ಕವನ ಮೂಡಿ ಬರಲಿ.

ಯಡಿಯೂರು **ನಂದ**

✉ ಮಾರ್ಚ್–೨೦೧೮ರ ಹೊಸತು ಆಕರ್ಷಕ ಹಾಗೂ ಉತ್ತಮ ವಿಷಯಗಳನ್ನು ಹೊತ್ತು ತಂದಿದೆ. ವಿಶ್ವ ಮಹಿಳಾ ದಿನಾಚರಣೆಯ ಅಂಗವಾಗಿ ವಿವಿಧ ಮಹಿಳಾ ಸಾಧಕರನ್ನು ಕುರಿತು ಬರೆದಿರುವ ಲೇಖನಗಳು ಸಮಯೋಚಿತ ಹಾಗೂ ಸಂಗ್ರಹಯೋಗ್ಯವಾಗಿವೆ. ಸಂಪಾದಕೀಯ ಅರ್ಥಪೂರ್ಣವಾಗಿದೆ. ಜಿ. ರಾಮಕೃಷ್ಣ ಅವರ ಭಗವದ್ಗೀತೆ : ಒಂದು ಅವಲೋಕನ ೧೮ ಕಂತುಗಳಲ್ಲಿ ಮನಮುಟ್ಟುವಂತೆ ಸರಳವಾಗಿ ತಿಳಿಸಿಕೊಟ್ಟಿರುವುದು ಶ್ಲಾಘನೀಯ. ಅವರಿಗೆ ಧನ್ಯವಾದ ಹೇಳಲೇ ಬೇಕು. ಹೆಚ್. ಎಸ್. ಪಾರ್ವತಿಯವರ ಬಗ್ಗೆ ಆಕಾಶವಾಣಿಯಲ್ಲಿ ಕೇಳುತ್ತಿದ್ದೊ, ಆದರೆ 'ಹೊಸತು'ವಿನಲ್ಲಿ ಅವರ ಬರಹಗಳ ಬಗ್ಗೆ ಅವಲೋಕನ ಮಾಡಿದ ದಿವ್ಯ ಎಸ್. ರವರಿಗೆ ಧನ್ಯವಾದಗಳು. ಕಾ. ಹು. ಚಾನ್ ಪಾಷರವರ ಓ ಚಂದ್ರಮಾ ನೀನಿಂದು ಮೂಡಬೇಡ ಜೀವನದ ಗುಟ್ಟನ್ನು ರಟ್ಟು ಮಾಡಿದೆ. ಚಂದ್ರ ಮೂಡಿಬಂದರೆಷ್ಟು ಕಷ್ಟವೆಂಬುದನ್ನು ಅರ್ಥಪೂರ್ಣವಾಗಿಸಿದ್ದಾರೆ. ಸಿಂಧೂ ಕಾಮತ್‌ರವರ ಚಿತ್ರಗಳು ಅದ್ಭುತವಾಗಿವೆ.

ಕೃಷ್ಣರಾಜಪೇಟೆ **ಅ. ಮೃತ್ಯುಂಜಯ**

# ಕೇಂದ್ರ ಮತ್ತು ಕರ್ನಾಟಕ ಬಜೆಟ್ಟುಗಳು: ೨೦೧೮–೨೦೧೯






ಡಾ॥ ಟಿ. ಆರ್. ಚಂದ್ರಶೇಖರ

ರಾಜ್ಯ ಸರ್ಕಾರದ ಒಂದು ಉತ್ತಮವಾದ ೨೦೧೮–೧೯ರ ಬಜೆಟ್ಟಿನಲ್ಲಿ ಘೋಷಿಸಿರುವ ಕ್ರಮವೆಂದರೆ 'ರೈತ ಬೆಳಕು' ಕಾರ್ಯಕ್ರಮ. ಈ ಕಾರ್ಯಕ್ರಮದ ಪ್ರಕಾರ ಮಳೆಯಾಶ್ರಿತ ರೈತರಿಗೆ ವಾರ್ಷಿಕ ಹೆಕ್ಟೇರಿಗೆ ರೂ. ೫೦೦೦ ಸಹಾಯಧನವನ್ನು ಗರಿಷ್ಠ ರೂ. ೧೦೦೦೦ವರೆಗೆ ಪ್ರತಿ ರೈತನಿಗೆ ನೀಡಲಾಗುತ್ತದೆ. ಇದಕ್ಕಾಗಿ ೨೦೧೮–೧೯ರ ಬಜೆಟ್ಟಿನಲ್ಲಿ ರೂ. ೩೫೦೦ ಕೋಟಿ ಮೀಸಲಿಡಲಾಗಿದೆ. ಈ ಯೋಜನೆಯಿಂದಾಗಿ ರಾಜ್ಯದ ಒಣಭೂಮಿ ಅವಲಂಬಿತ ೭೦ ಲಕ್ಷ ರೈತರಿಗೆ ಅನುಕೂಲವಾಗುತ್ತದೆ. ಕೇಂದ್ರವೂ ಕೂಡ ಹೀಗೆ ಒಣಭೂಮಿ ಬೇಸಾಯದ ರೈತರಿಗೆ ನೇರವಾಗಿ ನಗದು ವರ್ಗಾವಣೆ ನೀಡುವ ಕ್ರಮವನ್ನು ಜಾರಿಗೊಳಿಸುವುದು ಅಗತ್ಯ.

ನಮ್ಮ ಸರ್ಕಾರಗಳಿಗೆ – ಕೇಂದ್ರ ಮತ್ತು ರಾಜ್ಯಗಳು – ಪ್ರತಿ ವರ್ಷದ ಆರಂಭದಲ್ಲಿ ಮುಂದಿನ ವರ್ಷಕ್ಕೆ ಸಂಬಂಧಿಸಿದ ಬಜೆಟ್ ಮಂಡಿಸಿ ತಮ್ಮ ಶಾಸಕಾಂಗದಿಂದ ಅನುಮತಿ ಪಡೆದುಕೊಳ್ಳುವುದು ಸಂವಿಧಾನದ ಪರಿಚ್ಛೇದ ೧೧೨ರ ಪ್ರಕಾರ ಕಡ್ಡಾಯವಾಗಿದೆ. ಇದರ ಪ್ರಕಾರ ಕಳೆದ ಫೆಬ್ರವರಿ ೦೧ರಂದು ಕೇಂದ್ರ ಸರ್ಕಾರ ಮತ್ತು ಅದೇ ತಿಂಗಳ ೧೬ರಂದು ಕರ್ನಾಟಕ ಸರ್ಕಾರ ತಮ್ಮ ೨೦೧೮–೧೯ನೆಯ ಸಾಲಿನ ಬಜೆಟ್ಟುಗಳನ್ನು ಕ್ರಮವಾಗಿ ಸಂಸತ್ತಿನಲ್ಲಿ ಮತ್ತು ವಿಧಾನಸಭೆಯಲ್ಲಿ ಮಂಡಿಸಿವೆ. ವಾಸ್ತವವಾಗಿ ಇವೆರಡನ್ನು ತುಲನೆ ಮಾಡುವುದು ಸೂಕ್ತವಲ್ಲ. ಏಕೆಂದರೆ ಅವುಗಳ ಸಂವಿಧಾನಾತ್ಮಕ ಜವಾಬ್ದಾರಿಗಳು, ತೆರಿಗೆ ಮೂಲಗಳು, ಸಾರ್ವಜನಿಕ ವೆಚ್ಚದ ವ್ಯಾಪ್ತಿ ಭಿನ್ನವಾಗಿವೆ. ಉದಾಹರಣೆಗೆ, ಕೇಂದ್ರ ಸರ್ಕಾರಕ್ಕೆ ರಕ್ಷಣೆ ವ್ಯವಸ್ಥೆಯನ್ನು ನಿರ್ವಹಿಸುವ ಜವಾಬ್ದಾರಿಯಿದೆ. ಕೇಂದ್ರ ಸರ್ಕಾರದ ೨೦೧೮–೧೯ರ ರಕ್ಷಣಾ ವ್ಯವಸ್ಥೆಯ ಮೇಲಿನ ವೆಚ್ಚ ರೂ. ೪.೦೪ ಲಕ್ಷ ಕೋಟಿಯಾಗಿದೆ. ಇದು ಕೇಂದ್ರದ ಒಟ್ಟು ವೆಚ್ಚದ ಶೇಕಡ ೧೬.೫೪ರಷ್ಟಾಗುತ್ತದೆ. ಈ ಜವಾಬ್ದಾರಿ ರಾಜ್ಯ ಸರ್ಕಾರಗಳಿಗಿಲ್ಲ. ಆದರೂ ಇವೆರಡರ ನಡುವಿನ ಕೆಲವು ಸಂಗತಿಗಳನ್ನು ಸೈದ್ಧಾಂತಿಕವಾಗಿ ಹೋಲಿಸಿ ಚರ್ಚೆ ಮಾಡಲು ಸಾಧ್ಯ. ಈ ಪ್ರಬಂಧದಲ್ಲಿ ಇಂತಹ ಒಂದು ಪ್ರಯತ್ನ ಮಾಡಲಾಗಿದೆ. ಇದರಲ್ಲಿ ನಾಲ್ಕು ಭಾಗಗಳಿವೆ. ಮೊದಲ ಭಾಗದಲ್ಲಿ ಬಜೆಟ್ಟುಗಳ ಕೆಲವು ಆಯ್ದ ಬಾಬ್ತುಗಳನ್ನು ಆಧಾರ ಮಾಡಿಕೊಂಡು ಕೇಂದ್ರ ಮತ್ತು ಕರ್ನಾಟಕ ಬಜೆಟ್ಟುಗಳ ಭಿನ್ನತೆಯನ್ನು ವಿವರಿಸಲಾಗಿದೆ. ಭಾಗ ಎರಡರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸಂಬಂಧಿಸಿದ ಅನುದಾನ ಮತ್ತು ಪರಿಶಿಷ್ಟರ ಬಗೆಗಿನ ಸರ್ಕಾರಗಳ ದೃಷ್ಟಿಕೋನವನ್ನು ಚರ್ಚಿಸಲಾಗಿದೆ. ಮೂರನೆಯ ಭಾಗದಲ್ಲಿ ಕೃಷಿ ಮತ್ತು ತತ್ಸಬಂಧಿ ವಲಯಗಳಿಗೆ ಬಜೆಟ್ಟಿನಲ್ಲಿ ನೀಡಿರುವ ಅನುದಾನ ಮತ್ತು ಕಾರ್ಯಕ್ರಮಗಳನ್ನು ಚರ್ಚಿಸಲಾಗಿದೆ. ಇಲ್ಲಿ ಪ್ರಮುಖವಾಗಿ ಕೇಂದ್ರ ಸರ್ಕಾರವು ಬಜೆಟ್ಟಿನಲ್ಲಿ ಘೋಷಿಸಿರುವ ಕೃಷಿ ಉತ್ಪನ್ನಗಳ ಕನಿಷ್ಠ ಬೆಂಬಲ ಬೆಲೆಯನ್ನು ಉತ್ಪಾದನಾ ವೆಚ್ಚದ ಮೇಲೆ ಶೇಕಡ ೫೦ರಷ್ಟು ಲಾಭವನ್ನು ಲೆಕ್ಕಹಾಕಿ ನಿಗದಿ ಪಡಿಸಲಾಗುವುದು ಎಂಬ ಆಶ್ವಾಸನೆಯ ನಿಜದ ನೆಲೆಯನ್ನು ಕುರಿತಂತೆ ಚರ್ಚಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಕೇಂದ್ರ ಮತ್ತು ಕರ್ನಾಟಕಗಳ ನಡುವಿನ ವಿತ್ತೀಯ ಶಿಸ್ತಿಗೆ ಸಂಬಂಧಿಸಿದ ಸಂಗತಿಗಳನ್ನು ಚರ್ಚಿಸಲಾಗಿದೆ. ಕೊನೆಯಲ್ಲಿ ಎರಡೂ ಬಜೆಟ್ಟುಗಳ ನಡುವಿನ ಸೈದ್ಧಾಂತಿಕ ಭಿನ್ನತೆಗಳನ್ನು ಗುರುತಿಸಲಾಗಿದೆ.

## ಭಾಗ ೧

### ಕೇಂದ್ರ ಮತ್ತು ಕರ್ನಾಟಕ: ಆಯ್ದ ಬಾಬ್ತುಗಳ ಬಜೆಟ್ ಅನುದಾನ

ಕೋಷ್ಟಕ ೧ರಲ್ಲಿ ಕೇಂದ್ರ ಮತ್ತು ಕರ್ನಾಟಕ ರಾಜ್ಯಗಳಿಗೆ ಸಾಮಾನ್ಯವಾದ ಬಾಬ್ತುಗಳ ಮೇಲಿನ ೨೦೧೮–೧೯ರ ಬಜೆಟ್ ವೆಚ್ಚ ಹಾಗೂ ಒಟ್ಟು ವೆಚ್ಚದಲ್ಲಿ ಪ್ರತಿ ಬಾಬ್ತಿನ ವೆಚ್ಚದ ಪ್ರಮಾಣವನ್ನು ತೋರಿಸಲಾಗಿದೆ.

**ಕೋಷ್ಟಕ ೧. ಕೇಂದ್ರ ಮತ್ತು ಕರ್ನಾಟಕ ಬಜೆಟ್ಟುಗಳ ಆಯ್ದ ವಿವರಗಳು**

| ಕ್ರ. ಸಂ. | ಬಜೆಟ್ ಬಾಬ್ತುಗಳು | ಕರ್ನಾಟಕ ಬಜೆಟ್ ೨೦೧೮-೧೯ (ಬಜೆಟ್ ಅಂದಾಜು) | | ಕೇಂದ್ರ ಬಜೆಟ್ ೨೦೧೮-೧೯ (ಬಜೆಟ್ ಅಂದಾಜು) | |
|---|---|---|---|---|---|
| | | ಬಜೆಟ್ ವೆಚ್ಚ (ಕೋಟಿಗಳಲ್ಲಿ) | ಒಟ್ಟು ವೆಚ್ಚದಲ್ಲಿ ಶೇಕಡ ಪ್ರಮಾಣ | ಬಜೆಟ್ ವೆಚ್ಚ (ಕೋಟಿಗಳಲ್ಲಿ) | ಒಟ್ಟು ವೆಚ್ಚದಲ್ಲಿ ಶೇಕಡ ಪ್ರಮಾಣ |
| ೧ | ಕೃಷಿ ಮತ್ತು ತತ್ಸಬಂಧಿ ವಲಯ | ೯೯೩೦ | ೪.೭೫ | ೬೩೮೩೬ | ೨.೬೧ |
| ೨ | ಶಿಕ್ಷಣ | ೨೬೭೦೪ | ೧೨.೫೩ | ೮೫೦೧೦ | ೩.೪೮ |
| ೩ | ಆರೋಗ್ಯ | ೮೮೦೪ | ೪.೨೧ | ೫೪೬೬೭ | ೨.೨೪ |
| ೪ | ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ | ೧೧೬೪೦ | ೫.೫೬ | ೨೫೨೦೦ | ೧.೦೩ |
| ೫ | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ | ೧೩೭೫೩ | ೬.೫೭ | ೧೩೮೯೭ | ೫.೬೫ |
| ೬ | ಪ. ಜಾ. ಕಲ್ಯಾಣ (ಉಪಯೋಜನೆ) | ೧೯೯೦೦ | ೯.೫೧ | ೫೬೬೧೮ | ೨.೩೨ |
| ೭ | ಪ. ಪಂ. ಕಲ್ಯಾಣ (ಉಪ ಯೋಜನೆ) | ೮೧೦೨ | ೩.೮೭ | ೩೯೧೩೪ | ೧.೬೦ |
| ೮ | ಅಲ್ಪಸಂಖ್ಯಾತರ ಅಭಿವೃದ್ಧಿ | ೨೨೮೧ | ೧.೦೯ | ೪೭೦೦ | ೦.೧೯ |
| ೯ | ಒಟ್ಟು ಬಜೆಟ್ ವೆಚ್ಚ | ೨೦೯೧೮೧ | ೧೦೦.೦೦ | ೨೪೪೨೨೧೩ | ೧೦೦.೦೦ |

ಮೂಲ : ಕೇಂದ್ರ ಸರ್ಕಾರ ೨೦೧೮. ಬಜೆಟ್ ವೆಚ್ಚದ ಸಂಪುಟ ೨೦೧೮-೧೯. ಕರ್ನಾಟಕ ಸರ್ಕಾರದ ಬಜೆಟ್ ವೆಚ್ಚದ ಸಂಪುಟ. ೨೦೧೮-೧೯.

ಶಿಕ್ಷಣ ಮತ್ತು ಆರೋಗ್ಯ ವಲಯಗಳಿಗೆ ಕರ್ನಾಟಕವು ೨೦೧೮-೧೯ನೆಯ ಸಾಲಿನಲ್ಲಿ ಬಜೆಟ್ಟಿನ ಒಟ್ಟು ವೆಚ್ಚದಲ್ಲಿ ಶೇಕಡ ೧೬.೭೪ರಷ್ಟು ಮೀಸಲಿಟ್ಟಿದ್ದರೆ ಕೇಂದ್ರದ ಬಜೆಟ್ಟಿನಲ್ಲಿನ ಒಟ್ಟು ವೆಚ್ಚದಲ್ಲಿ ಶಿಕ್ಷಣ ಮತ್ತು ಆರೋಗ್ಯ ವಲಯಗಳಿಗೆ ಒದಗಿಸಿದ ಹಣದ ಪ್ರಮಾಣ ಶೇಕಡ ೫.೭೨. ಸರ್ಕಾರವು ೧೯೬೦ರ ದಶಕದಲ್ಲಿ ನೇಮಿಸಿದ್ದ ಕೊಠಾರಿ ಸಮಿತಿಯು ಶಿಕ್ಷಣಕ್ಕೆ ಅನುದಾನ ಜಿ. ಡಿ. ಪಿ.ಯ ಶೇಕಡ ೬ರಷ್ಟಿರಬೇಕು ಎಂದು ಶಿಫಾರಸ್ಸು ಮಾಡಿತ್ತು. ಅದು ಇನ್ನೂ ಸಾಧ್ಯವಾಗಿಲ್ಲ. ಶಿಕ್ಷಣ ಮತ್ತು ಆರೋಗ್ಯ- ಎರಡನ್ನು ಕೂಡಿಸಿದರೂ ಅವುಗಳ ಅನುದಾನ ೨೦೧೮-೧೯ರಲ್ಲಿ ದೇಶದ ಜಿ. ಡಿ. ಪಿ.ಯ ಶೇಕಡ ೦.೭೭ರಷ್ಟಾಗುತ್ತದೆ. ಕರ್ನಾಟಕದಲ್ಲಿನ ಇವೆರಡರ ಅನುದಾನ ಒಟ್ಟು ರಾಜ್ಯ ಆಂತರಿಕ ಉತ್ಪನ್ನದ (ಜಿಎಸ್‌ಡಿಪಿ) ಶೇಕಡ ೨.೪೮ರಷ್ಟಾಗುತ್ತದೆ.

> ಒಟ್ಟು ಆಂತರಿಕ ಉತ್ಪನ್ನ (ಜಿಡಿಪಿ): ೨೦೧೮-೧೯(ಬ.ಅಂ). ರೂ. ೧೮೭.೨೨ ಲಕ್ಷ ಕೋಟಿ (ಚಾಲ್ತಿ ಬೆಲೆಗಳಲ್ಲಿ).
> ಒಟ್ಟು ರಾಜ್ಯ ಆಂತರಿಕ ಉತ್ಪನ್ನ (ಜಿಎಸ್‌ಡಿಪಿ): ೨೦೧೮-೧೯ (ಬ.ಅಂ). ರೂ. ೧೪.೦೯ ಲಕ್ಷ ಕೋಟಿ (ಚಾಲ್ತಿ ಬೆಲೆಗಳಲ್ಲಿ).

ದೇಶದಲ್ಲಿನ ಪ.ಜಾ. ಮತ್ತು ಪ.ಪಂ. ಜನಸಂಖ್ಯೆ (೨೦೧೧) ೩೦.೫೫.೦೦ ಕೋಟಿ. ಇವರ ಅಭಿವೃದ್ಧಿಗೆ ಕೇಂದ್ರ ಸರ್ಕಾರವು ನೀಡಿರುವ ಅನುದಾನ ರೂ.೫೭೫೭ ಕೋಟಿ. ಕೇಂದ್ರ ಬಜೆಟ್ಟಿನ ಒಟ್ಟು ವೆಚ್ಚದಲ್ಲಿ ಪರಿಶಿಷ್ಟರಿಗೆ ನೀಡಿರುವ ಅನುದಾನದ ಪ್ರಮಾಣ ಕೇವಲ ಶೇಕಡ ೩.೯೩. ಆದರೆ ಕರ್ನಾಟಕದಲ್ಲಿನ ಪ.ಜಾ. ಮತ್ತು ಪ.ಪಂ. ಜನಸಂಖ್ಯೆ (೨೦೧೧) ೧೪೭.೩೨ ಲಕ್ಷ. ರಾಜ್ಯದ ೨೦೧೮-೧೯ನೆಯ ಸಾಲಿನ ಬಜೆಟ್ಟಿನ ಒಟ್ಟು ವೆಚ್ಚದಲ್ಲಿ ಪರಿಶಿಷ್ಟರ ಅಭಿವೃದ್ಧಿಗೆ ನೀಡಿರುವ ಅನುದಾನದ ಪ್ರಮಾಣ ಶೇಕಡ ೧೩.೩೯.

ಕಳೆದ ಕೆಲವು ವರ್ಷಗಳಿಂದ ದೇಶದಲ್ಲಿ ಉದ್ಯೋಗದ ಅವಕಾಶಗಳು ಬೆಳೆಯುತ್ತಿಲ್ಲ. ನಮ್ಮ ದೇಶವು ಉದ್ಯೋಗ ರಹಿತ ಅಭಿವೃದ್ಧಿಯನ್ನು ಅನುಭವಿಸುತ್ತಿದೆ. ಅಭಿವೃದ್ಧಿಯೇನೋ ನಡೆದಿದೆ. ಆದರೆ ವರಮಾನದ ಬೆಳವಣಿಗೆಗೆ ಸಮನಾಗಿ ಉದ್ಯೋಗದ ಅವಕಾಶಗಳು ಬೆಳೆಯುತ್ತಿಲ್ಲ. ಜಗತ್ತಿನಲ್ಲಿಯೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಆರ್ಥಿಕತೆ ನಮ್ಮದು ಎಂದು ಕೇಂದ್ರವು ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುತ್ತಿದೆ. 'ವರಮಾನವೇ ಜನರ ಬದುಕಿನ ಮೊತ್ತವಲ್ಲ' ಎಂದು ಮೆಹಬೂಬ್ ಉಲ್ ಹಕ್ ೧೯೯೦ರಲ್ಲಿಯೇ ಎಚ್ಚರಿಸಿದ್ದರು. ದೇಶದಲ್ಲಿ ಉದ್ಯೋಗ ಕ್ಷೇತ್ರ ಮಾತ್ರ ಬೆಳೆಯುತ್ತಿಲ್ಲ. ಗ್ರಾಮೀಣ ಬಡವರಿಗೆ ಉದ್ಯೋಗದ ಆಸರೆಯೆಂದರೆ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಅಧಿನಿಯಮ ಯೋಜನೆಯಾಗಿದೆ. ಆದರೆ ಅದಕ್ಕೆ ಕೇಂದ್ರ ನೀಡುತ್ತಿರುವ ಅನುದಾನ ವರ್ಷದಿಂದ ವರ್ಷಕ್ಕೆ ಸಾಪೇಕ್ಷವಾಗಿ ಕಡಿಮೆಯಾಗುತ್ತಿರುವುದು ಆತಂಕಕಾರಿಯಾಗಿದೆ. ಉದಾಹರಣೆಗೆ, ೨೦೧೬-೧೭ರಲ್ಲಿ ಇದಕ್ಕೆ ಕೇಂದ್ರ ನೀಡಿದ್ದ ಅನುದಾನ ರೂ.೪೮೨೧೫ ಕೋಟಿ. ಇದು ಅದೇ ವರ್ಷದ ಬಜೆಟ್ಟಿನ ಒಟ್ಟು ವೆಚ್ಚದ ಶೇಕಡ ೨.೪೩ರಷ್ಟಿತ್ತು. ಆದರೆ ೨೦೧೭-೧೮ರಲ್ಲಿ ಇದಕ್ಕೆ ನೀಡಿದ್ದ ಅನುದಾನ ರೂ. ೫೫೦೦೦ ಕೋಟಿ. ಇದು ಬಜೆಟ್ ವೆಚ್ಚದ ಶೇಕಡ ೨.೪೮ರಷ್ಟಿತ್ತು. ಇದರ ಪ್ರಮಾಣ ೨೦೧೮-೧೯ರಲ್ಲಿ ಶೇಕಡ ೨.೨೫ಕ್ಕಿಳಿದಿದೆ. ಒಟ್ಟಾರೆ ೨೦೧೬-೧೭ರಿಂದ ೨೦೧೮-೧೯ರ ಅವಧಿಯಲ್ಲಿ ಇದರ ಪ್ರಮಾಣ ಶೇಕಡ ೨.೪೩ರಿಂದ ೨.೨೫ಕ್ಕಿಳಿದಿದೆ. ಕೇಂದ್ರ ಬಜೆಟ್ಟಿನ ಒಂದು ಗಮನಿಸಬೇಕಾದ ಸಂಗತಿಯೆಂದರೆ ಮಕ್ಕಳ ಅಭಿವೃದ್ಧಿ ಮತ್ತು ಮಹಿಳಾ-ನಿರ್ದಿಷ್ಟ ಕಾರ್ಯಕ್ರಮಗಳಿಗೆ ನೀಡಿರುವ ಅನುದಾನ. ಅದು ೨೦೧೮-೧೯ರಲ್ಲಿ ರೂ.೨.೨೬ ಲಕ್ಷ ಕೋಟಿಯಾಗಿದೆ. ಇದು ಬಜೆಟ್ಟಿನ ಒಟ್ಟು ವೆಚ್ಚದ ಶೇಕಡ ೯.೨೧ರಷ್ಟಾಗುತ್ತದೆ. ಒಟ್ಟಾರೆ ಕೇಂದ್ರದ ಬಜೆಟ್ಟಿನಲ್ಲಿ ಕೋಷ್ಟಕದಲ್ಲಿ ತೋರಿಸಿರುವಂತೆ ಎಂಟು ಬಾಬ್ತುಗಳಿಗೆ ನೀಡಿರುವ ಅನುದಾನವು ಬಜೆಟ್ ವೆಚ್ಚದ ಶೇಕಡ ೨೧.೨೪ರಷ್ಟಾಗಿದ್ದರೆ ಕರ್ನಾಟಕದಲ್ಲಿ ಅದೇ ಎಂಟು ಬಾಬ್ತುಗಳಿಗೆ ನೀಡಿದ ಅನುದಾನವು ಬಜೆಟ್‌ನ ಒಟ್ಟು ವೆಚ್ಚದ ಶೇಕಡ ೪೮.೦೯ರಷ್ಟಾಗಿದೆ. ಮಕ್ಕಳ ಮೇಲಿನ ಪತ್ಯೇಕ ಅನುದಾನವನ್ನು ಸೇರಿಸಿದರೆ ಕೇಂದ್ರದ ಬಜೆಟ್ಟಿನ ಒಟ್ಟು ವೆಚ್ಚದಲ್ಲಿ ಮೇಲಿನ ಎಂಟು ಬಾಬ್ತುಗಳಿಗೆ ಸಂಬಂಧಿಸಿದ ಅನುದಾನವು ಶೇಕಡ ೨೬.೭೭ರಷ್ಟಾಗುತ್ತದೆ. ಇಷ್ಟಾದರೂ ಕೇಂದ್ರವು ಶಿಕ್ಷಣ ಮತ್ತು ಆರೋಗ್ಯ ವಲಯಗಳಿಗೆ ನೀಡುತ್ತಿರುವ ಮೊತ್ತ ಅತ್ಯಲ್ಪವಾಗಿದೆ, ನಿಜ. ಇವು ರಾಜ್ಯಗಳಿಗೆ ಸಂಬಂಧಿಸಿದ ವಲಯಗಳು. ಈ ನೆಪದ ಮೇಲೆ ಕೇಂದ್ರವು ತನ್ನ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವುದು ಒಕ್ಕೂಟ ವ್ಯವಸ್ಥೆಯಲ್ಲಿ ಸರಿಯಾದ ರಾಜಕೀಯ ಕ್ರಮವಲ್ಲ.

## ಭಾಗ ೨

### ಪ.ಜಾ. ಮತ್ತು ಪ.ಪಂ. ಉಪಯೋಜನೆಗಳು: ಕೇಂದ್ರ ಮತ್ತು ಕರ್ನಾಟಕ ಬಜೆಟ್ಟುಗಳು

ನಮ್ಮ ಸಮಾಜದಲ್ಲಿ ಚಾರಿತ್ರಿಕವಾಗಿ ಪ್ರತ್ಯೇಕತನವನ್ನು (ಅಸ್ಪೃಶ್ಯತೆ) ಮತ್ತು ಸಾಮಾಜಿಕ ತಾರತಮ್ಯವನ್ನು ಪ.ಜಾ. ಸಮುದಾಯಗಳು ಅನುಭವಿಸುತ್ತಿದ್ದರೆ ಪ.ಪಂ. ಸಮುದಾಯಗಳು ಅನೇಕ ಬಗೆಯ ಅಸಮಾನತೆ ಮತ್ತು ದುಃಸ್ಥಿತಿ

ಅನುಭವಿಸುತ್ತಿವೆ. ಅಭಿವೃದ್ಧಿಯ ಯಾವುದೇ ಸೂಚಿಯನ್ನು ತೆಗೆದುಕೊಂಡರೂ ಈ ಸಮುದಾಯಗಳು ತಳಮಟ್ಟದಲ್ಲಿರುವುದು ಸ್ಪಷ್ಟವಾಗಿದೆ. ಉದಾಹರಣೆಗೆ ಕರ್ನಾಟಕದಲ್ಲಿ ಒಟ್ಟು ಸಾಕ್ಷರತಾ ಪ್ರಮಾಣ ೨೦೧೧ರಲ್ಲಿ ಶೇಕಡ ೭೫.೪೦ರಷ್ಟಿದ್ದರೆ ಪ.ಜಾ. ಮತ್ತು ಪ.ಪಂ. ಸಮುದಾಯಗಳ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇಕಡ ೬೫.೩೨ ಮತ್ತು ಶೇಕಡ ೬೨.೦೫. ಇಲ್ಲಿರುವ ಅಂತರವನ್ನು ಅಸಮಾನತೆಯ ಮಾಪನವಾಗಿ ಪರಿಗಣಿಸಬಹುದು. ಈ ಸಮುದಾಯಗಳ ಅಭಿವೃದ್ಧಿಗಾಗಿ ಐದನೆಯ ಪಂಚ ವಾರ್ಷಿಕ ಯೋಜನೆಯ ಅವಧಿಯಲ್ಲಿ ಪ.ಜಾ. ಮತ್ತು ಪ.ಪಂ. ವಿಶೇಷ ಘಟಕ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಯಿತು. ಈಗ ಇವುಗಳನ್ನು ಪ.ಜಾ. ಮತ್ತು ಪ.ಪಂ. ಉಪಯೋಜನೆಗಳೆಂದು ಕರೆಯಲಾಗುತ್ತದೆ. ಕರ್ನಾಟಕವು ೨೦೧೮-೧೯ರ ಬಜೆಟ್ಟಿನಲ್ಲಿ ಪ.ಜಾ. ಮತ್ತು ಪ.ಪಂ.ಗಳ ಉಪಯೋಜನೆಗಳಿಗೆ ತೆಗೆದಿಟ್ಟಿರುವ ಅನುದಾನ ಒಟ್ಟು ರೂ. ೨೮೦೦೨ ಕೋಟಿ. ಇದು ಬಜೆಟ್ಟಿನ ಒಟ್ಟು ವೆಚ್ಚವಾದ ರೂ. ೨.೦೯ ಲಕ್ಷ ಕೋಟಿಯಲ್ಲಿ ಶೇಕಡ ೧೩.೩೯ರಷ್ಟಾಗುತ್ತದೆ. ಆದರೆ ೨೦೧೮-೧೯ರಲ್ಲಿ ಕೇಂದ್ರವು ಪ.ಜಾ. ಮತ್ತು ಪ.ಪಂ.ಗಳ ಅಭಿವೃದ್ಧಿಗೆ ಮೀಸಲಿಟ್ಟಿರುವ ಒಟ್ಟು ಹಣ ರೂ.೯೫೭೫೭ ಕೋಟಿ. ಇದು ಅದರ ಒಟ್ಟು ವೆಚ್ಚವಾದ ರೂ.೨೪.೪೨ ಲಕ್ಷ ಕೋಟಿಯಲ್ಲಿ ಶೇಕಡ ೩.೯೨ರಷ್ಟಾಗುತ್ತದೆ. ಪ.ಜಾ. ಮತ್ತು ಪ.ಪಂ.ಗಳಿಗೆ ಕೇಂದ್ರ ನೀಡಿದ ಅನುದಾನ ಅದರ ಜಿ. ಡಿ. ಪಿ.ಯ ಶೇಕಡ ೦.೫೧ರಷ್ಟಾಗಿದ್ದರೆ ಕರ್ನಾಟಕದಲ್ಲಿನ ಅನುದಾನ ಅದರ ಜಿಎಸ್‌ಡಿಪಿಯ ಶೇಕಡ ೨.೧೨ರಷ್ಟಾಗುತ್ತದೆ. ಈ ಎರಡರ ನಡುವಿನ ವ್ಯತ್ಯಾಸವನ್ನು ಗಮನಿಸಬೇಕು. ಈ ವಿಷಯದಲ್ಲಿ ಅನುದಾನದ ಮೊತ್ತಕ್ಕಿಂತ ಪರಿಶಿಷ್ಟರ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮದಲ್ಲಿನ ಭಿನ್ನತೆಯು ಮುಖ್ಯವಾಗಿದೆ.

ಕರ್ನಾಟಕ ಸರ್ಕಾರವು ೨೦೧೩-೧೪ರಲ್ಲಿ ಈ ವರ್ಗಗಳಿಗೆ ಅವರ ಜನಸಂಖ್ಯೆಗೆ ಅನುಗುಣವಾಗಿ ಬಜೆಟ್ಟಿನಲ್ಲಿ ಅನುದಾನ ನೀಡಬೇಕೆಂಬ ಕಾನೂನನ್ನು ಜಾರಿಗೊಳಿಸಿತು ಮತ್ತು ಅದರಂತೆ ಅನುದಾನವನ್ನು ನೀಡುತ್ತಾ ಬಂದಿದೆ. ಮುಖ್ಯಮಂತ್ರಿ ಸಿದ್ದರಾಮಯ್ಯ ತಮ್ಮ ೨೦೧೮-೧೯ರ ಬಜೆಟ್ ಭಾಷಣದಲ್ಲಿ ಹೇಳಿರುವಂತೆ ೨೦೦೮-೦೯ರಿಂದ ೨೦೧೨-೧೩ರ ಐದು ವರ್ಷಗಳಲ್ಲಿ ಈ ಉಪಯೋಜನೆಗಳಿಗೆ ಅಂದಿನ ಸರ್ಕಾರಗಳು ನೀಡಿದ್ದ ಒಟ್ಟು ಅನುದಾನ ರೂ. ೨೨೨೬೧ ಕೋಟಿ (ವಾರ್ಷಿಕ ರೂ. ೪೪೫೨ ಕೋಟಿ). ಆದರೆ ೨೦೧೩-೧೪ರಿಂದ ೨೦೧೭-೧೮ರ ಐದು ವರ್ಷಗಳ ಅವಧಿಯಲ್ಲಿ ಸಿದ್ದರಾಮಯ್ಯ ಸರ್ಕಾರ ಸದರಿ ಉಪಯೋಜನೆಗಳಿಗೆ ನೀಡಿರುವ ಮೊತ್ತ ರೂ. ೮೮೩೯೫ ಕೋಟಿ (ವಾರ್ಷಿಕ ರೂ. ೧೭೬೭೯ ಕೋಟಿ). ಅಂದರೆ ೨೦೦೮ರಿಂದ ೨೦೧೩ರವರೆಗಿನ ಉಪಯೋಜನೆಗಳ ಅನುದಾನವು ಆ ಐದು ವರ್ಷಗಳ ಒಟ್ಟು ಬಜೆಟ್ ವೆಚ್ಚದ ಶೇಕಡ ೬.೧೨ರಷ್ಟಾಗಿದ್ದರೆ ೨೦೧೩-೧೮ರವರೆಗಿನ ಉಪಯೋಜನೆಗಳ ಅನುದಾನವು ಆ ಐದು ವರ್ಷಗಳ ಬಜೆಟ್ ವೆಚ್ಚದ ಶೇಕಡ ೧೨.೨೯ರಷ್ಟಾಗುತ್ತದೆ. ಈ ಸರ್ಕಾರವು ೨೦೧೮-೧೯ರಲ್ಲಿ ಉಪಯೋಜನೆಗಳಿಗೆ ನೀಡಿರುವ ಅನುದಾನ ರೂ. ೧೯೯೦೦ ಕೋಟಿ (ಪ.ಜಾ. ಉಪಯೋಜನೆ) ಮತ್ತು ರೂ. ೮೧೦೨ ಕೋಟಿ (ಪ.ಪಂ. ಉಪಯೋಜನೆ). ರಾಜ್ಯದ ಒಟ್ಟು ಬಜೆಟ್ ವೆಚ್ಚದಲ್ಲಿ ಈ ಯೋಜನೆಗಳಿಗೆ ನೀಡಿರುವ ಮೊತ್ತ ಕ್ರಮವಾಗಿ ಶೇಕಡ ೯.೫೧ ಮತ್ತು ಶೇಕಡ ೩.೮೭ರಷ್ಟಾಗುತ್ತದೆ. ಜನಸಂಖ್ಯೆಗನುಗುಣವಾಗಿ ಅನುದಾನ ನೀಡುವ ಕ್ರಮವನ್ನು ಕೇಂದ್ರ ಸರ್ಕಾರವು ಪಾಲಿಸುತ್ತಿಲ್ಲ. ವಾಸ್ತವವಾಗಿ ಅದು ಉಪಯೋಜನೆ ಅನ್ನುವ ನುಡಿಯನ್ನು ಬಳಸುವುದನ್ನೇ ಕೈಬಿಟ್ಟಿದೆ. ಅದಕ್ಕೆ ಪ್ರತಿಯಾಗಿ ಅಲ್ಲಿನ ಆಳುವ ಪಕ್ಷದ ದಾನ-ದತ್ತಿ-ಉಂಬಳಿ ಸಿದ್ಧಾಂತಕ್ಕೆ ಅನುಗುಣವಾಗಿ ಇದನ್ನು ಪ.ಜಾ. ಕಲ್ಯಾಣ ಮತ್ತು ಪ.ಪಂ. ಕಲ್ಯಾಣ ಕಾರ್ಯಕ್ರಮ ಎಂದು ಕರೆದಿದೆ. ಅದು ೨೦೧೮-೧೯ರಲ್ಲಿ ಪ.ಜಾ. ಕಲ್ಯಾಣಕ್ಕೆ ರೂ. ೫೬೬೧೮ ಕೋಟಿ ಮತ್ತು ಪ.ಪಂ. ಕಲ್ಯಾಣಕ್ಕೆ ರೂ. ೩೯೧೩೪ ಕೋಟಿ ಅನುದಾನ ಮೀಸಲಿಟ್ಟಿದೆ. ಅಭಿವೃದ್ಧಿ ಅನ್ನುವುದು ಹಕ್ಕೇ ವಿನಾ ದತ್ತಿ-ದಾನವಲ್ಲ. 'ಕಲ್ಯಾಣ' ಅನ್ನುವುದು ಅಂತಹ ದತ್ತಿ-ದಾನದ ಪರಿಭಾಷೆಯಾಗಿದೆ. ಇಲ್ಲಿ ಅನುಕಂಪದ ಸಂಗತಿಯಿದೆ. ಅಭಿವೃದ್ಧಿಯು ಅನುಕಂಪದ ಸಂಗತಿಯಲ್ಲ. ಇದು ಹಕ್ಕಿನ, ದಕ್ಕಿಸಿಕೊಳ್ಳಬೇಕಾದ ಪಾಲು.

**ಉಪಯೋಜನೆಗಳು ಏಕೆ ಬೇಕು?**

ಈಗಾಗಲೆ ಹೇಳಿರುವಂತೆ ಉಪಯೋಜನೆಗಳ ಬಗ್ಗೆ ಇಂದಿನ ಕೇಂದ್ರ ಸರ್ಕಾರಕ್ಕೆ ಮತ್ತು ಅಲ್ಲಿನ ಆಳುವ ಪಕ್ಷಕ್ಕೆ ನಂಬಿಕೆಯಿಲ್ಲ. ಎಲ್ಲರನ್ನೂ ಒಂದೇ ಮಾನದಂಡದಲ್ಲಿ ಕಾಣುವ ದೃಷ್ಟಿಕೋನವನ್ನು ಅದು ಅಳವಡಿಸಿಕೊಂಡಿದೆ. ಬಾಬಾ ಸಾಹೇಬ್ ಡಾ॥ ಬಿ. ಆರ್. ಅಂಬೇಡ್ಕರ್ ಅವರು ಪ್ರತಿಪಾದಿಸಿದ ಸಕಾರಾತ್ಮಕ ತಾರತಮ್ಯ ನೀತಿಯನ್ನು ಇಂದಿನ ಕೇಂದ್ರ ಸರ್ಕಾರವು ಒಪ್ಪುವುದಿಲ್ಲ. ಎಲ್ಲರನ್ನೂ ಒಂದೇ ಅಭಿವೃದ್ಧಿ ಯೋಜನೆಯಲ್ಲಿ ಕೂಡಿಹಾಕುವ ಕ್ರಮ ಅದರದ್ದಾಗಿದೆ. ಅದರ ಘೋಷಣೆ 'ಸಬ್ ಕಾ ಸಾತ್ ಸಬ್ ಕಾ ವಿಕಾಸ್'. ಅಮರ್ತ್ಯ ಸೇನ್ ಹೇಳುವ

## ಯಾಕೆ ಹೇಳಕ್ಕ

ಹಗಲಿರುಳು ದುಡಿದವರ ಮುಖದೊಳಗೆ ನಗು ಯಾಕೆ ಬಾಡಿ ಹೋಗಿದೆ ಯಾಕೆ ಹೇಳಕ್ಕ
ಸಾಲ ಸೋಲ ಮಾಡಿ ಹೊತ್ತು ಕಳೆದವರ ಕಣ್ಣಲ್ಲಿ ಕಣ್ಣೀರು ಯಾಕೆ ಬತ್ತಿ ಹೋಗಿದೆ ಯಾಕೆ ಹೇಳಕ್ಕ

ಬೆಟ್ಟ ಗುಡ್ಡ ಹತ್ತಿ ಬದುಕುವ ಮಂದಿಯ ಬಾಯೊಳಗೆ ಮಾತು ನಿಂತು ಹೋಗಿದೆ ಯಾಕೆ ಹೇಳಕ್ಕ
ಮುಳ್ಳು ಕಂಟಿ ಕಮರಿನೊಳಗೆ ಕೈಯಾಡಿಸುವ ಜನರ ಕೈಯಲ್ಲಿ ಕೆಲಸ ನಿಂತು ಹೋಗಿದೆ ಯಾಕೆ ಹೇಳಕ್ಕ

ಬೆಳಕಿಲ್ಲ ಸೂರಿನೊಳಗೆ ಕೆಸರು ತುಂಬಿದ ಊರೊಳಗ ಯಾಕೆ ಸಿಹಿ ಜೇನು ಕಹಿಯಾಗಿದೆ ಯಾಕೆ ಹೇಳಕ್ಕ
ಹರಿಯುವ ಹಳ್ಳ ಸುಳಿವ ಗಾಳಿಯೊಳಗೆ ಝುಳು ಝುಳು ನಾದ ನಿಂತು ಹೋಗಿದೆ ಯಾಕೆ ಹೇಳಕ್ಕ

ಬ್ಯಾನಿ ಬ್ಯಾಸರಕಿಯಲ್ಲೆ ಬದುಕು ಕಳೆದರು ದೇವರ ದಿಂಡಿರು ತಿರುಗಿ ನೋಡಲಿಲ್ಲ ಯಾಕೆ ಹೇಳಕ್ಕ
ಬಿರುಕು ಬಿಟ್ಟ ನೆಲದಲ್ಲಿ ಬಾಡಿ ಹೋದ ಹೊಲದಲ್ಲಿ ತಣ್ಣನೆ ತಂಗಾಳಿ ಸುಳಿಯಲಿಲ್ಲ ಯಾಕೆ ಹೇಳಕ್ಕ

ಮಲ್ಲಿಗಿ ಬನದಾಗ ಅಂಬಿಯ ವನದಾಗ ಹೂವು ಕಾಯಿ ಎಲೆಗಳು ಯಾಕೆ ಒಣಗಿ ಹೋಗಿವೆ ಹೇಳಕ್ಕ
ಭೂಮಿ ಆಕಾಶದ ಮಳೆ ಹನಿಯೊಳಗೆ ಹೊಸ ಹಾಡು ನಿಂತು ಹೋಗಿದೆ ಯಾಕೆ ಹೇಳಕ್ಕ



**ಡಾ॥ ಜಯದೇವಿ ಗಾಯಕವಾಡ**
ಮನೆ. ನಂ. ೫೮/೭೩, ಹೌಸಿಂಗ್ ಸೊಸೈಟಿ, ಕಾಲೋನಿ ಕಲ್ಲೂರ ರಸ್ತೆ, ಹುಮನಾಬಾದ – ೫೮೫ ೩೩೦, ಬೀದರ ಜಿಲ್ಲೆ

ಧಾರಣಾ ಸಾಮರ್ಥ್ಯ ಹೆಚ್ಚಿರುವವರಿಗೂ ಮತ್ತು ಕಡಿಮೆಯಿರುವವರಿಗೂ ಒಂದೇ ಕ್ರಮವನ್ನು ಅನುಸರಿಸಬೇಕೆಂಬುದು ಇಂದಿನ ಕೇಂದ್ರ ಸರ್ಕಾರದ ಸಿದ್ಧಾಂತವಾಗಿದೆ. ಇದನ್ನು ನಾವು ಅಖಂಡ ಅಥವಾ ರಾಷ್ಟ್ರೀಯ ಏಕತಾ ಸಿದ್ಧಾಂತ ಎಂದು ಕರೆಯಬಹುದು. ಈಗಾಗಲೇ ಹೇಳಿರುವಂತೆ ನಮ್ಮದು ಅಖಂಡ ಸಮಾಜವೂ ಅಲ್ಲ ಮತ್ತು ಏಕಾತ್ಮಕ ವ್ಯವಸ್ಥೆಯೂ ಅಲ್ಲ. ಇದು ಬಹುವಚನ ಸಮಾಜ. ಇಲ್ಲಿ ಅಭಿವೃದ್ಧಿಯ ಫಲಗಳು– ಸರ್ಕಾರದ ಮಧ್ಯ ಪ್ರವೇಶವಿಲ್ಲದಿದ್ದರೆ– ಸಮಾಜದ ಎಲ್ಲರಿಗೂ ಸಮಾನವಾಗಿ ದೊರೆಯುವುದಿಲ್ಲ. ಉಳ್ಳವರು, ಮೇಲುವರ್ಗದವರು, ಉನ್ನತ ಜಾತಿಗಳಿಗೆ ಸೇರಿದವರು ಅಭಿವೃದ್ಧಿಯ ಫಲಗಳನ್ನು ಹೆಚ್ಚು ಹೆಚ್ಚು ದೋಚಿಕೊಂಡುಬಿಡುತ್ತಾರೆ. ಏಕೆಂದರೆ ಅವರಿಗೆ ಧಾರಣಾ ಸಾಮರ್ಥ್ಯ ಸದೃಢವಾಗಿರುತ್ತದೆ. ಪ.ಜಾ., ಪ.ಪಂ., ಅಲ್ಪಸಂಖ್ಯಾತರು, ಮಹಿಳೆಯರು ಅದರಿಂದ ವಂಚಿತರಾಗುತ್ತಾರೆ. ಇವರ ಧಾರಣಾ ಸಾಮರ್ಥ್ಯವು ಅತ್ಯಂತ ಕೆಳಮಟ್ಟದಲ್ಲಿದೆ. ಧಾರಣಾ ಸಾಮರ್ಥ್ಯವನ್ನು ನಿರ್ಧರಿಸುವ ಸಂಗತಿಗಳೆಂದರೆ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಆಸ್ತಿ, ಸಾಮಾಜಿಕ ಸ್ಥಾನಮಾನ ಇತ್ಯಾದಿ. ಈ ಬಗೆಯ ಅಸಮಾನತೆಯನ್ನು ದೃಢಪಡಿಸುವ ಅನೇಕ ಅಧ್ಯಯನಗಳು ಇಂದು ನಮಗೆ ಲಭ್ಯವಿವೆ (ಥಾಮಸ್ ಪಿಕೆಟಿ ಮತ್ತು ಲುಕಾಸ್ ಚಾನ್‌ಸೆಲ್ ೨೦೧೭, ಆಕ್ಸ್‌ಫಾಮ್ ವರದಿ ೨೦೧೮ ಇತ್ಯಾದಿ). ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಅಭಿವೃದ್ಧಿ ನೀತಿಗಳು ಮತ್ತು ಕಾರ್ಯಕ್ರಮಗಳು ಸಮಾನವಾಗಿದ್ದರೆ ಅಲ್ಲಿ ಅಸಮಾನತೆಯು ಉಲ್ಬಣಗೊಳ್ಳುತ್ತದೆ ವಿನಾ ಕಡಿಮೆ ಯಾಗುವುದಿಲ್ಲ. ಪ್ರಖ್ಯಾತ ಸಮಾಜ ವಿಜ್ಞಾನಿ ಜಾನ್ ರಾಲ್ಸ್ ಇದನ್ನು ಭಿನ್ನತೆಯ ನಿಯಮ ಅನ್ನುತ್ತಾನೆ (ಡಿಫರೆನ್ಸ್ ಪ್ರಿನ್ಸಿಪಲ್). ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಅಭಿವೃದ್ಧಿಯ ಫಲಗಳು ಹೆಚ್ಚು ಹೆಚ್ಚಾಗಿ ವಂಚಿತರಿಗೆ, ಸಮಾಜದಲ್ಲಿ ಅಂಚಿನಲ್ಲಿರುವವರಿಗೆ, ಸಾಮಾಜಿಕ ಪ್ರತ್ಯೇಕತನವನ್ನು ಅನುಭವಿಸುತ್ತಿರುವವರಿಗೆ ದೊರೆಯಬೇಕು. ಈ ಉದ್ದೇಶದಿಂದ ಉಪಯೋಜನೆಗಳನ್ನು ಜಾರಿಗೊಳಿಸಲಾಗಿದೆ. ಇದು ಸಾಮಾಜಿಕ ನ್ಯಾಯ ಸಿದ್ಧಾಂತ. ಕೇಂದ್ರ ಸರ್ಕಾರವು ಸದರಿ ಸಿದ್ಧಾಂತವನ್ನು ಪಾಲಿಸುವುದಿರಲಿ ಉಲ್ಲೇಖಿಸುವುದಕ್ಕೂ ಸಿದ್ಧವಿಲ್ಲ. ಕೇಂದ್ರದ ದೃಷ್ಟಿಕೋನವೇನಿದೆ ಅದು ಅಸ್ತಿತ್ವದಲ್ಲಿರುವ ಅಸಮಾನತೆಯನ್ನು ಊರ್ಜಿತಗೊಳಿಸುತ್ತದೆ ಮಾತ್ರವಲ್ಲ, ಅದನ್ನು ಉಲ್ಬಣಗೊಳಿಸುತ್ತದೆ.

**ಉಪಯೋಜನೆಗಳ ಕಾರ್ಯಸಾಧನೆ– ಒಂದು ವಿಮರ್ಶೆ**

ಉಪಯೋಜನೆಗಳಿಂದ ಪರಿಶಿಷ್ಟರಿಗೆ ಒಂದಲ್ಲ ಒಂದು ರೀತಿಯಲ್ಲಿ ನೆರವು ದೊರೆಯುತ್ತಿರಬಹುದು. ಕರ್ನಾಟಕದ ಹಿಂದುಳಿದ ಜಿಲ್ಲೆಗಳಲ್ಲಿ ಅಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಪ.ಜಾ. ಮತ್ತು ಪ.ಪಂ.ಗಳ ಜನಸಂಖ್ಯೆಯ ಪ್ರಮಾಣ ಶೇಕಡ ೩೦ರಷ್ಟು ಮೀರುತ್ತದೆ. ಇದು ರಾಜ್ಯಮಟ್ಟದಲ್ಲಿ ಶೇಕಡ ೨೪ರಷ್ಟಿದೆ. ಈ ಸಂಗತಿಗಳ ಕಡೆಗೆ ಸರ್ಕಾರ ಗಮನ ನೀಡಬೇಕಾಗುತ್ತದೆ. ವಾಸ್ತವವಾಗಿ ಪ.ಜಾ. ಮತ್ತು ಪ.ಪಂ.ಗಳ ಅಭಿವೃದ್ಧಿ ಅಂದರೆ ಹಿಂದುಳಿದ ಜಿಲ್ಲೆಗಳ ಅಭಿವೃದ್ಧಿ ಎಂದೇ ಭಾವಿಸ ಬೇಕಾಗುತ್ತದೆ. ಆದರೆ ಇದರ ಅನುಷ್ಠಾನ ತಳಮಟ್ಟದಲ್ಲಿ ತುಂಬ ದುರ್ಬಲವಾಗಿದೆ. ಇದರ ನಿರ್ವಹಣೆ ಹೇಳಿಕೊಳ್ಳುವಂತಿಲ್ಲ. ಇಡೀ ರಾಜ್ಯಕ್ಕೆ ಸಂಬಂಧಿಸಿದಂತೆ ಉಪಯೋಜನೆಗಳನ್ನು ರೂಪಿಸಲಾಗುತ್ತಿದೆ. ಆದರೆ ಪರಿಶಿಷ್ಟರ ಪ್ರಾದೇಶಿಕ ಆಯಾಮಕ್ಕೆ ಗಮನ ದೊರೆಯುತ್ತಿಲ್ಲ.

(೧) ಕರ್ನಾಟಕದಲ್ಲಿ ಪ.ಜಾ. ಮತ್ತು ಪ.ಪಂ. ಉಪಯೋಜನೆಗಳಿಗೆ ಅನುದಾನವನ್ನೇನೊ ಬಜೆಟ್ಟಿನಲ್ಲಿ ಘೋಷಿಸಲಾಗುತ್ತದೆ. ಆದರೆ ಅದರಲ್ಲಿ ಎಲ್ಲವನ್ನೂ ಬಿಡುಗಡೆ ಮಾಡುವುದಿಲ್ಲ. ಬಿಡುಗಡೆ ಮಾಡಿದ್ದನ್ನು ಪೂರ್ತಿ ಖರ್ಚು ಮಾಡುವುದಿಲ್ಲ. ಉದಾಹರಣೆಗೆ ೨೦೧೭–೧೮ರ ಕರ್ನಾಟಕ ಬಜೆಟ್ಟಿನಲ್ಲಿ ಪ.ಜಾ. ಉಪಯೋಜನೆಗೆ ನೀಡಲಾದ ಅನುದಾನದಲ್ಲಿ (ರೂ. ೧೯೭೭೬.೭೬ ಕೋಟಿ) ಡಿಸೆಂಬರ್ ೨೦೧೮ರವರೆಗೆ ವೆಚ್ಚವಾದ ಪ್ರಮಾಣ ಶೇಕಡ ೫೫.೦೪ ಮತ್ತು ಪ.ಪಂ. ಉಪಯೋಜನೆಗೆ ನೀಡಲಾದ ಅನುದಾನದಲ್ಲಿ (ರೂ.೮೦೧೭ ಕೋಟಿ) ವೆಚ್ಚವಾದ ಪ್ರಮಾಣ ಶೇಕಡ ೫೭.೭೪. ರಾಜ್ಯದ ೨೦೧೮–೧೯ನೇಯ ಸಾಲಿನ ಬಜೆಟ್‌ನ ಪ.ಜಾ. ಮತ್ತು ಪ.ಪಂ. ಉಪಯೋಜನೆಗಳಲ್ಲಿ ರಾಜ್ಯ ವಲಯದ ಪಾಲು ಶೇಕಡ ೮೦ಕ್ಕಿಂತ ಅಧಿಕವಿದ್ದರೆ ಜಿಲ್ಲಾ ವಲಯದ ಪಾಲು ಶೇಕಡ ೨೦ಕ್ಕಿಂತ ಕಡಿಮೆಯಿದೆ. ಈ ಕಾರಣದಿಂದಾಗಿ ಇದನ್ನು ರಾಜಧಾನಿ ಕೇಂದ್ರಿತ ಕಾರ್ಯಕ್ರಮವೆಂದು ಟೀಕಿಸಲಾಗುತ್ತಿದೆ. ಕರ್ನಾಟಕದಲ್ಲಿ ಇದು ಬದಲಾಗಬೇಕು.

(೨) ಎಲ್ಲಕ್ಕಿಂತ ಮುಖ್ಯವಾಗಿ ಕೇಂದ್ರ ಮತ್ತು ಕರ್ನಾಟಕ ರಾಜ್ಯದಲ್ಲಿ ಪ್ರತಿಯೊಂದು ಉಪಯೋಜನೆಯಲ್ಲಿಯೂ ೨೫೦–೩೦೦ ಕಾರ್ಯಕ್ರಮಗಳಿವೆ ಮತ್ತು ಅವುಗಳಲ್ಲಿ ೨೦–೩೦ ಲಕ್ಷ ರೂಪಾಯಿಯ ಕಾರ್ಯಕ್ರಮಗಳಿಂದ ನೂರಾರು/ಸಾವಿರಾರು ಕೋಟಿ ರೂಪಾಯಿಗಳ ಕಾರ್ಯಕ್ರಮಗಳಿವೆ. ಹೀಗೆ ಅನುದಾನವನ್ನು ಸಣ್ಣ ಸಣ್ಣ ಮೊತ್ತದಲ್ಲಿ ನೂರಾರು ಕಾರ್ಯಕ್ರಮಗಳ ಮೇಲೆ ಹರಡುವುದರಿಂದ ಅಲ್ಲಿ ಜನರ ಬದುಕಿನ ಮೇಲೆ ಕಾಣಬಹುದಾದಂತಹ ಪರಿಣಾಮ ಉಂಟಾಗುವುದು ಸಾಧ್ಯವಿಲ್ಲ. ಒಟ್ಟು ೩೮ ಇಲಾಖೆಗಳಿಗೆ ಅನುದಾನವನ್ನು ಎರಡೂ ಉಪಯೋಜನೆಗಳಲ್ಲಿ ಎರಡೂ ವಲಯಗಳಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಹಂಚಲಾಗುತ್ತದೆ. ಈ ಬಗೆಯ ಸಾಮಾನ್ಯೀಕರಣದಿಂದಾಗಿ ಉಪಯೋಜನೆಗಳು ನಿರ್ದಿಷ್ಟ ಪರಿಣಾಮವನ್ನು ಬೀರುವುದರಲ್ಲಿ ವಿಫಲವಾಗಿವೆ.

**ಅಲ್ಪಸಂಖ್ಯಾತರಿಗೆ ಬಜೆಟ್ಟಿನಲ್ಲೇನಿದೆ!**

ಕೇಂದ್ರ ಸರ್ಕಾರದ ಅಖಂಡ ನೀತಿಯ ಪರಿಣಾಮವಾಗಿ ಹೆಚ್ಚಿನ ಹಾನಿ ಅನುಭವಿಸುತ್ತಿರುವವರು ಅಲ್ಪಸಂಖ್ಯಾತರು. ಇದನ್ನು ಎಚ್ಚರಿಕೆಯಿಂದ ಗಮನಿಸಬೇಕು. ಕೇಂದ್ರ ಸರ್ಕಾರವು ಅಲ್ಪಸಂಖ್ಯಾತರಿಗೆ ೨೦೧೮–೧೯ರ ಬಜೆಟ್ಟಿನಲ್ಲಿ ನೀಡಿರುವ ಅನುದಾನ ರೂ. ೪೭೦೦ ಕೋಟಿ. ಆದರೆ ಕರ್ನಾಟಕ ಸರ್ಕಾರವು ಈ ಬಾಬ್ತಿಗೆ ರೂ. ೨೨೮೧ ಕೋಟಿ ತೆಗೆದಿರಿಸಿದೆ. ಕೇಂದ್ರದ ಅಲ್ಪಸಂಖ್ಯಾತರ ಬಜೆಟ್ ಒಟ್ಟು ಬಜೆಟ್ ವೆಚ್ಚದಲ್ಲಿ ಶೇಕಡ ೦.೧೯ ರಷ್ಟಾದರೆ ಕರ್ನಾಟಕದ್ದು ಶೇಕಡ ೧.೦೯ ರಷ್ಟಾಗುತ್ತದೆ.

(೩) ಸಾಮಾನ್ಯ ಅಭಿವೃದ್ಧಿ ಕಾರ್ಯಕ್ರಮಗಳಂತೆ ಉಪಯೋಜನೆ ಕಾರ್ಯಕ್ರಮಗಳನ್ನು ನಿರ್ವಹಿಸಿದರೆ ಅವು ಪರಿಣಾಮಕಾರಿಯಾಗಿ ಫಲ ನೀಡುವುದು ಸಾಧ್ಯವಿಲ್ಲ. ಈ ಉಪಯೋಜನೆಗಳನ್ನು ಪರಿಶೀಲಿಸಿದರೆ ಅಲ್ಲಿ ಪ.ಜಾ. ಮತ್ತು ಪ.ಪಂ. ವಿಶಿಷ್ಟತೆಯು ಕಾಣುವುದಿಲ್ಲ. ಸಾಮಾನ್ಯ ಅಭಿವೃದ್ಧಿ ಕಾರ್ಯಕ್ರಮಗಳಿಗೂ ಉಪಯೋಜನೆ ಕಾರ್ಯಕ್ರಮಗಳಿಗೂ ಭಿನ್ನತೆಯೇನಿಲ್ಲ. ಸಾಮಾನ್ಯ ಅಭಿವೃದ್ಧಿ ಕಾರ್ಯಕ್ರಮಗಳು ಪರಿಶಿಷ್ಟರ ಅಭಿವೃದ್ಧಿಯನ್ನು ನಿರ್ವಹಿಸಲು ಸಾಧ್ಯವಿಲ್ಲ ಎಂದು ಉಪಯೋಜನೆಗಳನ್ನು ರೂಪಿಸಲಾಗಿದೆ. ಆದರೆ ಅವುಗಳಲ್ಲಿ ಯಾವ ವಿಶಿಷ್ಟತೆಯೂ ಕಾಣುವುದಿಲ್ಲ. ಈ ಉಪಯೋಜನೆಗಳಲ್ಲಿ ಸಾಂಸ್ಥಿಕ ವ್ಯವಸ್ಥೆ ಅನ್ನುವುದು ಇಲ್ಲ. ಸಾಮಾನ್ಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿರ್ವಹಿಸುವ ಇಲಾಖೆಗಳೇ ಉಪಯೋಜನೆ ಕಾರ್ಯಕ್ರಮಗಳನ್ನು ಸಾಮಾನ್ಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿದಂತೆ ನಿರ್ವಹಿಸುತ್ತಿವೆ. ಅದೇ ಕಾಮಗಾರಿ, ಅದೇ ರಸ್ತೆ ಅಭಿವೃದ್ಧಿ, ಅದೇ ವಸತಿ, ಅದೇ ಕೊಳವೆ ಬಾವಿ, ಅದೇ ಗಟಾರ ಇತ್ಯಾದಿ.

(೪) ಈ ಉಪಯೋಜನೆಗಳಲ್ಲಿ ಬಂಡವಾಳ ನಿರ್ಮಾಣ ಮಾಡುವ ಕಾರ್ಯಕ್ರಮಗಳಲ್ಲಿ ಪರಿಶಿಷ್ಟರಿಗೆ ವಿಶಿಷ್ಟವಾದ ಮತ್ತು ಅವರಿಗೆ ಸಂಬಂಧಿಸಿದ ರೀತಿಯ ಬಂಡವಾಳ ನಿರ್ಮಾಣವಾಗುತ್ತಿಲ್ಲ. ರಸ್ತೆಗಳು, ಕೊಳವೆ ಬಾವಿ, ಸಮುದಾಯ ಭವನ ಮುಂತಾದವು ಸಾರ್ವಜನಿಕ ಬಂಡವಾಳ. ವೈಯಕ್ತಿಕ ಬಂಡವಾಳ ನಿರ್ಮಾಣ ಮಾಡುವಂತಹ ಕಾರ್ಯಕ್ರಮಗಳು ಇವುಗಳಲ್ಲಿ ಇಲ್ಲ.

(೫) ಈ ಉಪಯೋಜನೆಗಳಿಗೆ ನಿರ್ದಿಷ್ಟವಾದ ಮಹಿಳಾ ಆಯಾಮವಿಲ್ಲ. ಈ ಉಪಯೋಜನೆಗಳಿಗೆ ಕರ್ನಾಟಕದಲ್ಲಿ ೨೦೧೮–೧೯ನೇಯ ಸಾಲಿನಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಒದಗಿಸಲಾಗಿರುವ ಮೊತ್ತ ರೂ. ೧೬೫೬.೩೧ ಕೋಟಿ. ಒಟ್ಟು ಉಪಯೋಜನೆಗಳ ವೆಚ್ಚದಲ್ಲಿ ಇದರ ಪಾಲು ಶೇಕಡ ೫.೯೧ರಷ್ಟಾಗುತ್ತದೆ. ನಮ್ಮ ಸಮಾಜದಲ್ಲಿ ಅತ್ಯಂತ ಹೆಚ್ಚು ದುಃಸ್ಥಿತಿ ಅನುಭವಿಸುತ್ತಿರುವ ವರ್ಗವೆಂದರೆ ಪ.ಜಾ. ಮತ್ತು ಪ.ಪಂ. ಮಹಿಳೆಯರು. ಏಕೆಂದರೆ ಅವರು ಬಡವರಾಗಿ ಆರ್ಥಿಕ ಶೋಷಣೆಯನ್ನು, ಜಾತಿಯ ಕಾರಣವಾಗಿ ತಾರತಮ್ಯವನ್ನು ಮತ್ತು ಮಹಿಳೆಯರು ಅನ್ನುವ ಕಾರಣಕ್ಕೆ ಲಿಂಗ ಅಸಮಾನತೆಯನ್ನು ಎದುರಿಸುತ್ತಿದ್ದಾರೆ. ಉಳಿದ ಮಹಿಳೆಯರು ಬಡವರಾಗಿ

ಶೋಷಣೆಯನ್ನು ಮತ್ತು ಮಹಿಳೆಯರಾಗಿ ಲಿಂಗ ತಾರತಮ್ಯವನ್ನು ಮಾತ್ರ ಎದುರಿಸುತ್ತಾರೆ. ಇವರಿಗೆ ಜಾತಿ ಸಂಬಂಧಿ ಸಮಸ್ಯೆಯಿರುವುದಿಲ್ಲ. ಈ ಸಂಗತಿಗಳನ್ನು ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮಮಟ್ಟಗಳಲ್ಲಿ ಎದುರಿಸುವ ಬಗ್ಗೆ ಉಪಯೋಜನೆಗಳಲ್ಲಿ ಯಾವುದೇ ಕಾರ್ಯಕ್ರಮಗಳಿಲ್ಲ.

(೬) ಬಜೆಟ್ಟಿನಲ್ಲಿ ಪ.ಜಾ. ಮತ್ತು ಪ.ಪಂ.ಗಳ ಅಭಿವೃದ್ಧಿಗೆ ಅವರ ಜನಸಂಖ್ಯೆಗನುಗುಣವಾಗಿ ಅನುದಾನ ನೀಡಬೇಕೆಂಬುದಕ್ಕೆ ಸಂವಿಧಾನಾತ್ಮಕ ಕಡ್ಡಾಯವೇನಿಲ್ಲ. ಕರ್ನಾಟಕ ಸರ್ಕಾರವು ೨೦೧೩ರಲ್ಲಿ ತನ್ನದೇ ಶಾಸನವನ್ನು ರಚಿಸಿ ಬಜೆಟ್ಟಿನಲ್ಲಿ ಪ.ಜಾ. ಮತ್ತು ಪ.ಪಂ.ಗಳ ಜನಸಂಖ್ಯೆಗೆ ಅನುಗುಣವಾಗಿ ಅನುದಾನ ನೀಡುವ ಕ್ರಮವನ್ನು ಅನುಸರಿಸುತ್ತಿದೆ. ಆದರೆ ಯೋಜನೆ ಮತ್ತು ಯೋಜನೇತರ ಎಂಬ ಭಿನ್ನತೆ ರದ್ದಾದ ಮೇಲೆ ಅಲ್ಲಿಯೂ ಸಮಸ್ಯೆಗಳು ಉಂಟಾಗಿವೆ.

**ಭಾಗ ೩**

**ಬಜೆಟ್ಟುಗಳು ಮತ್ತು ಕೃಷಿ ಹಾಗೂ ಸಂಬಂಧಿ ವಲಯಗಳು**

ನಮ್ಮ ಕೃಷಿ ವಲಯವು ತೀವ್ರ ದುಃಸ್ಥಿತಿಯನ್ನು ಅನುಭವಿಸುತ್ತಿದೆ. ಅದರ ಬೆಳವಣಿಗೆ ಪ್ರಮಾಣವೂ ಸ್ಥಿರವಾಗಿಲ್ಲ ಮತ್ತು ಉತ್ತಮವಾಗಿಲ್ಲ. ಕೇಂದ್ರವು ೨೦೧೮-೧೯ರ ಬಜೆಟ್ಟಿನಲ್ಲಿ ಕೃಷಿ-ಕೃಷಿಕರ ಬಗ್ಗೆ ತೀವ್ರ ಆಸಕ್ತಿ ತೋರಿಸಿರುವಂತೆ ಕಾಣುತ್ತಿದೆ. ಕೇಂದ್ರವು ೨೦೧೮-೧೯ರಲ್ಲಿ ಕೃಷಿಗೆ ನೀಡಿರುವ ಅನುದಾನ ರೂ. ೬೩೮೩೬ ಕೋಟಿ. ಅದರ ಒಟ್ಟು ವೆಚ್ಚ ಶೇಕಡ ೨.೬೨. ಕರ್ನಾಟಕ ತನ್ನ ೨೦೧೮-೧೯ರ ಬಜೆಟ್ಟಿನಲ್ಲಿ ಕೃಷಿಗೆ ತೆಗೆದಿಟ್ಟಿರುವ ಅನುದಾನ ರೂ. ೯೫೩೦ ಕೋಟಿ. ಇದು ಒಟ್ಟು ಬಜೆಟ್ ವೆಚ್ಚದ ಶೇಕಡ ೪.೭೫ರಷ್ಟಾಗುತ್ತದೆ. ಕೇಂದ್ರವು ಅತ್ಯಂತ ಮಹತ್ವಾಕಾಂಕ್ಷೆಯಿಂದ ಘೋಷಿಸಿರುವ ಉತ್ಪಾದನಾ ವೆಚ್ಚದ ಮೇಲೆ ಶೇಕಡ ೫೦ ಲಾಭವನ್ನು ಲೆಕ್ಕ ಹಾಕಿ ಕನಿಷ್ಠ ಬೆಂಬಲ ಬೆಲೆಯನ್ನು ನಿಗದಿಪಡಿಸಲಾಗುವುದೆಂಬ ಯೋಜನೆಯು ರೈತರಲ್ಲಿ ಭರವಸೆಯನ್ನು ಮೂಡಿಸಿಲ್ಲ. ಏಕೆಂದರೆ ವಿತ್ತ ಮಂತ್ರಿ ಅವರು ಕೃಷಿ ವೆಚ್ಚ ಮತ್ತು ಬೆಲೆ ಆಯೋಗವು ಶಿಫಾರಸ್ಸು ಮಾಡಿರುವ 'ಸಿ೨' ಉತ್ಪಾದನಾ ವೆಚ್ಚದ ಮಾಪನಕ್ಕೆ ಪ್ರತಿಯಾಗಿ 'ಎ೨ + ಎಫ್‌ಎಲ್' ಆಧಾರದ ಉತ್ಪಾದನಾ ವೆಚ್ಚದ ಮೇಲೆ ಶೇ.೫೦ ಲಾಭವನ್ನು ಕೂಡಿಸಿ ಕನಿಷ್ಠ ಬೆಂಬಲ ಬೆಲೆ ನೀಡುವುದಾಗಿ ವಿವರಿಸಿದ್ದಾರೆ. ಆದರೆ ರೈತರ ಬೇಡಿಕೆ ಸಿ೨ ಮೇಲೆ ಶೇಕಡ ೫೦ ಲಾಭದ ಕನಿಷ್ಠ ಬೆಂಬಲ ಬೆಲೆ.

**ಕೃಷಿಯಲ್ಲಿನ ಉತ್ಪಾದನಾ ವೆಚ್ಚದ ವಿವಿಧ ಮಾಪಕಗಳು**

ಕೃಷಿಯಲ್ಲಿನ ಉತ್ಪಾದನಾ ವೆಚ್ಚದ ಮೂರು ಮಾಪಕಗಳು ಚರ್ಚೆಯಲ್ಲಿವೆ. ಮೊದಲನೆಯದು 'ಎ೨' ಎಂಬ ಮಾಪಕ. ರೈತರು ಸಾಗುವಳಿಯಲ್ಲಿ ಬೀಜ, ಗೊಬ್ಬರ, ಔಷಧಿ, ಕೂಲಿ, ಯಂತ್ರಗಳ ಬಾಡಿಗೆ, ನೀರಾವರಿ, ಇಂಧನ ಮುಂತಾದವುಗಳಿಗೆ ಮಾಡುವ ನಗದು ಅಥವಾ ವಸ್ತು ರೂಪದ ವೆಚ್ಚವನ್ನು ಆಧಾರ ಮಾಡಿಕೊಂಡು ಇದನ್ನು ಲೆಕ್ಕ ಹಾಕಲಾಗುತ್ತದೆ. ಸಾಗುವಳಿಯಲ್ಲಿ ಕುಟುಂಬದ ಸದಸ್ಯರು ದುಡಿಯುತ್ತಿರುತ್ತಾರೆ. ಅವರು ತಮ್ಮದೇ ಹೊಲದಲ್ಲಿ ದುಡಿಯುವುದಕ್ಕೆ ಪ್ರತಿಯಾಗಿ ಬೇರೆ ಕಡೆ ದುಡಿದಿದ್ದರೆ ಅವರಿಗೆ ಕೂಲಿ ದೊರೆಯುತ್ತಿತ್ತು. ಅದನ್ನು ಬಿಟ್ಟುಕೊಟ್ಟು ಅವರು ತಮ್ಮದೇ ಜಮೀನಿನಲ್ಲಿ ಈಗ ದುಡಿಯುತ್ತಿದ್ದಾರೆ. ಆದ್ದರಿಂದ ಅವರು ಬಿಟ್ಟುಕೊಟ್ಟ ಕೂಲಿಯನ್ನು ಇಲ್ಲಿ ವೆಚ್ಚವಾಗಿ ಸೇರಿಸಬೇಕು ಎಂಬುದು ಒಂದು ವಾದ. ಈ ವೆಚ್ಚವನ್ನು 'ಎಫ್‌ಎಲ್' ಎಂದು ಕರೆಯುತ್ತಾರೆ. ಈಗಾಗಲೆ ಸರ್ಕಾರಗಳು ನೀಡುತ್ತಿರುವ ಕನಿಷ್ಠ ಬೆಂಬಲ ಬೆಲೆಯು 'ಎ೨ + ಎಫ್‌ಎಲ್' ಮೇಲೆ ಶೇಕಡ ೫೦ರಷ್ಟು ಲಾಭವನ್ನು ಆಧಾರ ಮಾಡಿಕೊಂಡಿದೆ. ಇದರಿಂದ ರೈತರಿಗೆ ಅನುಕೂಲವಾಗುವುದಿಲ್ಲ. ಅವರ ಬೇಡಿಕೆಯೆಂದರೆ ಮೂರನೆಯ ಮಾಪಕವಾದ ಸಿ೨ ಮೇಲೆ ಶೇಕಡ ೫೦ರಷ್ಟು ಲಾಭವನ್ನು ಆಧಾರ ಮಾಡಿಕೊಂಡ ಕನಿಷ್ಠ ಬೆಂಬಲ ಬೆಲೆ ನೀಡಬೇಕು ಎಂಬುದಾಗಿದೆ. ಈ ಸಿ೨ ಅನ್ನುವುದು ಎ೨ ಮತ್ತು ಎಫ್‌ಎಲ್ ಜೊತೆಗೆ ರೈತರು ಸಾಗುವಳಿಗೆ ಬಳಸಿದ ಭೂಮಿ ಮತ್ತು ಬಂಡವಾಳ ಸರಕುಗಳ ಮೇಲಿನ ಬಾಡಿಗೆ ಅಥವಾ ಬಡ್ಡಿಯನ್ನು ಒಳಗೊಂಡಿರುತ್ತದೆ. ಇದನ್ನು ವಿಸ್ತೃತವಾದ ಉತ್ಪಾದನಾ ವೆಚ್ಚ ಎಂದು ಕರೆಯಲಾಗುತ್ತದೆ. ಕನಿಷ್ಠ ಬೆಂಬಲ ಬೆಲೆಯನ್ನು ಸಿ೨ + ಶೇಕಡ ೫೦ ಲಾಭವನ್ನು ಆಧಾರ ಮಾಡಿಕೊಂಡು ನೀಡಿದರೆ ಮಾತ್ರ ರೈತರಿಗೆ ನಾಲ್ಕು ಕಾಸು ಕೈಯಲ್ಲುಳಿಯುತ್ತದೆ. ಇನ್ನೂ ಮುಂದೆ ಹೋಗಿ ಕೃಷಿ ವೆಚ್ಚ ಮತ್ತು ಬೆಲೆಗಳ ಆಯೋಗವು 'ಸಿ೩' ಎಂಬ ಮಾಪಕವನ್ನು ರೂಪಿಸಿದೆ. ಸಿ೨ಗೆ ಅದರ ಶೇಕಡ ೧೦ರಷ್ಟನ್ನು ಸಾಗುವಳಿಯ ನಿರ್ವಹಣಾ ವೆಚ್ಚವಾಗಿ ಸೇರಿಸಿದರೆ ಅದು ಸಿ೩ ದೊರೆಯುತ್ತದೆ. ಹೀಗೆ ರೈತರು ಸಂಕಷ್ಟದಿಂದ ಹೊರಬರಬೇಕೆಂದರೆ ಅವರಿಗೆ ಸಿ೩ ಸಾಗುವಳಿ ವೆಚ್ಚದ ಮೇಲೆ ಶೇಕಡ ೫೦ ಲಾಭ ಸೇರಿಸಿ ಕನಿಷ್ಠ ಬೆಂಬಲ ಬೆಲೆ ನಿರ್ಧರಿಸಿದರೆ ಅದರಿಂದ ಅವರು ಉಸಿರು ಬಿಟ್ಟುಕೊಳ್ಳಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಖಾಸಗಿ ಮಾರುಕಟ್ಟೆ ವಿಷಚಕ್ರದಿಂದ ಅವರಿಗೆ ಬಿಡುಗಡೆ ದೊರೆಯುತ್ತದೆ. ಆದರೆ ಇದಕ್ಕೆ ಕೇಂದ್ರ ಸರ್ಕಾರ ಸಿದ್ಧವಿಲ್ಲ. ಅಂದಮೇಲೆ ಕೇಂದ್ರದ ಬಜೆಟ್ 'ರೈತ ಸ್ನೇಹಿ' ಆಗುವುದು ಸಾಧ್ಯವಿಲ್ಲ. ಕೇಂದ್ರ ಘೋಷಿಸಿರುವ ಸಾಗುವಳಿ ವೆಚ್ಚದ ಮೇಲೆ ಶೇಕಡ ೫೦ರಷ್ಟು ಲಾಭ ಆಧಾರ ಮಾಡಿಕೊಂಡ ಕನಿಷ್ಠ ಬೆಂಬಲ ಬೆಲೆ ನೀತಿ ಹೊಸದೇನಲ್ಲ.

ನಮ್ಮ ಕೃಷಿಯು ಎದುರಿಸುತ್ತಿರುವ ತೀವ್ರ ಬಿಕ್ಕಟ್ಟಿಗೆ ಕನಿಷ್ಠ ಬೆಂಬಲ ಬೆಲೆಯು ಸಂಜೀವಿನಿಯಾಗಲಾರದು. ಏಕೆಂದರೆ ಪ್ರಖ್ಯಾತ ಕೃಷಿ ತಜ್ಞ ಅಶೋಕ್ ಗುಲಾಟಿ ಹೇಳುವಂತೆ ಕನಿಷ್ಠ ಬೆಂಬಲ ಬೆಲೆಯು ಎರಡು-ಮೂರು ಬೆಳೆಗಳಿಗೆ ಮಾತ್ರ ಅನುಕೂಲವಾಗುತ್ತಿದೆ ಮತ್ತು ಇದು ದೇಶದ ೫-೬ ರಾಜ್ಯಗಳ ರೈತರಿಗೆ ಮಾತ್ರ ಸೀಮಿತವಾಗಿದೆ. ಅವರ ಪ್ರಕಾರ ದೇಶದಲ್ಲಿನ ಒಟ್ಟು ರೈತರಲ್ಲಿ ಕೇವಲ ಶೇಕಡ ೧೦ರಷ್ಟು ಮಂದಿಗೆ ಮಾತ್ರ ಅದರ ಲಾಭ ದೊರೆಯುತ್ತಿದೆ. ಕೃಷಿಯ ಬಿಕ್ಕಟ್ಟನ್ನು ಕೇಂದ್ರ ಬಜೆಟ್ಟಿನಲ್ಲಿ ಘೋಷಿಸಿರುವ ಕೃಷಿ ಕಾರ್ಯಕ್ರಮಗಳಿಂದ ಪರಿಹರಿಸುವುದು ಅಸಾಧ್ಯ. ಕೃಷಿಯು ಮೂಲಭೂತ ಸಮಸ್ಯೆಯನ್ನು ಎದುರಿಸುತ್ತಿದೆ. ಕೃಷಿಯಲ್ಲಿ ಬಂಡವಾಳ ಹೂಡಿಕೆ ತಳ ಮುಟ್ಟಿದೆ. ನೀರಾವರಿಯು – ಅದು ಮೇಲ್ಮೈ ನೀರನ್ನು ಅವಲಂಬಿಸಿದ ನೀರಾವರಿಯಾಗಲಿ ಅಥವಾ ಕೊಳವೆ ಬಾವಿ ನೀರಾವರಿಯಾಗಲಿ – ಶಾಶ್ವತ ಪರಿಹಾರವಾಗಲಾರದು. ಕಾಲುವೆ ನೀರಾವರಿಗೆ ಪ್ರತಿಯಾಗಿ ಹನಿ/ತುಂತುರು ನೀರಾವರಿ ಹಾಗೂ ನೀರಿನ ರಕ್ಷಣಾತ್ಮಕ ನಿರ್ವಹಣೆ ಮತ್ತು ಕೊಳವೆ ಬಾವಿಗಳಿಗೆ ವಿದ್ಯುತ್ ಸಹಾಯಧನಕ್ಕೆ ಪ್ರತಿಯಾಗಿ ನೇರ ನಗದು ವರ್ಗಾವಣೆ ಮುಂತಾದ ಕ್ರಮಗಳ ಬಗ್ಗೆ ನಾವು ಯೋಚಿಸುವ ಅಗತ್ಯವಿದೆ. ಆರ್ಥಿಕ ಸಮೀಕ್ಷೆಯಲ್ಲಿ ಅರವಿಂದ ಸುಬ್ರಮಣಿಯನ್ ಎಚ್ಚರಿಸಿರುವಂತೆ ವಾತಾವರಣ ಬದಲಾವಣೆಯ ಪರಿಣಾಮವಾಗಿ ಕೃಷಿಯಲ್ಲಿ ಮುಂದಿನ ವರ್ಷಗಳಲ್ಲಿ ಉತ್ಪಾದನೆಯು ಶೇಕಡ ೨೫ರಷ್ಟು ಕುಸಿಯುವ ಸಾಧ್ಯತೆಯನ್ನು ಗಂಭೀರವಾಗಿ



ಪರಿಗಣಿಸುವ ಅಗತ್ಯವಿದೆ. ವಾತಾವರಣದಲ್ಲಿ ಏರುತ್ತಿರುವ ತಾಪಮಾನ ಮತ್ತು ಮಳೆಯ ಅನಿಶ್ಚಿತತೆ – ನಮ್ಮ ಕೃಷಿಯನ್ನು ಕಾಡುತ್ತಿರುವ ಪ್ರಮುಖ ಸಮಸ್ಯೆಗಳಾಗಿವೆ. ಕೃಷಿ ಮತ್ತು ತತ್ಸಬಂಧಿ ವಲಯವು ದೇಶದ ಜಿಡಿಪಿಗೆ ನೀಡುತ್ತಿರುವ ಕಾಣಿಕೆ ಕೇವಲ ಶೇಕಡ ೧೬. ಆದರೆ ಕೃಷಿಯನ್ನು ಅವಲಂಬಿಸಿರುವವರ ಪ್ರಮಾಣ ಮಾತ್ರ ಇನ್ನೂ ಶೇಕಡ ೫೦ರಷ್ಟಿದೆ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹತ್ತಿ, ಸಕ್ಕರೆ, ಬೇಳೆಕಾಳು ಮುಂತಾದ ಕೃಷಿ ಉತ್ಪನ್ನಗಳ ಬೇಡಿಕೆ ಕುಸಿದಿದೆ. ನಮ್ಮ ದೇಶದಲ್ಲಿ ಮತ್ತು ಕರ್ನಾಟಕದಲ್ಲಿ ಕೃಷಿ ಮಾರುಕಟ್ಟೆಯು ವ್ಯಾಪಾರಗಾರರ–ಗ್ರಾಹಕರ ಪರವಾಗಿದೆಯೇ ವಿನಾ ರೈತರ ಪರವಾಗಿಲ್ಲ.

ರಾಜ್ಯ ಸರ್ಕಾರದ ಒಂದು ಉತ್ತಮವಾದ ೨೦೧೮–೧೯ರ ಬಜೆಟ್ಟಿನಲ್ಲಿ ಘೋಷಿಸಿರುವ ಕ್ರಮವೆಂದರೆ 'ರೈತ ಬೆಳಕು' ಕಾರ್ಯಕ್ರಮ. ಈ ಕಾರ್ಯಕ್ರಮದ ಪ್ರಕಾರ ಮಳೆಯಾಶ್ರಿತ ರೈತರಿಗೆ ವಾರ್ಷಿಕ ಹೆಕ್ಟೇರಿಗೆ ರೂ. ೫೦೦೦ ಸಹಾಯಧನವನ್ನು ಗರಿಷ್ಠ ರೂ. ೧೦೦೦೦ವರೆಗೆ ಪ್ರತಿ ರೈತನಿಗೆ ನೀಡಲಾಗುತ್ತದೆ. ಇದಕ್ಕಾಗಿ ೨೦೧೮–೧೯ರ ಬಜೆಟ್ಟಿನಲ್ಲಿ ರೂ. ೩೫೦೦ ಕೋಟಿ ಮೀಸಲಿಡಲಾಗಿದೆ. ಈ ಯೋಜನೆಯಿಂದಾಗಿ ರಾಜ್ಯದ ಒಣಭೂಮಿ ಅವಲಂಬಿತ ೭೦ ಲಕ್ಷ ರೈತರಿಗೆ ಅನುಕೂಲವಾಗುತ್ತದೆ. ಕೇಂದ್ರವೂ ಕೂಡ ಹೀಗೆ ಒಣಭೂಮಿ ಬೇಸಾಯದ ರೈತರಿಗೆ ನೇರವಾಗಿ ನಗದು ವರ್ಗಾವಣೆ ನೀಡುವ ಕ್ರಮವನ್ನು ಜಾರಿಗೊಳಿಸುವುದು ಅಗತ್ಯ.

## ಭಾಗ ೪

### ವಿತ್ತೀಯ ಶಿಸ್ತು: ಕೇಂದ್ರ ಮತ್ತು ಕರ್ನಾಟಕದ ಸಾಧನೆಗಳು

ಕೇಂದ್ರ ಸರ್ಕಾರವು ತನ್ನ ಬಜೆಟ್ ನಿರ್ವಹಣೆಯಲ್ಲಿ ವಿತ್ತೀಯ ಶಿಸ್ತನ್ನು ಪಾಲಿಸುತ್ತಿಲ್ಲ ಎಂದು ಅದನ್ನು ತೀವ್ರವಾಗಿ ಟೀಕಿಸಲಾಗುತ್ತಿದೆ. ಕೇಂದ್ರದ ೨೦೧೭–೧೮ನೆಯ ಸಾಲಿನ ಬಜೆಟ್ಟು ಅಂದಾಜಿನಂತೆ ರೆವಿನ್ಯೂ ಕೊರತೆ ಮತ್ತು ವಿತ್ತೀಯ ಕೊರತೆಗೆ ನಿಗದಿಪಡಿಸಿದ್ದ ಪ್ರಮಾಣ ಕ್ರಮವಾಗಿ ಒಟ್ಟು ಆಂತರಿಕ ಉತ್ಪನ್ನದ ಶೇಕಡ ೧.೯ ಮತ್ತು ಶೇಕಡ ೩.೨. ಇವೆರಡನ್ನು ಪಾಲಿಸುವುದು ಸರ್ಕಾರಕ್ಕೆ ಸಾಧ್ಯವಾಗಿಲ್ಲ. ನಿರೀಕ್ಷೆಗೆ ಪ್ರತಿಯಾಗಿ ೨೦೧೭–೧೮ರಲ್ಲಿ ರೆವಿನ್ಯೂ ಕೊರತೆ ಶೇಕಡ ೨.೬ರಷ್ಟಾಗಿದ್ದರೆ ವಿತ್ತೀಯ ಕೊರತೆಯು ಶೇಕಡ ೩.೫ರಷ್ಟಾಗಿದೆ. ಇದಕ್ಕೆ ಮುಖ್ಯ ಕಾರಣ ನೋಟು ಅಮಾನ್ಯೀಕರಣ ಮತ್ತು ಜಿಎಸ್‌ಟಿ. ಇವೆರಡೂ ಕ್ರಮಗಳಿಗೆ ಸಂಬಂಧಿಸಿದಂತೆ ಕೇಂದ್ರದ ವಿತ್ತ ಮಂತ್ರಿ ಅಮಾನ್ಯೀಕರಣದಿಂದ ಜಿಡಿಪಿಯಲ್ಲಿ ಶೇಕಡ ೨ರಷ್ಟು ಏರಿಕೆಯಾಗುತ್ತದೆ ಎಂದೂ, ಜಿಎಸ್‌ಟಿಯಿಂದಲೂ ಜಿಡಿಪಿಯಲ್ಲಿ ಶೇಕಡ ೨ರಷ್ಟು ಏರಿಕೆಯಾಗುತ್ತದೆ ಎಂದೂ ಯಾವುದೇ ಅಧ್ಯಯನಗಳ ಆಧಾರವಿಲ್ಲದೆ ಘೋಷಿಸುತ್ತಾ ಬಂದಿದ್ದಾರೆ. ಅದಾವುದೂ ನಿಜವಾಗಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಜಿಡಿಪಿಯ ಬೆಳವಣಿಗೆ ದರವು ಕುಂಠಿತಗೊಂಡಿದೆ.

ವಿತ್ತೀಯ ಶಿಸ್ತು ಅನ್ನುವುದನ್ನು ಮೂರು ಸೂಚಿಗಳ ಆಧಾರದ ಮೇಲೆ ನಿರ್ಧರಿಸಲಾಗುತ್ತದೆ. (೧) ರೆವಿನ್ಯೂ ಖಾತೆಯಲ್ಲಿ ಕೊರತೆ ಇರಬಾರದು. (೨) ವಿತ್ತೀಯ ಕೊರತೆಯು ಒಟ್ಟು ಆಂತರಿಕ ಉತ್ಪನ್ನದ ಶೇ.೩ ಮೀರಬಾರದು. ಮತ್ತು (೩) ಸಾಲದ ಬಡ್ಡಿಯ ಪಾವತಿಯು ರೆವಿನ್ಯೂ ಸ್ವೀಕೃತಿಯ ಶೇಕಡ ೧೦ರಷ್ಟು ಮೀರಬಾರದು. ಈ ಮೂರು ಸೂಚಿಗಳನ್ನು ಕರ್ನಾಟಕ ಪಾಲಿಸುತ್ತಿದೆ. ಕೇಂದ್ರದ ರೆವಿನ್ಯೂ ಕೊರತೆಯ ೨೦೧೭–೧೮ರಲ್ಲಿ ಒಟ್ಟು ಆಂತರಿಕ ಉತ್ಪನ್ನದ ಶೇಕಡ ೨.೬ರಷ್ಟಾಗಿದೆ ಮತ್ತು ವಿತ್ತೀಯ ಕೊರತೆಯು ಒಟ್ಟು ಆಂತರಿಕ ಉತ್ಪನ್ನದ ಶೇಕಡ ೩.೫ರಷ್ಟಾಗಿದೆ. ಕೇಂದ್ರದ ಸಾಲದ ಮೇಲಿನ ಬಡ್ಡಿ ಪಾವತಿಯು ೨೦೧೮–೧೯ರಲ್ಲಿ ರೂ. ೫.೭೫ ಲಕ್ಷ ಕೋಟಿ. ಇದು ಅದರ ರೆವಿನ್ಯೂ ಸ್ವೀಕೃತಿಯ (ರೂ.೧೭.೨೫ ಲಕ್ಷ ಕೋಟಿ) ಶೇಕಡ ೩೩.೩೩ರಷ್ಟಾಗುತ್ತದೆ. ಆದರೆ ಕರ್ನಾಟಕದ ಬಡ್ಡಿ ಪಾವತಿ ೨೦೧೮–೧೯ರಲ್ಲಿ ರೂ.೧೬೨೦೮ ಕೋಟಿ. ಇದು ರಾಜ್ಯದ ರೆವಿನ್ಯೂ ಸ್ವೀಕೃತಿಯ ಶೇಕಡ ೯.೯೫ರಷ್ಟಾಗುತ್ತದೆ. ಒಟ್ಟಾರೆ, ವಿತ್ತೀಯ ಶಿಸ್ತಿನ ದೃಷ್ಟಿಯಿಂದ ಕರ್ನಾಟಕ ಉತ್ತಮ ಸ್ಥಿತಿಯಲ್ಲಿದೆ. ಕೇಂದ್ರದ ವಿತ್ತೀಯ ಸ್ಥಿತಿಯು ಅಮಾನ್ಯೀಕರಣದಿಂದ ಮತ್ತು ಜಿಎಸ್‌ಟಿಯಿಂದಾಗಿ ಅಸ್ಥಿರವಾಗಿದೆ ಮತ್ತು ಅದನ್ನು ಸೂಕ್ತವಾಗಿ ನಿರ್ವಹಿಸಲು ಸರ್ಕಾರಕ್ಕೆ ಸಾಧ್ಯವಾಗುತ್ತಿಲ್ಲ.

ಒಟ್ಟಾರೆ, ಸಿದ್ದರಾಮಯ್ಯ ತಮ್ಮ ಬಜೆಟ್ ಭಾಷಣದಲ್ಲಿ ಹೇಳಿದಂತೆ ಬಜೆಟ್ ಅನ್ನುವುದು ಅಂಕಿಅಂಶಗಳ ಗೂಡಲ್ಲ ಅಥವಾ ಅದು ಕಳೆಯುವ–ಕೂಡುವ ಲೆಕ್ಕಪತ್ರದ ಖಾತೆಯಲ್ಲ. ಪ್ರತಿಯೊಬ್ಬ ಪ್ರಜೆಯ ದೈನಂದಿನ ಬದುಕಿನ ಮೇಲೆ ಪ್ರಭಾವ ಬೀರುವ ಒಂದು ಕ್ರಮ, ಬಜೆಟ್. ಬಜೆಟ್ಟಿನಲ್ಲಿನ ಅನುದಾನಗಳು, ಅದರಲ್ಲಿ ಘೋಷಿಸುವ ಕಾರ್ಯಕ್ರಮಗಳು, ಅಲ್ಲಿ ಪ್ರಕಟವಾಗುವ ನೀತಿ–ಧೋರಣೆ ಅದರ ಒಂದು ಮುಖವಾದರೆ ಅದರ ಅನುಷ್ಠಾನ, ಆಡಳಿತ, ಹಣಕಾಸಿನ ನಿರ್ವಹಣೆಯಲ್ಲಿ ಕಾರ್ಯಕ್ಷಮತೆ ಮತ್ತೊಂದು ಬಹುಮುಖ್ಯವಾದ ಮುಖವಾಗಿದೆ. ಕರ್ನಾಟಕದ ೨೦೧೮–೧೯ರ ಸಾರ್ವಜನಿಕ ವೆಚ್ಚ ರೂ. ೨.೦೯ ಲಕ್ಷ ಕೋಟಿ. ಕೇಂದ್ರದ್ದು ರೂ. ೨೪.೪೨ ಲಕ್ಷ ಕೋಟಿ. ಇವೆಲ್ಲ ಸಣ್ಣ ಮೊತ್ತವಲ್ಲ. ಈ ವಿನಿಯೋಜನೆ ಮೇಲೆ ಪ್ರತಿಫಲವೇನು? ಸಾರ್ವಜನಿಕ ವೆಚ್ಚದ ಉತ್ಪಾದಕತೆಯ ಬಗ್ಗೆ ಗಮನ ನೀಡುವ ಅಗತ್ಯವಿದೆ. ಆದ್ದರಿಂದ ಬಜೆಟ್, ಬಜೆಟ್ ಅನುದಾನ ಮುಖ್ಯ ನಿಜ. ಅದರ ಆಡಳಿತ ನಿರ್ವಹಣೆಯೂ ಅಷ್ಟೇ ಮುಖ್ಯ. ಕರ್ನಾಟಕದಲ್ಲಿ ಬಜೆಟ್ಟಿನ ಅನುದಾನಗಳಲ್ಲಿ ಖರ್ಚಾಗುವ ಪ್ರಮಾಣ ಬಹಳ ಕಡಿಮೆ. ಉದಾಹರಣೆಗೆ, ೧೧೪ ಹಿಂದುಳಿದ ತಾಲ್ಲೂಕುಗಳ ವಿಶೇಷ ಅಭಿವೃದ್ಧಿ ಯೋಜನೆಗೆ ೨೦೧೭–೧೮ರಲ್ಲಿ ನೀಡಿದ್ದ ಅನುದಾನ ರೂ.೩೦೦೦ ಕೋಟಿಯಲ್ಲಿ ಡಿಸೆಂಬರ್ ೨೦೧೮ರವರೆಗೆ ಖರ್ಚಾಗಿರುವ ಮೊತ್ತ ರೂ. ೧೨೭೮.೯೫ ಕೋಟಿ (ಶೇ.೪೨.೬೩). ಅದೇ ರೀತಿಯಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ೨೦೧೭–೧೮ರಲ್ಲಿ ನೀಡಿದ್ದ ರೂ. ೧೦೦೦ ಕೋಟಿ ಅನುದಾನದಲ್ಲಿ ಡಿಸೆಂಬರ್ ಕೊನೆವರೆಗೆ ಖರ್ಚಾಗಿರುವ ಮೊತ್ತ ಕೇವಲ ರೂ. ೧೭೪.೨೯ ಕೋಟಿ (ಕರ್ನಾಟಕ ಆರ್ಥಿಕ ಸಮೀಕ್ಷೆ: ೨೦೧೭–೧೮. ಪುಟ. ೭೪೨).

ಆಡಳಿತ ನಿರ್ವಹಣೆ ಅನ್ನುವುದು ರಾಜಕೀಯ ಪ್ರಶ್ನೆಯೂ ಹೌದು ಮತ್ತು ಆಡಳಿತಗಾರರ/ಆಡಳಿತ ವ್ಯವಸ್ಥೆಯ ಪ್ರಶ್ನೆಯೂ ಹೌದು. ಕರ್ನಾಟಕದಲ್ಲಿ ಸದ್ಯ ಅಭಿವೃದ್ಧಿಗೆ ಯಮಕಂಟಕವಾಗಿರುವ ಸಂಗತಿಯೆಂದರೆ ಆಡಳಿತ ಕಾರ್ಯಕ್ಷಮತೆಯ ದುಃಸ್ಥಿತಿ/ದೌರ್ಬಲ್ಯ. ಅಭಿವೃದ್ಧಿ ಬಗ್ಗೆ ಕೇಂದ್ರವು ಓತಪ್ರೋತವಾಗಿ ಮಾತನಾಡುತ್ತಿದೆ. ಆದರೆ ವಾಸ್ತವವಾಗಿ ನಡೆದಿರುವುದೇ ಬೇರೆ. ಕೇಂದ್ರದ ಸಮಸ್ಯೆಯೆಂದರೆ ಅಲ್ಲಿ ಅಭಿವೃದ್ಧಿಯ ಮಂತ್ರ ಅನ್ನುವುದು ಕೆಲವರ ಭಾಷಣಕ್ಕೆ ಸೀಮಿತವಾಗಿದೆ. ಅಲ್ಲಿ ಕೋಮು ದ್ವೇಷವನ್ನು ಕಾರುವುದಕ್ಕೆ ಒಂದು ಪಡೆಯಿದ್ದರೆ, ಯಾವುದು ಸಮಸ್ಯೆಯಲ್ಲವೋ ಅದನ್ನು ಸಮಸ್ಯೆಯನ್ನಾಗಿ ಮಾಡುವ ದಂಡು ಇನ್ನೊಂದು ಕಡೆಗಿದೆ. ಇದರಲ್ಲಿ ಅದು ಒಂದು ವಿಧಾನವನ್ನು ಅನುಸರಿಸುತ್ತಿರುವಂತೆ ಕಾಣುತ್ತಿದೆ. ಕರ್ನಾಟಕದ್ದು ಬಹುವಚನ ಬಜೆಟ್ಟಾದರೆ ಕೇಂದ್ರದ್ದು ಏಕವಚನ ಬಜೆಟ್. ಒಟ್ಟಾರೆ ಅಭಿವೃದ್ಧಿ ಅನ್ನುವುದು ಮಹಿಳೆಯರನ್ನು ಸೇರಿಸಿಕೊಂಡು ಜನರಿಗೆ, ಜನರ ಬದುಕಿಗೆ ಸಂಬಂಧಿಸಿದ ಸಂಗತಿ ಅನ್ನುವುದನ್ನು ನಾವು ಮನದಟ್ಟು ಮಾಡಿಕೊಳ್ಳುವ ಅಗತ್ಯವಿದೆ. ಅಭಿವೃದ್ಧಿಯಲ್ಲಿ ಜನರು ಕೇವಲ ಸಂಪನ್ಮೂಲ ಮಾತ್ರವಲ್ಲ, ಅವರು ಅದರ ಫಲಗಳ ಹಕ್ಕುದಾರರೂ ಆಗಿದ್ದಾರೆ.

**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ಸಮಾಲೋಚಕ, ನಾಲ್ಕನೆಯ ರಾಜ್ಯ ಹಣಕಾಸು ಆಯೋಗ
(ಕರ್ನಾಟಕ ಸರ್ಕಾರ) ದಕ್ಷಿಣ ಭಾಗ, ಮೂರನೆಯ ಮಹಡಿ, ಖನಿಜ ಭವನ
ರೇಸ್ ಕೋರ್ಸ್ ರಸ್ತೆ, ಬೆಂಗಳೂರು – ೫೬೦ ೦೦೧



ಇದೇ ಫೆಬ್ರವರಿಯಲ್ಲಿ ಅಖಿಲ ಭಾರತ ಜನತಾ ವಿಜ್ಞಾನ ಸಮಾವೇಶವು ಭುವನೇಶ್ವರದಲ್ಲಿ ಜರುಗಿತು. ಅದರ ಉದ್ಘಾಟನಾ ಸಮಾರಂಭದಲ್ಲಿ ಒಡಿಶಾದ ಒಬ್ಬ ಸಚಿವರು, ಭುವನೇಶ್ವರದಲ್ಲಿರುವ ರಾಷ್ಟ್ರೀಯ ವಿಜ್ಞಾನ ಶಿಕ್ಷಣ ಮತ್ತು ಸಂಶೋಧನಾ ಸಂಸ್ಥೆ (ನೈಸರ್)ಯ ನಿರ್ದೇಶಕರು, ಜನತಾ ವಿಜ್ಞಾನ ಚಳುವಳಿಯ ಅಧ್ಯಕ್ಷರು, ಮುಂತಾಗಿ ಹಲವರು ಭಾಗವಹಿಸಿದ್ದರು. ಸಮಾವೇಶವು ಮೂರು ದಿನ ನಡೆಯಿತು. ಉದ್ಘಾಟನಾ ಸಮಾರಂಭದಲ್ಲಿ ಜಿ. ಆರ್. ನೀಡಿದ ಉಪನ್ಯಾಸದ ವಿಸ್ತೃತ ರೂಪ ಇಲ್ಲಿದೆ.

# ವೈಜ್ಞಾನಿಕ ಹಾದಿಯತ್ತ

ಡಾ॥ ಜಿ. ರಾಮಕೃಷ್ಣ

**ಕ**ರ್ನಾಟಕದ ಧಾರವಾಡದಲ್ಲಿ ಫೆಬ್ರವರಿ ೩ರಂದು ವಿದ್ಯಾರ್ಥಿಗಳ ಸಮಾವೇಶವೊಂದು ಜರುಗಿತು. ಅಲ್ಲಿ ಉಪನ್ಯಾಸ ನೀಡಿದವರ ಪೈಕಿ ಜೈಪುರದ ಎಂ.ಎನ್.ಐ.ಟಿ. ಎಂಬ ತಂತ್ರಜ್ಞಾನ ಬೋಧನಾ ಸಂಸ್ಥೆಯ ನಿರ್ದೇಶಕ ಉದಯಕುಮಾರ್ ಎಂಬ ಪ್ರಾಧ್ಯಾಪಕರೂ ಸೇರಿದ್ದರು. ಅವರು ಪ್ರದರ್ಶಿಸಿದ ಪಾಂಡಿತ್ಯದ ಸೊಬಗು ಅತ್ಯಾಶ್ಚರ್ಯಕರವಾಗಿತ್ತು. ಯಾವ ಅಳುಕೂ ಇಲ್ಲದೆ ಶ್ರೀಯುತರು ತಮ್ಮ ಜ್ಞಾನದ ಖನಿಯಿಂದ ಹಲವು ಚಿನ್ನದ ಗಟ್ಟಿಗಳನ್ನು ಹೊರತೆಗೆದು ವಿದ್ಯಾರ್ಥಿಗಳನ್ನು ಮೂಕರನ್ನಾಗಿಸಿದರು. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲು ಅವಕಾಶವಿದೆ: ವಿಶ್ವಕ್ಕೆ ಸೊನ್ನೆ ಎಂಬುದರ ನಿಖರ ತಿಳಿವನ್ನು ನೀಡಿದವನು ಆರ್ಯಭಟ; ೩೬೫ ದಿನಗಳಲ್ಲಿ ಭೂಮಿಯು ಸೂರ್ಯನ ಸುತ್ತ ಒಂದು ಬಾರಿ ಸುತ್ತುತ್ತದೆಂದು ತಿಳಿಸಿದವನು ಭಾಸ್ಕರಾಚಾರ್ಯ; ವಿಮಾನದ ಆವಿಷ್ಕಾರ ಮಾಡಿದವರು ರೈಟ್ ಸೋದರರಲ್ಲ, ಏಕೆಂದರೆ ಹಲವು ಶತಮಾನಗಳ ಹಿಂದೆಯೇ ನಮ್ಮಲ್ಲಿ ಪುಷ್ಪಕ ವಿಮಾನವಿದ್ದಿತು; ವಿದ್ಯುಚ್ಛಕ್ತಿಯನ್ನು ಕಂಡುಹಿಡಿದವನು ಎಡಿಸನ್ ಎನ್ನುತ್ತಾರೆ, ಆದರೆ ಅದು ಸರಿಯಲ್ಲ, ಅವನಿಗಿಂತಲೂ ಹಲವು ಶತಮಾನಗಳ ಹಿಂದೆಯೇ ನಮ್ಮ ದೇಶದ ವಿದ್ಯುತ್ ಚಕ್ರವರ್ತಿ ಎಂಬುವವನು ಅದನ್ನು ಕಂಡುಹಿಡಿದಿದ್ದ; ದೂರವಾಣಿಯನ್ನು ಕಂಡುಹಿಡಿದವನು ಜಗದೀಶ ಚಂದ್ರ ಬೋಸರೇ ಹೊರತು ಮಾರ್ಕೋನಿಯಲ್ಲ; ಚಂದ್ರನ ಮೇಲೆ ಮೊಟ್ಟಮೊದಲು ಕಾಲಿರಿಸಿದವನು ರಾಕೇಶ್ ಶರ್ಮ ಮತ್ತು ಅವನು ಕಾಲಿರಿಸಿದಾಕ್ಷಣ 'ಸಾರೇ ಜಹಾಂ ಸೇ ಅಚ್ಛಾ ಹಿಂದುಸ್ತಾನ್ ಹಮಾರಾ' ಎಂಬ ಹಾಡನ್ನು ಹಾಡಿದ; ಇತ್ಯಾದಿ. ಇದೆಲ್ಲಾ 'ಪ್ರಜಾವಾಣಿ' ಪತ್ರಿಕೆಯ ೨೦೧೮, ಫೆಬ್ರವರಿ ೪ರ ಸಂಚಿಕೆಯಲ್ಲಿ ಪ್ರಕಟವಾಗಿತ್ತು.

ರಾಜಸ್ತಾನದ ಎಂ.ಎನ್.ಐ.ಟಿ.ಯ ಈ ನಿರ್ದೇಶಕರ ಮಾತುಗಳಲ್ಲಿರುವ ಓಘವು ಅಮೋಘವಾಗಿದೆ, ಆದರೆ ಅದರಲ್ಲಿ ಬೆಟ್ಟದಷ್ಟು ತಪ್ಪುಗಳಿವೆ. ಆರ್ಯಭಟನಿಗೂ ಮೊದಲೇ 'ಸೊನ್ನೆ' ಎಂಬುದನ್ನು ಭಾರತದ ತಜ್ಞರು ವಿಶ್ವಕ್ಕೆ ಪರಿಚಯಿಸಿದ್ದರು. ಭಾಸ್ಕರಾಚಾರ್ಯನು ನಮ್ಮ ದೇಶದ ವಿಶಿಷ್ಟ ಖಗೋಳಶಾಸ್ತ್ರಜ್ಞನೇ ಹೌದು, ಆದರೆ ಅವನಿಗಿಂತಲೂ ಬಹಳ ಮುಂಚೆಯೇ ಸೂರ್ಯನ ಸುತ್ತ ಭೂಮಿಯು ಸುತ್ತಲು ೩೬೫ ದಿನಗಳು ಬೇಕೆಂಬ ತಿಳಿವಳಿಕೆ ಮೂಡಿದ್ದಿತು; ಯೂರೋಪಿನಲ್ಲಿ ಅದು ಗೆಲಿಲಿಯೋ ಕಾಲದಲ್ಲಿ ಸಹ ಚರ್ಚಿನ ಮಾನ್ಯತೆ ಪಡೆದಿರಲಿಲ್ಲ. ಪುಷ್ಪಕ ಎಂಬುದು ವಿಮಾನದ ಹೆಸರೆಂದು ರಾಮಾಯಣದಲ್ಲಿ ಹೇಳಲಾಗಿದೆ, ಆದರೆ ಅದು ಹಾರಿದ ಬಗೆ, ಬಳಸಲಾದ ಇಂಧನ, ಅದರ ರೂಪ, ಇತ್ಯಾದಿಗಳು ತಿಳಿದುಬಂದಿಲ್ಲ. ಪುಷ್ಪಕದ ನಂತರ ಯಾರೂ ಏಕೆ ಹಲವು ಶತಮಾನಗಳ ಕಾಲ ನಮ್ಮ ದೇಶದಲ್ಲಿ ವಿಮಾನ ರಚಿಸಿಕೊಂಡು ಹಾರಾಡಲಿಲ್ಲವೋ ತಿಳಿಯದು. ಯಾವ ಉತ್ಖನನಗಳಲ್ಲೂ ವಿಮಾನವಾಗಲಿ, ಅದರ ಬಿಡಿ ಭಾಗಗಳಾಗಲಿ ಈವರೆಗೆ ನಮಗೆ ಸಿಕ್ಕಿಲ್ಲದಿರುವುದು ವಾಸ್ತವ. ರಾಮಾಯಣದಲ್ಲಿ ಸಹ ಪುಷ್ಪಕವನ್ನು ಬಿಟ್ಟು ವಿಮಾನಗಳಿಲ್ಲ. ಮಹಾಭಾರತದಲ್ಲಿ ಅದೂ ಇಲ್ಲ, ಬೇರೆಯದೂ ಇಲ್ಲ.

ಹಕ್ಕಿಗಳನ್ನು ಕಂಡು ಮಾನವನು ತಾನೂ ಹಾಗೆ ಹಾರುವಂತಿದ್ದರೆ ಎಷ್ಟು ಚೆಂದ ಎಂದು ಬಿಸುಸುಯ್ದಿರುವುದು ವಿಶ್ವದ ಪುರಾಣಗಳಲ್ಲಿ ದಾಖಲಾಗಿದೆ. ಪ್ರಾಚೀನ ಗ್ರೀಸ್‌ನ ಪುರಾಣದಲ್ಲಿ ಇಕಾರಸ್ ಎಂಬುವನು ಹಾಗೆ ಹಂಬಲಿಸಿದ್ದನೆಂಬುದು ದಾಖಲಾಗಿದೆ. ಎಡಿಸನ್ ವಿದ್ಯುಚ್ಛಕ್ತಿಯನ್ನು ಕಂಡು ಹಿಡಿದವನೆಂದು ಹೇಳಿರುವ ಜೈಪುರದ ನಿರ್ದೇಶಕರಿಗೆ ಫ್ಯಾರಡೆ ಹೆಸರು ತಿಳಿದಿಲ್ಲದಿರುವುದು ಸೋಜಿಗವೆನಿಸುತ್ತದೆ. ರಾಕೇಶ ಶರ್ಮನು ಅಂತರಿಕ್ಷ ಯಾನ ಮಾಡಿದ, ಆದರೆ ಚಂದ್ರನ ಮೇಲೆ ಇಳಿಯಲಿಲ್ಲ. ನಿರ್ದೇಶಕರು ಜಗದೀಶ ಚಂದ್ರ ಬೋಸರ ಬಗ್ಗೆ ಮಾತ್ರ ಸರಿಯಾದ ಮಾಹಿತಿ ನೀಡಿದ್ದಾರೆ. ಆದರೆ ಅವರು ಹೇಳುವ ಮಾರ್ಕೋನಿಗೆ ಯಾರೂ ದೂರವಾಣಿಯ ಆವಿಷ್ಕಾರ ಮಾಡಿದವನೆಂಬ ಪಟ್ಟವನ್ನು ನೀಡಿಲ್ಲ.

ನಮ್ಮ ಮಹಾನ್ ನಿರ್ದೇಶಕರು ಅಷ್ಟಕ್ಕೆ ನಿಲ್ಲಲಿಲ್ಲ. ಮುಂದುವರಿದು ವಿದ್ಯಾರ್ಥಿಗಳಿಗೆ ಅವರೊಂದು ಘನ ಸಂದೇಶ ನೀಡಿದರು : "ಬಂಗಾಳದವರು ಚೀಣಾಕ್ಕೆ ಹೋಗಿ ಅಪಾರ ಜ್ಞಾನ ಪಡೆದು ಬಂದರು; ಗುಜರಾತಿಗಳು ಯೂರೋಪಿಗೆ ಹೋಗಿ ವ್ಯಾಪಾರ ಮತ್ತು ವಾಣಿಜ್ಯ ಶಾಸ್ತ್ರದಲ್ಲಿ ಪರಿಣತರಾದರು. ವಿದ್ಯಾರ್ಥಿಗಳಾದ ನೀವು ಅಮೆರಿಕಾಕ್ಕೆ ಹೋಗಿ, ಬೇಕಾದಷ್ಟು ಹಣ ಸಂಪಾದಿಸಿ ಮತ್ತು ಅದನ್ನು ಭಾರತಕ್ಕೆ ತನ್ನಿ." ನಿರ್ದೇಶಕರಿಗೆ ಬಹುಶಃ ನಮ್ಮ ಪ್ರಧಾನಿಯವರ "ಭಾರತದಲ್ಲಿ ಮಾಡಿ" ಎಂಬ ಕರೆ ನೆನಪಿಗೆ ಬಂದಿರಬೇಕು. ವಿದೇಶಿಯರು ಈ ಕರೆಗೆ ಓಗೊಟ್ಟು ಇಲ್ಲಿ ಬಂದು ಏನನ್ನೂ ಮಾಡದೆ ಪ್ರಧಾನಿಯವರ ಕರೆ ಎಲ್ಲೋ ಗಾಳಿ ಸೇರಿಬಿಟ್ಟಿದೆ. ಅದಕ್ಕೆ ಪರ್ಯಾಯವಾಗಿ ನಮ್ಮ ವಿದ್ಯಾರ್ಥಿಗಳು ಅಮೆರಿಕಾಕ್ಕೆ ಹೋಗಿ ಹಣ ಮಾಡಲಿ ಎಂಬ ಅಭಿಲಾಷೆ ನಿರ್ದೇಶಕರಲ್ಲಿ ತುಂಬಿಬಂದಿದೆಯೆಂದು ತೋರುತ್ತದೆ.

ಅದೆಲ್ಲಾ ಇರಲಿ, ವಾಸ್ತವವೆಂದರೆ ಈ ನಿರ್ದೇಶಕರ ಮಾತಿನಲ್ಲಿ ವಿಜ್ಞಾನದ ತುಣುಕುಗಳನ್ನು ಭೂತಗನ್ನಡಿ ಹಾಕಿ ಹುಡುಕಿದರೂ ಸಿಕ್ಕುವುದಿಲ್ಲವೆಂಬುದು ನಮ್ಮ ಕೊರಗು. ವಿಜ್ಞಾನದ ಅಂಶಗಳು ಒತ್ತಟ್ಟಿಗಿರಲಿ, ವೈಜ್ಞಾನಿಕ ದೃಷ್ಟಿಕೋನವಾದರೂ ಇರಬೇಕಾಗಿತ್ತಲ್ಲವೆ ? ಅದರ ಲವಲೇಶವೂ ಇಲ್ಲವಲ್ಲಾ ಎಂಬುದು ಆಘಾತಕರವಾಗಿದೆ. ಅವರ ಇಡೀ ಉಪನ್ಯಾಸವು ಹುಚ್ಚು ಕೂಗಾಟದಲ್ಲಿ ಮುಕ್ತಾಯವಾಗಿದೆ. ನಮ್ಮ ಇಂದಿನ ದುರಂತವೆಂದರೆ ಈ ಬಗೆಯ ಹುಚ್ಚು ಕೂಗಾಟಗಳು ನಮ್ಮಲ್ಲಿ ಹೇರಳವಾಗಿ ಕಾಣಬರುತ್ತಿವೆ, ಅಸಹ್ಯವಾಗುತ್ತಿವೆ. ಅಖಿಲ ಭಾರತ ಜನತಾ ವಿಜ್ಞಾನ ಪರಿಷತ್ತು ಪ್ರಸ್ತುತವಾಗುವುದು ಆ ಕಾರಣದಿಂದಾಗಿ. ಹಿಂದೆಂದಿಗಿಂತಲೂ ಇಂದು ನಾವು ವೈಜ್ಞಾನಿಕ ದೃಷ್ಟಿಯನ್ನು ವ್ಯಾಪಕಗೊಳಿಸಬೇಕಾದ್ದು ಅನಿವಾರ್ಯವಾಗುತ್ತಿದೆ.

ನಮ್ಮ ದೇಶದಲ್ಲಿ ವೈಜ್ಞಾನಿಕ ಮತ್ತು ಔದ್ಯಮಿಕ ಸಂಶೋಧನಾ ಪರಿಷತ್ತು (ಸಿ.ಎಸ್.ಐ.ಆರ್.) ಇದೆ. ಆ ಸಂಸ್ಥೆಯು ಕೈಗೊಳ್ಳಹೊರಟಿರುವ ಕೆಲವು ಸಂಶೋಧನಾ ಯೋಜನೆಗಳು ಹಾಸ್ಯಾಸ್ಪದವಾಗುತ್ತಿವೆಯೋ ಎಂಬ ಅನುಮಾನ ಮೂಡುತ್ತಿದೆ. ಐದಾರು ಬೇರೆ ಬೇರೆ ಪ್ರಯೋಗಾಲಯಗಳು ಹಸುವಿನ ಗಂಜಳದ ಆಳವಾದ ಅಧ್ಯಯನ ಮಾಡುತ್ತವಂತೆ. ಗೋಮೂತ್ರವು ಎಷ್ಟೆಲ್ಲಾ ರೋಗಗಳಿಗೆ ರಾಮಬಾಣವೆಂಬುದನ್ನು ಅದರಿಂದ ತಿಳಿಯುವ ನಿರೀಕ್ಷೆ ಇದೆ ಎಂದು ಹೇಳಲಾಗಿದೆ. ಸಂಶೋಧನೆಯು ಉತ್ತಮ ಪರಿಣಾಮ ನೀಡಲೆಂದು ಹಾರೈಸೋಣ, ಆದರೆ ಅದಕ್ಕೆ ಸಿ.ಎಸ್.ಐ.ಆರ್. ನಿಗದಿಗೊಳಿಸಿರುವಷ್ಟು ಕಾಲಾವಧಿ ಬೇಕಿಲ್ಲ, ಒಂದೇ ಬಗೆಯ ಸಂಶೋಧನೆಯನ್ನು ಐದಾರು ಕಡೆ ಮಾಡಬೇಕಾಗಿಲ್ಲ. ಈ ಸಂಶೋಧನೆಗೆ ಮುಂಚೆಯೇ ಉತ್ತರ ಪ್ರದೇಶದ ಆಯುರ್ವೇದ ಆಸ್ಪತ್ರೆಗಳ ಔಷಧಿಗಳಲ್ಲಿ ಗೋಮೂತ್ರದ ಬಳಕೆಯನ್ನು ಮಾಡಲಾಗುತ್ತಿದೆಯೆಂಬ ವರದಿಗಳು ಬಂದಿವೆ. ರೋಗಿಗಳ ಜೀವಗಳ ಜೊತೆ ಆಟವಾಡಲು ಹೀಗೆ ಪರವಾನಗಿ ಕೊಟ್ಟಿರುವುದು ಸುತರಾಂ ಸರಿಯಲ್ಲ. ಗೋವು ಪವಿತ್ರವಾದ ಪ್ರಾಣಿಯೆಂಬ ಕಾರಣವನ್ನು ಕೊಟ್ಟು ಹಾಗೆ ಮಾಡಿದ್ದರೆ ಅದಿನ್ನೂ ಹೆಚ್ಚು ಪ್ರಶ್ನಾರ್ಹ. ಪವಿತ್ರ ಪ್ರಾಣಿಗಳ ಮೂತ್ರದ ರೋಗೋಪಶಮನ ಗುಣ ಮತ್ತು ಶಕ್ತಿಗಳನ್ನು ಸಹ ಪ್ರಯೋಗಗಳಿಂದ ಮೊದಲು ಸ್ಥಿರಪಡಿಸಿಕೊಳ್ಳಬೇಕಲ್ಲವೆ? ಅದನ್ನು ಗಣನೆಗೆ ತೆಗೆದುಕೊಳ್ಳದಿರುವುದು ಆಘಾತಕರ. ಹೇಗೂ ಸ್ವ–ಮೂತ್ರದಲ್ಲಿ ರೋಗನಿವಾರಕ ಶಕ್ತಿಗಳನ್ನು ಇದೆಯೆಂದು ನಂಬಿ ಅದನ್ನು ಸೇವಿಸುತ್ತಿದ್ದ ಒಬ್ಬ ಪ್ರಧಾನಿ ಇದ್ದ ದೇಶವಲ್ಲವೇ ನಮ್ಮದು ! ಅವರಿಗೆ ಪ್ರಯೋಗವು ಅನಗತ್ಯವಾಗಿತ್ತು, ಏಕೆಂದರೆ ಶ್ರದ್ಧೆಯು ಅವರಿಗೆ ಪ್ರಯೋಗಕ್ಕಿಂತಲೂ ಹೆಚ್ಚು ಹಿತವನ್ನು ಕೊಡುತ್ತಿತ್ತು.

ನಮ್ಮ ಅನೇಕ ಪ್ರಾಚೀನ ಶಾಸ್ತ್ರಗ್ರಂಥಗಳನ್ನು ವಿಶ್ಲೇಷಣೆಗೆ ಗುರಿಮಾಡಿ ನೂರಾರು ಪ್ರಾಯೋಗಿಕ ಅಧ್ಯಯನಗಳನ್ನು ಕೈಗೊಳ್ಳಲು ಸಾಧ್ಯವಿದೆ. ಅಲ್ಲಿ ನಿರೂಪಣೆಗೊಂಡಿರುವ ಅಂಶಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಅಗತ್ಯ ಮತ್ತು ಶ್ರೇಯಸ್ಕರ. ಒಂದು ನಿರೂಪಣೆಯು ವೈಜ್ಞಾನಿಕ ಸತ್ಯವೋ ಅಲ್ಲವೋ ಎಂಬುದು ಸ್ಥಿರವಾಗುತ್ತದೆ ಮತ್ತು ಅದರಿಂದ ಪ್ರಯೋಜನ ಪಡೆಯಲು ವಿಪುಲ ಸಾಧ್ಯತೆಗಳಿವೆ. ಒಂದೆರಡು ಅಂತಹ ಸಂಗತಿಗಳತ್ತ ಗಮನ ಹರಿಸೋಣ: ವರಾಹಮಿಹಿರನ "ಬೃಹತ್‌ಸಂಹಿತೆ" ಯೊಂದರಲ್ಲೇ ಹತ್ತಾರು ಊಹಾಪ್ರತಿಜ್ಞೆಗಳನ್ನು ಹೆಕ್ಕಿ ತೆಗೆಯಬಹುದು. ಯಾವುದಾದರೂ ಜಾಗದಲ್ಲಿ ಭಾವಿ ತೋಡಿದರೆ ನೀರು ಸಿಗುತ್ತದೋ ಇಲ್ಲವೋ ಎಂಬುದನ್ನು ಕುರಿತಂತೆ ಅಲ್ಲಿ ಅನೇಕ ಸೂಚನೆಗಳಿವೆ. ಯಾವ ನಿರ್ದಿಷ್ಟ ಜಾಗದಲ್ಲಿ ನೀರಿನ ಸೆಲೆಯಿದೆ ಎಂಬುದನ್ನು ಗುರುತಿಸಲು ಸಾಂಪ್ರದಾಯಿಕ ಮತ್ತು ಆಧುನಿಕ ವಿಧಾನಗಳೆರಡೂ ಇವೆ, ನಿಜ; ಆದರೆ ವರಾಹಮಿಹಿರನ ಸೂಚನೆಗಳ ಸತ್ಯತೆಯನ್ನು ತಿಳಿದುಕೊಳ್ಳಲು ಮುಂದಾಗಬಾರದೇಕೆ? ಆ ಪ್ರಯೋಗಗಳಿಗೆ ಕೋಟಿಗಟ್ಟಲೆ ಹಣ ತೊಡಗಿಸ ಬೇಕಾಗಿಲ್ಲ, ಅತ್ಯಾಧುನಿಕ ಉಪಕರಣಗಳ ಅಗತ್ಯವೂ ಇಲ್ಲ. ಬೃಹತ್ಸಂಹಿತೆಯ ಹಲವು ಸೂಚನೆಗಳಲ್ಲಿ ಎರಡು ಅತ್ಯಂತ ಸರಳವಾಗಿವೆ : (ಅ) ಬೆತ್ತದ ಕಡ್ಡಿಗಳು ಹುಲುಸಾಗಿ ಬೆಳೆದಿರುವೆಡೆ ಆ ಜಾಗದ ಪಶ್ಚಿಮಕ್ಕೆ ಮೂರು–ನಾಲ್ಕು ಅಡಿಗಳಷ್ಟು ದೂರದಲ್ಲಿ ಅಗೆದರೆ ಖಂಡಿತ ನೀರು ದೊರೆಯುತ್ತದೆ; (ಆ) ನೇರಳೆ ಮರವಿರುವ ಸನಿಹದಲ್ಲಿ ಮರದ ಉತ್ತರಕ್ಕೆ ಮೂರು–ನಾಲ್ಕು ಅಡಿ ದೂರದಲ್ಲಿ ಸುಮಾರು ಹದಿನೈದು ಅಡಿ ತೋಡಿದರೆ ನೀರು ಖಂಡಿತ ದೊರೆಯುತ್ತದೆ. ನಮ್ಮ ಯಾವುದೇ ಕೃಷಿ ವಿಶ್ವವಿದ್ಯಾನಿಲಯವು ಇದನ್ನು ಪ್ರಾಯೋಗಿಕವಾಗಿ ಖಚಿತಪಡಿಸಬಲ್ಲದು ಇಲ್ಲವೇ ತಳ್ಳಿಹಾಕಬಲ್ಲದು.

ಬೌದ್ಧ ಪರಂಪರೆಯಲ್ಲಿ "ವಣ್ಣುಪಥ ಜಾತಕ" ಎಂಬ ಒಂದು ಕತೆ ಇದೆ. ಅದರ ಪ್ರಸಂಗ ಇದು : ಯಾವನೋ ವ್ಯಾಪಾರಿ ಪಯಣ ಬೆಳೆಸಿದ್ದಾಗ ಹಾದಿಯಲ್ಲಿ ದಣಿದು ನೀರಿಗಾಗಿ ಅಲ್ಲೆಲ್ಲಾ ಹುಡುಕಾಡಿದನಂತೆ. ಅಲ್ಲೊಂದು ಕಡೆ ದರ್ಭೆ ಹುಲ್ಲಿನ ಸೊಂಪು ಬೆಳೆಯನ್ನು ಕಂಡ. ಅದರಡಿಯಲ್ಲೇ ಗುಂಡಿ ತೋಡಿದ, ಪುಷ್ಕಲವಾಗಿ ನೀರು ಸಿಕ್ಕಿತು. "ಉಪವನ ವಿನೋದ" ಎಂಬ ಬೇರೊಂದು ಗ್ರಂಥವಿದೆ. ಅದನ್ನು ಬರೆದವನು ಶಾರ್ಙ್ಗಧರ. ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ತಯಾರಿಸುವುದನ್ನು ಕುರಿತಂತೆ ಅದರಲ್ಲಿ ಸಾಕಷ್ಟು ನಿರ್ದೇಶನಗಳಿವೆ. ಈಗ ಬಳಸಲಾಗುವ 'ಎಂಡೋಸಲ್ಫನ್'ಗಿಂತಲೂ ಅವು ಹೆಚ್ಚು ಹಾನಿಕರ ಖಂಡಿತ ಆಗಲಾರವು. ಪ್ರಯೋಗ ಮಾಡಿ ನೋಡಲು ಏನೂ ಅಭ್ಯಂತರವಿರಲಾರದು. ಅವನು ಸೂಚಿಸುವ ಒಂದು ಕ್ರಿಮಿನಾಶಕದ ಹೆಸರು "ಕುಣಪಜಲ." ಶೇಕ್ಸ್‌ಪಿಯರ್‌ನ 'ಮ್ಯಾಕ್‌ಬೆತ್' ನಾಟಕದ ಮಾಟಗಾತಿಯರು ತಯಾರಿಸುವ ಘೋರ ಕಷಾಯಕ್ಕಿಂತ ಈ ಕುಣಪಜಲವು ಕಡಿಮೆ ಇರಲಾರದು ! ಅದರ ತಯಾರಿಕೆಗೆ ಜಿಂಕೆ, ಮೀನು, ಕುರಿ, ಮುಂತಾದವುಗಳ ಮಾಂಸ ಬೇಕು. ಕ್ರಿಮಿನಾಶಕವನ್ನು ತಯಾರಿಸುವ ವಿಧಾನವನ್ನು ದೀರ್ಘವಾಗಿ ಗ್ರಂಥದಲ್ಲಿ ವಿವರಿಸಲಾಗಿದೆ. ಅದನ್ನಿಲ್ಲಿ ವಿಸ್ತರಿಸುವ ಅಗತ್ಯವಿಲ್ಲ. "ಕುಣಪ" ಎಂದರೆ ಹೆಣ. ಈ ಕ್ರಿಮಿನಾಶಕಕ್ಕೆ "ಕುಣಪಜಲ" ಎಂಬ ಹೆಸರನ್ನು ಏಕೆ ನೀಡಲಾಗಿದೆಯೆಂಬುದನ್ನು ಗ್ರಂಥವು ಎತ್ತಿಹೇಳಿದೆ : ಒಂದು ಮರವು ಒಣಗಿ ಸತ್ತು ಹೋಗಿದ್ದರೆ ಈ "ಜಲವನ್ನು" ಅದರ ಬೇರುಗಳಿಗೆ ಉಣಿಸಿದರೆ ಸಾಕು, ಹೆಣವಾಗಿದ್ದ ಮರವು ಚಿಗುರೊಡೆದು ಭವ್ಯವಾದ ಜೀವ ತಾಳುತ್ತದೆ, ಎಂಬುದು ಅದರ ಸಾರಾಂಶ. ಇದರ ಪ್ರಯೋಗ ಮಾಡಿ ನೋಡಲು ಯಾವ ಮುಗ್ಗಟ್ಟೂ ಇಲ್ಲ, ಏಕೆಂದರೆ ಅಲ್ಲಿ ಹಸುವಿನ ಮಾಂಸದ ಪ್ರಸ್ತಾಪವೇನೂ ಇಲ್ಲ ! ನಮ್ಮ ಗ್ರಂಥಗಳಲ್ಲಿರುವ ಪ್ರಸ್ತಾವಗಳನ್ನು ಪ್ರಯೋಗಕ್ಕೆ ಗುರಿಮಾಡದೆ ನಮ್ಮ 'ದೇವಾನಾಂಪ್ರಿಯ' (ಅಂದರೆ, ಹೆಡ್ಡ) ಪಂಡಿತರು ಎಂತೆಂಥವೋ ಇಲ್ಲದ ಮಹಿಮೆಗಳ ಪಟ್ಟಿಯನ್ನು ಸಾದರಪಡಿಸುತ್ತಾರೆಂಬುದು ಒಂದು ದುರಂತ. ಅದರ ಬದಲು ಕೈಗೆಟಕುವ ಪ್ರಯೋಗಗಳನ್ನೇಕೆ ಮಾಡಬಾರದು? ಎರಡು ವರ್ಷಗಳ ಹಿಂದೆ ಮುಂಬೈನಲ್ಲಿ ನಡೆದ ಅಖಿಲ ಭಾರತ ವಿಜ್ಞಾನ ಅಧಿವೇಶನದಲ್ಲಿ ಯಾರೋ ಪ್ರಬುದ್ಧ ಪಂಡಿತನೊಬ್ಬ ಋಗ್ವೇದದಲ್ಲಿ ಅಂತರಗ್ರಹ ಯಾನದ ಸಾಧನದ ಬಗ್ಗೆ ಪ್ರಸ್ತಾಪವಿದೆಯೆಂದು ಪ್ರಲಾಪಿಸಿದ್ದ. ಅದನ್ನು ತೀಕ್ಷ್ಣವಾಗಿ ವಿಮರ್ಶಿಸಲಾಯಿತು. ಅನೂಚಾನವಾಗಿ ನಡೆದುಬಂದಿದ್ದ ವಿಜ್ಞಾನ

ಅಧಿವೇಶನವು ಆಮೇಲೆ ಜರುಗಲೇ ಇಲ್ಲ. ಇದು ನಮ್ಮ ಕೇಂದ್ರ ಸರ್ಕಾರದ ಧೋರಣೆಗೆ ಒಂದು ದೃಷ್ಟಾಂತವಿರಬಹುದು.

"ಲೋಹಸರ್ವಸ್ವ" ಎಂಬ ಇನ್ನೊಂದು ಗ್ರಂಥವಿದೆ. ಲೋಹವಿಜ್ಞಾನದ ವಿವಿಧ ಪ್ರಕಾರಗಳು, ತಾಂತ್ರಿಕ ಪ್ರಕ್ರಿಯೆ ಹಾಗೂ ಲೋಹಗಳ ವೈದ್ಯಕೀಯ ಉಪಯೋಗ, ಮುಂತಾದುವನ್ನು ಈ ಗ್ರಂಥವು ಪ್ರಸ್ತಾಪಿಸುತ್ತದೆ. ಹಸುವಿನ ಗಂಜಳದ ಅಧ್ಯಯನದ ಜೊತೆ 'ಲೋಹಸರ್ವಸ್ವ'ದ ಪ್ರಮೇಯಗಳ ಅಧ್ಯಯನ ಮತ್ತು ಪ್ರಯೋಗ ಯೋಗ್ಯವಾದುದಲ್ಲವೆ? ಪ್ರಯೋಗ ವನ್ನೇ ನಡೆಸದೆ ಪ್ರಚಂಡ ತೀರ್ಮಾನಗಳನ್ನು ಪ್ರಕಟಿಸುವುದು ವೈಜ್ಞಾನಿಕ ಮಾರ್ಗವಲ್ಲ, ಭಾರತೀಯ ವೈಜ್ಞಾನಿಕ ಪರಂಪರೆಯೂ ಅಲ್ಲ. ಛಾಂದೋಗ್ಯ ಉಪನಿಷತ್ತಿನ ಉದ್ದಾಲಕ ಆರುಣಿಯು ಪ್ರಯೋಗ ವಿಜ್ಞಾನದ ಕಟ್ಟಾ ಪ್ರತಿಪಾದಕ ಮತ್ತು ವಿಶ್ವದ ಮೊದಲ ಪ್ರಯೋಗ ವಿಜ್ಞಾನಿ. ಅವನ ನಾಡಿನಲ್ಲಿ ಅವೈಜ್ಞಾನಿಕತೆಯು ಭೀಕರವಾಗಿ ಬೆಳೆದಿರುವುದು ಮತ್ತು ಈಗ ಅದಕ್ಕೆ ಇನ್ನೂ ಹೆಚ್ಚು ಪುಷ್ಟಿ ದೊರೆಯುತ್ತಿರುವುದು ಇತಿಹಾಸದ ವ್ಯಂಗ್ಯವೇ ಸರಿ. ವಿಜ್ಞಾನ ಮತ್ತು ಭಾರತೀಯ ಪರಂಪರೆಗಳೆರಡಕ್ಕೂ ಮಸಿ ಬಳಿಯುವ ಖಂಡನೀಯ ವಿದ್ಯಮಾನ ಇದು.

ನೈಜವಾದ ವೈಜ್ಞಾನಿಕ ಪ್ರಯೋಗ ಮತ್ತು ಅಧ್ಯಯನಗಳಿಗೆ ನಮ್ಮಲ್ಲಿ ಅಗಾಧವಾದ ಸಾಧ್ಯತೆ ಗಳಿವೆ, ಆದರೆ ಮಂದಬುದ್ಧಿಯ ಪ್ರತಿಗಾಮಿಗಳು ವೈದ್ಯಕೀಯವೆಂದರೆ ಅಳಲೆಕಾಯಿ ಪಾಂಡಿತ್ಯವಷ್ಟೇ ಎಂಬ ಜಾಡಿನಲ್ಲಿ ನಡೆಯಲು ಹಾತೊರೆಯುತ್ತಾರೆ. ವಿಶ್ಲೇಷಣೆಗೆ ಅವರದೇ ಸರಳ, ಆದರೆ ಅಸಂಗತ, ಸೂತ್ರಗಳಿವೆ. ಅದರ ಆಧಾರದ ಮೇಲೆ ತೀರ್ಮಾನ ಗಳನ್ನು ಪ್ರಕಟಿಸುವ ಭಂಡಧೈರ್ಯ ಅವರದು. ವಿಜ್ಞಾನದ ಹಾದಿ ಮತ್ತು ವಿಧಾನ ಕುರಿತಂತೆ ಬರ್ಟೋಲ್ಟ್ ಬ್ರೆಕ್ಟ್‌ನ ಒಂದು ಮಾತು ಸೂತ್ರಪ್ರಾಯ ವಾಗಿದೆ: "ಸತ್ಯವು ಕಾಲದ ಶಿಶುವೇ ವಿನಾ ಅಧಿಕಾರದ ಶಿಶುವಲ್ಲ." ಗೆಲಿಲಿಯೊ ನಾಟಕದಲ್ಲಿನ ಒಂದು ಮಾತಿದು. ಯಾವುದೋ ಪವಿತ್ರ ಗ್ರಂಥದಲ್ಲಿ ಹೇಳಲಾಗಿದೆಯೆಂಬ ಮಾತ್ರಕ್ಕೆ ಯಾವುದೇ ಸಂಗತಿಯು ಸತ್ಯವೆನಿಸಿಕೊಳ್ಳುವುದಿಲ್ಲ; ಕಾಲಾನುಕ್ರಮ ದಲ್ಲಿ ಆ ಸಂಗತಿಯ ಸತ್ಯಾಸತ್ಯತೆಯನ್ನು ಕ್ಲುಪ್ತ ವಾದ ಅಧ್ಯಯನಗಳಿಂದ ಕಂಡುಕೊಳ್ಳಬೇಕಾಗುತ್ತದೆ. ಇತಿಹಾಸದ ಗತಿಯಲ್ಲಿ ಎಷ್ಟೋ ಪ್ರಾಚೀನ ನಂಬಿಕೆಗಳಿಗೆ ಆಧುನಿಕ ಯುಗದಲ್ಲಿಯೂ ಮಾನ್ಯತೆ ಸಿಕ್ಕಿದೆ, ಇನ್ನೆಷ್ಟೋ ನಂಬಿಕೆಗಳು ಕೇವಲ ಶ್ರದ್ಧೆಯ ರೂಪದಲ್ಲೇ ಉಳಿದಿವೆ. ಜ್ಞಾನದ ನವೀಕರಣ ಮತ್ತು ಹೊಸ ದ್ರವ್ಯದ ಸೇರ್ಪಡೆ ನಿರಂತರವಾಗಿ ಜರುಗುವ ಪ್ರಕ್ರಿಯೆ. ಯಾವುದೋ ಹಂತದಲ್ಲಿ ನಿಂತು, "ಇದು ಅಂತಿಮ ಜ್ಞಾನ" ಎಂದು ಘೋಷಿಸಲಾಗದು. ಆದರೂ ಒಂದೇ ವಿಷಯದ ಬಗೆಗೆ ಹತ್ತಾರು "ಅಂತಿಮ ಜ್ಞಾನಗಳು" ನಮ್ಮ ಮುಂದೆ ಬಂದಿವೆಯೆಂಬುದು ಕೌತುಕದ ವಿಷಯ. ಆ ಹತ್ತು ಜ್ಞಾನಗಳು ಪರಸ್ಪರ ವಿರೋಧಿಗಳಾಗಿದ್ದರೆ ಅವಷ್ಟೂ ಸತ್ಯಗಳಾಗಿರಲಾರವು. ಅಷ್ಟೇ ಅಲ್ಲ, ಯಾವೊಂದೂ ಸತ್ಯವಲ್ಲದೆಯೂ ಇರಲು ಶಕ್ಯ. ಯೂರೋಪಿನ ಜ್ಞಾನ ಪರಂಪರೆಯಲ್ಲಿ ವಿಶ್ವವನ್ನು ಅರ್ಥೈಸುವ ಕ್ರಮವೊಂದಿತ್ತು. ಎಲ್ಲವೂ ಗೋಳಾಕಾರಗಳೇ. ಮೊದಲು ನಮ್ಮ ಭೂಮಿ, ಅದರ ಸುತ್ತ ಒಂದು ಗ್ರಹದ ಗೋಳ, ಆಮೇಲೆ ಇನ್ನೊಂದು ಮತ್ತೊಂದು. ಆ ಪ್ರತಿಯೊಂದು ಗೋಳದಿಂದಲೂ ಮಧುರ ಸಂಗೀತ ಹೊಮ್ಮುತ್ತಿತ್ತು! ಆ ಸಿದ್ಧಾಂತಕ್ಕೆ ಈಗ ಎಲ್ಲೂ ಮಾನ್ಯತೆ ಇಲ್ಲ; ಗ್ರಹಗಳೆಲ್ಲಾ ಗೋಳಾಕಾರದಲ್ಲೇ ಸುತ್ತುತ್ತವೆಂಬ ಭ್ರಮೆಯೂ ಇಲ್ಲ. ಊಳಿಗಮಾನ್ಯ ಪ್ರಭುತ್ವದಡಿ ಗೋಳಾಕಾರಗಳಿಗೆ ಮಹತ್ವವಿತ್ತು. ಕೇಂದ್ರದಲ್ಲಿ ಭೂಮಿ, ಭೂಮಿಯ ಸುತ್ತ ಗ್ರಹಗಳು ಇದ್ದಂತೆ ಕೇಂದ್ರದಲ್ಲಿ ಪ್ರಭು, ಅವನ ಸುತ್ತ ಊಳಿಗದವರು. ಪರಮಾತ್ಮ ಎಲ್ಲವನ್ನೂ ಎಷ್ಟು ಅಚ್ಚುಕಟ್ಟಾಗಿ ಮತ್ತು ನಿರ್ದಿಷ್ಟವಾಗಿ ಸೃಷ್ಟಿಸಿ ಸ್ಥಾಪಿಸಿದ್ದಾನೆ, ಅದನ್ನು ಅಲುಗಾಡಿಸುವುದುಂಟೇ, ಎಂಬ ಭಾವನೆಗೆ ಪುಷ್ಟಿ ದೊರಕಿಸಿಕೊಳ್ಳಲು ಇದು ಸಾಧನವಾಗಿತ್ತು. ಟೆಲಿಸ್ಕೋಪ್ ಆವಿಷ್ಕಾರದ ನಂತರ ಗೋಳಗಳು ಮಿಥ್ಯೆಗಳಾಗಿಹೋದವು, ಊಳಿಗಮಾನ್ಯ ಪ್ರಭುತ್ವವೂ ಬದಲಾವಣೆ ಹೊಂದಿತು. ಒಂದು ವೃತ್ತದ ಪರಿಧಿಯು ಅದರ ವ್ಯಾಸದ ಮೂರರಷ್ಟು ಎಂಬ ಲೆಕ್ಕಾಚಾರವಿದ್ದ ಕಾಲವೊಂದಿತ್ತು; ಅದನ್ನಿಂದು ಯಾರೂ ಒಪ್ಪುವುದಿಲ್ಲ. ಕೆಲವು ಪರಂಪರೆಗಳಲ್ಲಿ ಮಹಿಳೆಯರಿಗೆ ಆತ್ಮವೆಂಬುದಿಲ್ಲ, ಇನ್ನು ಕೆಲವು ಪರಂಪರೆಗಳಲ್ಲಿ ಯಾರಿಗೂ ಆತ್ಮವಿಲ್ಲ ಮತ್ತು ಕ್ರೈಸ್ತ ಪರಂಪರೆಯಲ್ಲಿ ಮಾನವೇತರ ಪ್ರಾಣಿಗಳಿಗೆ ಆತ್ಮವಿಲ್ಲ. ಭೂಕೇಂದ್ರಿತ ಸಿದ್ಧಾಂತದ ಜಾಗದಲ್ಲಿ ಸೂರ್ಯಕೇಂದ್ರಿತ ಸಿದ್ಧಾಂತಕ್ಕೆ ಮನ್ನಣೆ ದೊರೆತಿದೆ. ಆದರೆ ಒಂದು ಹುರುಳಿಲ್ಲದ ಸಿದ್ಧಾಂತದ ನಿರಾಕರಣೆಯು ಇನ್ನೂ ಸಾರ್ವತ್ರಿಕವಾಗಿ ಅಂಗೀಕೃತ ವಾಗಿಲ್ಲ. ಅದೇನೆಂದರೆ, ಕೆಲವು ಹುಟ್ಟಿನಿಂದಲೇ ಶ್ರೇಷ್ಠರು, ಪ್ರತಿಭಾವಂತರು, ಇತ್ಯಾದಿ. ಅದಕ್ಕೂ ಎಂಥದೋ ವಿವರಣೆ ನೀಡಿ ಅದೇ "ವೈಜ್ಞಾನಿಕ" ಎನ್ನುವ ಮೂರ್ಖರಿದ್ದಾರೆ. ಐವತ್ತು ವರ್ಷಗಳ ಹಿಂದೆ ಪ್ರತಿಭೆಯ ಸೋಂಕೇ ಇಲ್ಲದಿದ್ದ ಪರಿಶಿಷ್ಟ ಸಮುದಾಯದ ನೂರಾರು ಮಂದಿ ಹೇಗೆ ಪ್ರತಿಭಾವಂತರಾದರು? ಇಷ್ಟು ಸುಲಭವಾದ ವಿಶ್ಲೇಷಣೆಯನ್ನು ಮಾಡಿಕೊಳ್ಳಲು ಸಹಾಯ ಮಾಡದ ನಮ್ಮ ವಿದ್ಯಾಭ್ಯಾಸ ಮತ್ತು ನಂಬಿಕೆಗಳ ಬಗ್ಗೆ ಏನು ಹೇಳೋಣ?

ನಮ್ಮ ಜ್ಞಾನ ಪರಂಪರೆಯಲ್ಲಿ ಮೊದಲನೆಯ ಭಾಸ್ಕರ ಎಂಬೊಬ್ಬನಿದ್ದ. ಇನ್ನೊಬ್ಬ ಭಾಸ್ಕರ ಬಂದ ನಂತರವಷ್ಟೇ ಇವನು 'ಮೊದಲನೆಯ' ಭಾಸ್ಕರನಾದ್ದು. ಅವನು ಆರ್ಯಭಟನ ಗ್ರಂಥಕ್ಕೆ ವ್ಯಾಖ್ಯಾನ ಬರೆದಿದ್ದಾನೆ. ಆರ್ಯಭಟನು ಭೂಮಿಯ ಚಲನೆಯ ಸಿದ್ಧಾಂತ ಮಂಡಿಸಿದ್ದ, ಆದರೆ ಸಂಪ್ರದಾಯದ ಪ್ರಕಾರ ಭೂಮಿಯು ಆದಿಶೇಷನ ಹೆಡೆಯ ಮೇಲೆ ಸ್ಥಿರವಾಗಿ ಕೂತಿದೆ. ಆರ್ಯಭಟನನ್ನು ಸಮರ್ಥಿಸುತ್ತಾ ಭಾಸ್ಕರನು ಒಂದು ಪ್ರಶ್ನೆ ಹಾಕಿದ: ಭೂಮಿಯು ಆದಿಶೇಷನ ಹೆಡೆಯ ಮೇಲಿದೆ, ಸರಿ; ಆದರೆ ಆದಿಶೇಷ ಯಾರ ಮೇಲೆ ಪವಡಿಸಿದ್ದಾನೆ? ಆ ಮತ್ತೊಬ್ಬ ಇನ್ನಾರ ಮೇಲೆ ಕುಳಿತೋ ನಿಂತೋ ಮಲಗಿಯೋ ಇರಬೇಕಲ್ಲ, ಹೀಗೆ ಪ್ರಶ್ನೆಗಳು ನಿರಂತರವಾಗಿಬಿಡುತ್ತವೆ. ತನ್ನ ಅಕ್ಷದ ಮೇಲೆ ಭೂಮಿಯು ಸುತ್ತುತ್ತಾ ಸೂರ್ಯನ ಸುತ್ತಾ ಸುತ್ತುತ್ತದೆ ಎಂಬುದು ಸರಿ ಎಂಬುದು ಭಾಸ್ಕರನ ವಾದವಾಗಿತ್ತು. "ಅನವಸ್ಥಾ ದೋಷ" ಎಂಬುದು ತರ್ಕಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಅದಕ್ಕೆ ಅವಕಾಶ ಇಲ್ಲದಂತೆ ಸಿದ್ಧಾಂತದ ಮಂಡನೆಯಾಗಬೇಕೆಂಬುದು ಅಲ್ಲಿಯ ನಿರೀಕ್ಷೆ. ಅದನ್ನು ಬರ್ನಾರ್ಡ್ ಶಾ ತನ್ನದೇ ರೀತಿಯಲ್ಲಿ ಪ್ರಸ್ತಾಪಿಸಿದ್ದಾನೆ. "ಎಲ್ಲವನ್ನೂ ದೇವರು ಸೃಷ್ಟಿ ಮಾಡಿದ ಎನ್ನುತ್ತೀರಿ, ಸೃಷ್ಟಿ ಮಾಡುವಾಗ ಅವನೆಲ್ಲೋ ನಿಂತಿದ್ದನಲ್ಲ, ಆ ಜಾಗವನ್ನು ಯಾರು ಸೃಷ್ಟಿಸಿದ್ದು? ಅದಕ್ಕೆ ಯಾರನ್ನೋ ಗುರುತಿಸಿದರೆ ದೇವರ ಸೃಷ್ಟಿಕರ್ತೃತ್ವವು ಅರ್ಥಹೀನವಾಗಿಬಿಡುವು ದಿಲ್ಲವೇ" ಎಂಬುದು ಅವನ ಪ್ರಶ್ನೆಯಾಗಿತ್ತು. ಅಂದರೆ ಕತೆಗಳನ್ನು, ಮಿಥಕಗಳನ್ನು, ಯಥಾವತ್ತಾದ ಸತ್ಯವೆಂದು ಬಗೆಯಲಾಗದು ಎಂದರ್ಥ. ಆದರೆ ನಮ್ಮ ದೇಶದಲ್ಲಿ ಪುರಾಣ ಕತೆಗಳನ್ನೆಲ್ಲಾ ಇತಿಹಾಸವೆಂದು ಸಾರುವ ವಿದ್ವದ್ವರ್ಗ ಹಿಂದೆಂದಿಗಿಂತಲೂ ನಮ್ಮಲ್ಲಿ ಈಗ ಪ್ರವರ್ಧಮಾನಕ್ಕೆ ಬರುತ್ತಿದೆ. ಆ ವರ್ಗದ ಪ್ರಕಾರ ನಮ್ಮ ಇತಿಹಾಸವನ್ನು ಬೇರೆ ರೀತಿಯಲ್ಲಿ ಅವೈಚಾರಿಕವಾಗಿ ಬರೆಯುವ ಅಗತ್ಯವಿದೆ. ಮುಂದಿನ ಪೀಳಿಗೆಯವರು ಎಂತೆಂತಹ ಇತಿಹಾಸಗಳಿಗೆ ಬಲಿ ಯಾಗುತ್ತಾರೋ ಎಂಬ ಭಯ ನಮ್ಮನ್ನಾವರಿಸುತ್ತಿದೆ. "ಮುಂದಕ್ಕೆ ಹೋಗುವುದೆಂದರೆ ಹಿಂದಕ್ಕೆ ಹೋಗುವು ದೆಂದರ್ಥ" ಎಂಬುದು ಸಿದ್ಧಾಂತವಾದರೆ ವಿಜ್ಞಾನಕ್ಕೆ ಯಾವ ಸ್ಥಾನ ದೊರೆತೀತು?

ಮಾನವ ಜನಾಂಗದ ದೃಷ್ಟಿಯಿಂದ ಮತ್ತು ವಿಶೇಷವಾಗಿ ನಮ್ಮ ದೇಶದ ಪ್ರಸ್ತುತ ಸಂದರ್ಭದ ದೃಷ್ಟಿಯಿಂದ ವಿಜ್ಞಾನವು ಮೂಲಭೂತವಾಗಿ ಮೂರು ಲಕ್ಷಣಗಳನ್ನು ಮೈಗೂಡಿಸಿಕೊಳ್ಳಬೇಕು: ವೈಚಾರಿಕತೆ, ಮತಧರ್ಮ ನಿರಪೇಕ್ಷತೆ ಮತ್ತು ವೈಜ್ಞಾನಿಕ ಹಾದಿ.

ವೈಚಾರಿಕತೆಯು ಮೂಢನಂಬಿಕೆಗಳಿಗೆ ಮದ್ದು. ಮೂಢನಂಬಿಕೆಗಳೆಲ್ಲಾ ಅಪಾಯಕಾರಿಯಲ್ಲ, ಕೆಲವು ಮಾತ್ರ ಹಾಗೆ, ಎನ್ನುವುದುಂಟು. ಒಂದು ಎಚ್ಚರಿಕೆ ಅವಶ್ಯಕ, ಏಕೆಂದರೆ ಇಂದು ಅಪಾಯಕಾರಿಯಲ್ಲದ ಮೌಢ್ಯವು ನಾಳೆ ಅಪಾಯಕಾರಿಯಾಗುವುದಿಲ್ಲವೆಂಬ

## ತಿದ್ದುಪಡಿ

ಮಾರ್ಚ್ ೨೦೧೮ರ ಸಂಚಿಕೆಯಲ್ಲಿ ಮ. ಶ್ರೀ. ಮುರಳಿ ಕೃಷ್ಣ ಅವರ 'ಕ್ರೋನಿ ಕ್ಯಾಪಿಟಲಿಸಂ ಲೂಟಿಕೋರರ ಹಗರಣಗಳ ಮಾಲೆಯ ವಜ್ರ' ಲೇಖನದ ಪುಟ ೧೮ರ ಕೊನೆಯಿಂದ ಎರಡನೇ ಪ್ಯಾರಾದಲ್ಲಿ 'ಅಸೋಸಿಯೇಷನ್' ಬದಲು 'ಅಸೋಚಾಮ್' ಎಂದು ಓದಿಕೊಳ್ಳಬೇಕು. ಪುಟ ೧೬ರಲ್ಲಿ ಸಂವರ್ತ (ಸಾಹಿಲ್) ಅವರ 'ದುಡಿಯುವ ಜನ' ಕವನದ ಮೂಲ ಲೇಖಕರು 'ರಾಡ್ ಸ್ಮಿಥ್.'

ಖಾತ್ರಿ ಏನೂ ಇಲ್ಲ. ಬಹುತೇಕ ಮೂಢನಂಬಿಕೆಗಳು ತಾರ್ಕಿಕವಾಗಿ ಅಸಿಂಧು : ಒಂದು ಘಟನೆಗೆ ಕಾರಣವಲ್ಲದ್ದು ಕಾರಣವೆಂಬಂತೆ ತೋರುವುದು ಇದರ ಮೂಲದಲ್ಲಿದೆ. ಅದನ್ನು "ಹೇತ್ವಾಭಾಸ" ಎನ್ನಲಾಗಿದೆ. "ಇದರ ನಂತರ, ಆದ್ದರಿಂದ ಇದರಿಂದಾಗಿ" (ಪೋಸ್ಟ್ ಹಾಕ್ ಎರ್ಗೊ ಪ್ರಾಪ್ಟರ್ ಹಾಕ್) ಎಂದು ತರ್ಕಶಾಸ್ತ್ರದಲ್ಲಿ ಇದನ್ನು ಕೆಟ್ಟತರ್ಕವೆಂದು ಗುರುತಿಸಲಾಗಿದೆ. ಕಾರ್ಯ ಮತ್ತು ಕಾರಣಗಳ ನಡುವೆ ಸಂಬಂಧವಿಲ್ಲದಿದ್ದರೂ ಸಂಬಂಧವಿರುವಂತೆ ಗ್ರಹಿಸುವುದು ಇದರ ಸೂಕ್ಷ್ಮ. ಎಲ್ಲ ಶಕುನಗಳೂ ಇದರಡಿ ಬಂದುಬಿಡುತ್ತವೆ. ಹಾದಿಯಲ್ಲಿ ಬೆಕ್ಕು ಅಡ್ಡಬರುವುದಕ್ಕೂ ನಾನು ಸ್ಕೂಟರನ್ನು ದೊಡ್ಡಕಲ್ಲಿಗೆ ಡಿಕ್ಕಿ ಹೊಡೆಸುವುದಕ್ಕೂ ಕಾರ್ಯ–ಕಾರಣ ಭಾವವಿದೆಯೆಂದು ಕಲ್ಪಿಸಿಕೊಳ್ಳುವುದು ಒಂದು ಚಿಕ್ಕ ಉದಾಹರಣೆ. ಪಾಪ, ಆ ಬೆಕ್ಕಿನ ಬದಲು ಆನೆಯು ರಸ್ತೆಯಲ್ಲಿ ಅಡ್ಡಬರಲಾಗುತ್ತಿತ್ತೆ? ಸದ್ಯ, ಬೆಕ್ಕಿಗೆ ಡಿಕ್ಕಿ ಹೊಡೆಯಲಿಲ್ಲವಲ್ಲಾ ಎಂದು ಬೆಕ್ಕು ನನಗೆ ಮನಸಲ್ಲೇ ವಂದಿಸಿರುತ್ತದೆ! ವೈಚಾರಿಕತೆಯ ತಿರುಳು ಇಷ್ಟೇ : ಕಾರಣವಿಲ್ಲದೆ ಕಾರ್ಯವಿರುವುದಿಲ್ಲ. ಬುದ್ಧನು ಪ್ರತಿಪಾದಿಸಿದ "ಪಟಿಚ್ಚಸಮುಪ್ಪಾದ" (ಪ್ರತೀತ್ಯಸಮುತ್ಪಾದ) ಎಂಬುದರ ಸಾರ ಅದೇ. ದುಃಖವಿದೆ, ದುಃಖಕ್ಕೆ ಕಾರಣವಿದೆ, ಕಾರಣವು ಇಲ್ಲದಂತೆ ಮಾಡಲು ಸಾಧ್ಯವಿದೆ, ಹಾಗೆ ಮಾಡಿದರೆ ದುಃಖ ನಿವಾರಣೆಯಾಗುತ್ತದೆ (ಯೇ ಧಮ್ಮಾ ಹೇತುಪ್ಪಭವಾ ತೇಸಂ (ಲಕ್ಖಣಂ) ತಥೋಗತೋ ಆಹ। ತೇಸಂ ಚ ಯೋ ನಿರೋಧೋ ಏವಂ ವಾದೀ ಮಹಾಸಮಣೋ॥). ಇವೇ ಬುದ್ಧನ ನಾಲ್ಕು ಸತ್ಯಗಳು. ಇದು ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಎಲ್ಲಕ್ಕೂ ಅನ್ವಯವಾಗುತ್ತದೆ. "ನೋಟು ರದ್ದತಿ ಮಾಡಿದರೆ ನಮ್ಮ ದೇಶದ ಅಭಿವೃದ್ಧಿಯಾಗುತ್ತದೆ, ಕಪ್ಪುಹಣ ಇಲ್ಲವಾಗುತ್ತದೆ" ಎಂಬ ಗ್ರಹಿಕೆಯಲ್ಲಿ ಸತ್ಯವಿದೆಯೋ ಇಲ್ಲವೋ ಎಂಬುದು ಎರಡು ರೀತಿಯಲ್ಲಿ ಮನದಟ್ಟಾಗುತ್ತದೆ : ಒಂದು, ಆರ್ಥಿಕ ಸಿದ್ಧಾಂತಗಳ ತಿಳಿವಿನಿಂದ ಮತ್ತು ಇನ್ನೊಂದು ಆಚರಣೆಯಿಂದ. "ಆಚರಣೆಯು ಸತ್ಯಕ್ಕೆ ಒರೆಗಲ್ಲು" ಎಂಬುದು ನ್ಯಾಯದರ್ಶನದ ಒಂದು ಪ್ರಮುಖ ಸೂತ್ರ. ನೀರು ಕುಡಿದರೆ ಬಾಯಾರಿಕೆ ಹಿಂಗುತ್ತದೆಯೆ? ಕೇವಲ ಚರ್ಚೆಯಿಂದ ಅದನ್ನು ತೀರ್ಮಾನಿಸಬೇಕಿಲ್ಲ. ಶರೀರಶಾಸ್ತ್ರವು ಅದಕ್ಕೆ ಸಮರ್ಪಕ ವಿವರಣೆ ನೀಡುತ್ತದೆ. ಆದರೆ ನೀರು ಕುಡಿದು ನೋಡಿದರೆ ತಕ್ಷಣ ಉತ್ತರ ಸಿಗುತ್ತದೆ. ಸೈದ್ಧಾಂತಿಕವಾಗಿ ನೋಟು ರದ್ದತಿಯು ಕಪ್ಪುಹಣವನ್ನು ಇಲ್ಲವಾಗಿಸುತ್ತದೆ; ಆದರೆ ಆಚರಣೆಯು ಅದನ್ನು ಸಾಬೀತು ಪಡಿಸಿಲ್ಲ. ಸಿದ್ಧಾಂತವು ಕುಸಿದು ಬಿದ್ದುದಕ್ಕೆ ಬೇರೆ ಕಾರಣಗಳಿವೆ, ಎಂದರ್ಥ. ಕಪ್ಪುಹಣ ಇದ್ದವರಿಗೆ ಅದನ್ನು ಶುದ್ಧ ಹಣ ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದು ಒಂದು ಕಾರಣ. ಅವಕಾಶವನ್ನು ಏಕೆ ಮತ್ತು ಯಾರಿಗೆ ಮಾಡಿಕೊಡಲಾಯಿತು? ಶುದ್ಧ ಹಣದ ಇಂತಿಷ್ಟು ಭಾಗವನ್ನು ನನಗೋ ನನ್ನ ಪಕ್ಷಕ್ಕೋ ಕೊಡುತ್ತಾರೆಂಬುದು ಒಂದು ಕಾರಣವಲ್ಲವೆ? ಅಥವಾ, ಯಾವುದೋ ಪೊಲೀಸ್ ಅಧಿಕಾರಿಗೆ ಯಾರೋ ಬ್ಯಾಂಕು ಅಧಿಕಾರಿಗಳು ಸಹಾಯ ಮಾಡುತ್ತಾರೆ ಎಂಬುದು ಇನ್ನೊಂದು ಕಾರಣ ವಾಗಬಹುದು. ಒಟ್ಟಿನಲ್ಲಿ, ವೈಚಾರಿಕತೆಯು ಕೇವಲ ಶಕುನ ಮತ್ತು ಮತಧರ್ಮಗಳ ಹಲವಾರು ಆಚರಣೆಗಳಿಗಷ್ಟೇ ಸೀಮಿತವಾದುದಲ್ಲ. "ಇನ್ನೂ ಬೇಕು, ಮತ್ತೂ ಬೇಕು" ಎನ್ನುವ ಭೀಕರ ಆಸೆಗಳಿಂದಾಗಿ ಮತಧರ್ಮಗಳ ವಲಯದಲ್ಲಿ ಹೊಸ ಹೊಸ ನಿಷ್ಫಲವಾದ ಆಚರಣೆಗಳು ಹುಟ್ಟಿಕೊಳ್ಳುತ್ತವೆ. "ಮಗು ಜೀಸಸ್‌ಗೆ ಗುರುವಾರದಂದು ನಮಿಸಿಬಂದರೆ ನಿನಗೆ ಕೋಟಿ ರೂಪಾಯಿ ಸಿಗುತ್ತದೆ" ಎಂದು ಒಂದು ಮಿಥ್ಯೆಯ ಪ್ರಚಾರವಾದರೆ ಸಾಕು, ಗುರುವಾರದಂದು ಇನ್‌ಫೆಂಟ್ ಜೀಸಸ್‌ಗೆ ಭಕ್ತರು ತಂಡೋಪತಂಡವಾಗಿ ಬರುತ್ತಾರೆ. ಕೋಟಿ ಇಂದೇ ಬರದಿದ್ದರೇನಂತೆ, ನೂರು ಗುರುವಾರಗಳ ನಂತರವೂ ಬರಬಹುದಲ್ಲಾ!! ಸಾವಿರ ಮಹಿಳೆಯರು ಒಟ್ಟಾಗಿ ಸೌಂದರ್ಯ ಲಹರಿ ಪಠಿಸುವುದು, ಮಳೆಗಾಗಿ ಕಪ್ಪೆಗಳ ಮದುವೆ ಮಾಡಿಸುವುದು, ಹೀಗೆ ಒಂದೇ, ಎರಡೇ. "ನಿಮ್ಮ ಬ್ಯಾಂಕ್ ಖಾತೆಗೆ ಹದಿನೈದು ಲಕ್ಷ ರೂಪಾಯಿಗಳನ್ನು ತುಂಬಿಸುತ್ತೇನೆ" ಎಂದು ಯಾರೋ ಆಶ್ವಾಸನೆ ಕೊಡುತ್ತಾರೆ, ನಾವು ಪ್ರತಿನಿತ್ಯ ಬ್ಯಾಂಕಿಗೆ ಹೋಗಿ ಹಣ ಜಮಾ ಆಗಿದೆಯೇ ಎಂದು ವಿಚಾರಿಸುತ್ತಾ ಆಸೆಯನ್ನು ತುಂಬಿಕೊಳ್ಳುತ್ತೇವೆ. ಅವೈಚಾರಿಕತೆಯ ಪರಾಕಾಷ್ಠೆ ಇದರಲ್ಲಿದೆ. ಹಾಗೆ ತುಂಬಬೇಕಾದರೆ ಮಾಡಬೇಕಾದ್ದನ್ನು ಆಶ್ವಾಸನೆ ಕೊಟ್ಟವರು ಮಾಡುತ್ತಾರೆಯೆ ? ಮಾಡಬಲ್ಲರೆ ? ಅದಕ್ಕೆ ಬೇರೆ ದೇಶಗಳು ಸಹಕಾರ ನೀಡುತ್ತವೆಯೆ? ನೀಡಲು ಆ ದೇಶಗಳನ್ನು ಒಪ್ಪಿಸಲು ನಮಗೆ ಸಾಮರ್ಥ್ಯವಿದೆಯೆ? ಅಲ್ಲೆಲ್ಲಾ ಕಪ್ಪುಹಣ ಇಟ್ಟುಕೊಂಡಿರುವವರು ಪ್ರತಿತಂತ್ರ ಮಾಡುವುದಿಲ್ಲವೆ? ಹಾಗೆ ಮಾಡಹೋದರೆ ಅವರು ಸಫಲರಾಗದಂತೆ ಮಾಡಲು ನಮ್ಮ ಕ್ರಮಗಳೇನು? ವೈಚಾರಿಕತೆಯೆಂದರೆ ಇವೆಲ್ಲಾ ಸೇರುತ್ತವೆ, "ಹನುಮಂತನು ಹಿಂದೂ ಮಹಾಸಾಗರವನ್ನು ದಾಟಿ ಲಂಕೆಗೆ ಹಾರಿಹೋಗಲು ಸಾಧ್ಯವಿರಲಿಲ್ಲ" ಎಂದು ಹೇಳುವುದು ಮಾತ್ರವೇ ವೈಚಾರಿಕತೆಯಾಗುವುದಿಲ್ಲ. ಆದ್ದರಿಂದ ಬ್ಯಾಂಕುಗಳಿಗೆ ಪ್ರತಿದಿನ ಎಡತಾಕುವ ಬದಲು ಆಶ್ವಾಸನೆ ನೀಡಿದ್ದವರನ್ನು ನಾವು ಕೇಳಬೇಕಾಗಿತ್ತು; "ಮಹಾಸ್ವಾಮಿ, ನೀವು ಲಕ್ಷಗಳ ಮಾತನಾಡಿದ್ದಿರಲ್ಲ, ಆ ಲಕ್ಷಗಳನ್ನು ತರಲು ನಿಮ್ಮ ಆರ್ಥಿಕ ನೀತಿಯತ್ತ ಲಕ್ಷ್ಯ ಕೊಟ್ಟಿರಾ? ನಿಮ್ಮ 'ಇಕನಾಮಿಕ್ ಪಾಲಿಸಿ'ಯು ಅಂತಹ ಕಾರ್ಯಕ್ಕೆ ವಿರೋಧವಾಗಿರುವ ಸಾಂದ್ರ ಕಾರಣವಾಗಿರುವಾಗ ನಿಮ್ಮ ಮಾತನ್ನು ನಂಬುವುದು ಹೇಗೆ? ಹೀಗೆ ಸುಳ್ಳು ಭರವಸೆ ನೀಡಿದ್ದು ಯೋಗ್ಯವೆ?" ಎಂದು.

ಎರಡನೆಯದು ಮತಧರ್ಮ ನಿರಪೇಕ್ಷತೆ. ಎಲ್ಲರನ್ನೂ ಒಳಗೊಳ್ಳುವ ಮಹದಾಶಯದ ಸಾಫಲ್ಯಕ್ಕೆ ಇದು ಅಗತ್ಯವಾದ ಸಾಧನ. "ಇವ ನಮ್ಮವನಲ್ಲ, ಇವನ ಇಡಿ ಬಹುದೂರ, ಇವ ಸನಿಹಕೆ ಬಂದರೆ ಎಲ್ಲಾ ಹಾಳು" ಎಂಬ ಅಪಮೌಲ್ಯ ಗೊಳ್ಳಬೇಕಾದ ಭಾವನೆಯು ನಮ್ಮನ್ನಾವರಿಸಿದ್ದರೆ ಅದಕ್ಕೆ ಒಂದೇ ಮದ್ದು ಮತಧರ್ಮ ನಿರಪೇಕ್ಷತೆ ಅಥವಾ "ಇವನಾರವ, ಇವ ನಮ್ಮವ" ಎಂಬ ಶ್ರದ್ಧೆ. ಹಿಂದೆಂದೂ ಇಲ್ಲದಷ್ಟು ಇಂದು ಇದರ ಮೌಲ್ಯವನ್ನು ನಾವು ಗುರುತಿಸಬೇಕಾಗಿದೆ. ಮಾತಿನಲ್ಲಿ "ಸರ್ವೇ ಜನಾಃ ಸುಖಿನೋ ಭವಂತು" ಅಥವಾ "ವಸುಧೈವ ಕುಟುಂಬಕಂ" ಎಂಬ ಗಳವು ನಿರರ್ಥಕ. ಅದು ತೋರಿಕೆಯ ಮಾತಾಗುವುದಾದರೆ ಅದನ್ನು ಉಚ್ಚರಿಸುವುದು ಅಪರಾಧವೆಂದೇ ಗಣನೆಗೆ ಬರಬೇಕು. "ಸರ್ವೇ ಜನಾಃ ಕಥಂ ಸುಖಿನಃ ಭವಂತಿ" (ಎಲ್ಲರೂ ಸುಖಿಗಳಾಗಬೇಕಾದರೆ ಏನು ಮಾಡಬೇಕು?) ಎಂಬುದು ನಮ್ಮ ಮೂಲ ಮಂತ್ರವಾಗಬೇಕು. ಅಂದರೆ, ಒಬ್ಬರನ್ನೊಬ್ಬರು ಅಪ್ಪಿಕೊಳ್ಳದಿದ್ದರೂ ಒಬ್ಬರನ್ನೊಬ್ಬರು ಒಪ್ಪಿಕೊಳ್ಳುವ, ಸಹಿಸುವ, ಮನೋಧರ್ಮವನ್ನಾದರೂ ಬೆಳೆಸಿಕೊಳ್ಳಬೇಕು. "ಸಮುದಾಯವೆಂದರೆ ನಾವೆಲ್ಲಾ" ಎಂಬುದು ಮೂರ್ತರೂಪದಲ್ಲಿ ಆಚರಣೆಗೆ ಬರಬೇಕು. "ನೀನು ನನಗಿಂತಲೂ ಭಿನ್ನ, ನಾನು ನಿನ್ನಂತಿರಲಾರೆ, ಆದರೆ ನಾನು ನಾನಾಗಿರುವಂತೆ ನೀನು ನೀನಾಗಿರಲು ನನ್ನದೇನೂ ಅಡ್ಡಿಯಿಲ್ಲ" ಎಂಬಷ್ಟು ಸಹನೆ ಸಾಧ್ಯವಾದರೆ ಸಾಕು. ಮತಧರ್ಮ ನಿರಪೇಕ್ಷತೆಯು ಇಷ್ಟನ್ನು ನಮಗೆ ಕೊಡ ಮಾಡಿದರೆ ಸಾಕು, ಅನ್ಯಾಕ್ರಮಣಶೀಲತೆಗೆ ಕಡಿವಾಣ ಹಾಕಲು ಅದು ಸಹಾಯಕ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶದ ಎಲ್ಲ ವರ್ಗಗಳು ಮತ್ತು ಸಮುದಾಯಗಳು ಒಂದರ್ಥದಲ್ಲಿ ಒಟ್ಟಾಗಿದ್ದವು. ಎಲ್ಲರ ಆಕಾಂಕ್ಷೆಯೂ ಸ್ವಾತಂತ್ರ್ಯವೇ ಆಗಿದ್ದರೂ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಭಗತ್ ಸಿಂಗ್ ಮುಂತಾದವರು ಮತ್ತು ಕಮ್ಯುನಿಸ್ಟರು ಪರಿಭಾವಿಸಿಕೊಂಡಿದ್ದು ಅನನ್ಯವಾಗಿತ್ತು. ಅಂತೆಯೇ ಡಾ॥ ಅಂಬೇಡ್ಕರರ ಕಲ್ಪನೆಯೂ ಕಾಂಗ್ರೆಸ್‌ನ ಕಲ್ಪನೆಗಿಂತಲೂ ಬೇರೆಯಾಗಿತ್ತು. ಆದರೆ ಶೌಕತ್ ಉಸ್ಮಾನಿ, ಹಜ್ರತ್ ಮೋಹನಿ, ಸುಭಾಷ್ ಬೋಸ್, ಭಗತ್ ಸಿಂಗ್, ವಲ್ಲಭಭಾಯಿ ಪಟೇಲ್, ಅರುಣಾ ಅಸಫ್ ಆಲಿ, ಲೋಹಿಯಾ, ಇತ್ಯಾದಿಗಳೆಲ್ಲಾ ಜೊತೆಯಾಗಿ ಹೋರಾಡಲು ಸಾಧ್ಯವಿತ್ತು. ಇಂದು ಆಳ್ವಿಕೆ ನಡೆಸುತ್ತಿರುವ ಪಕ್ಷದ ಪೂರ್ವಜರು ಯಾರೂ ಅದರಲ್ಲಿ ಭಾಗಿಗಳಾಗಿರಲಿಲ್ಲವೆಂಬುದು ಬೇರೆ ಪ್ರಶ್ನೆ. "ಸಾಮುದಾಯಿಕ" ಎಂದಾಗ ಅವರಿಗೆ ಒಂದೇ ಸಮುದಾಯವು ಗಮನಕ್ಕೆ ಬರುತ್ತಿದ್ದಿರಬೇಕು. ಆ ಸಮುದಾಯವು ಇಂದು ಬೇರೆಲ್ಲರಿಗಿಂತಲೂ ಹೆಚ್ಚಾಗಿ ರಾಷ್ಟ್ರೀಯತೆಯ ಶ್ಲಾಘನೆ ಮಾಡುವುದು ಒಂದು ವ್ಯಂಗ್ಯ. ಈ ಸಮುದಾಯವು ವಿಶ್ವವಿದ್ಯಾನಿಲಯಗಳ ಆವರಣಗಳಲ್ಲಿ ಯುದ್ಧದ ಟ್ಯಾಂಕ್‌ಗಳನ್ನು ನಿಲ್ಲಿಸಿ ರಾಷ್ಟ್ರೀಯತೆಯ ಪ್ರಜ್ಞೆ ಮೂಡಿಸುವ ತವಕದಲ್ಲಿದೆ.

ಅದಂತಿರಲಿ, ಮುಖ್ಯವಾದ ವಿಷಯವೆಂದರೆ, ಇಂದು ನಮ್ಮಲ್ಲಿ 'ನಾವು' ಮತ್ತು 'ಅವರು' ಎಂಬ ಕ್ಷುಲ್ಲಕ ವಿಭಜನೆಯು ಗಾಢವಾಗುತ್ತಿದೆ. "ಅವರು" ಹೊರಗಿನವರು, ಆದ್ದರಿಂದ ರಾಷ್ಟ್ರದ ವಿಷಯ ಬಂದಾಗ ಅವರ ಸೇರ್ಪಡೆಗೆ ಅವಕಾಶವಿಲ್ಲ. ಇದನ್ನೇ ನಾವು "ಹೊರತುಪಡಿಸುವಿಕೆ" ಎನ್ನುತ್ತೇವೆ. ಅದೊಂದು ಜಾಡ್ಯ ಮತ್ತು ಅದರಿಂದಾಗಿ ಬಹುತ್ವವನ್ನು ಅನಾದರದಿಂದ ಕಾಣಲಾಗುತ್ತದೆ. ರಾಷ್ಟ್ರೀಯತೆ ಯೆಂದರೆ "ಏಕಶಿಲಾಕಾರವುಳ್ಳ ಬೃಹತ್ ಬಂಡೆ" ಎಂಬುದು ಯಾವ ರಾಷ್ಟ್ರದಲ್ಲೂ ಆರೋಗ್ಯಕರ ಭಾವನೆಯಾಗಲಾರದು. ಯಾರನ್ನು ಬೇಕಾದರೂ "ರಾಷ್ಟ್ರ ವಿರೋಧಿ" ಎಂದು ಎಗ್ಗಿಲ್ಲದೆ ಬಣ್ಣಿಸಿಬಿಡುವ ಹಿಂಸಾತ್ಮಕ ಮನಸ್ಸುಗಳೂ ಹೆಚ್ಚುತ್ತಿವೆ. ಅವು ಜಡ್ಡು ಮನಸ್ಸುಗಳೆಂದು ಬೇರೆ ಹೇಳಬೇಕಾಗಿಲ್ಲ. ಉತ್ತರ ಪ್ರದೇಶ ಮತ್ತು ಬಿಹಾರಗಳಲ್ಲಿ ಒಂದು ಪೀಡೆ ಅವತರಿಸುತ್ತಿದೆ. ಅದನ್ನು "ಹೊಸ ಪಡೆ" ಎನ್ನುತ್ತಿದ್ದಾರೆ. ಅದರ ಕಾರ್ಯಭಾರ ಬೀಭತ್ಸವಾಗಿದೆ : ಮುಸಲ್ಮಾನ ಪಂಗಡದವರಲ್ಲದ ಯಾವ ಮತ್ತು

ಎಷ್ಟು ಮಹಿಳೆಯರು ಮುಸಲ್ಮಾನ ಪುರುಷರನ್ನು ಮದುವೆಯಾಗಿದ್ದಾರೆ ಮತ್ತು ಅವರೀಗ ಎಲ್ಲಿದ್ದಾರೆ, ಎಂಬುದರ ವಿವರಗಳನ್ನು ದಾಖಲಿಸಿ ಇಟ್ಟುಕೊಳ್ಳುವುದು. ಪಟ್ಟಿ ಏಕೆ ಬೇಕೆಂಬುದನ್ನು ಊಹಿಸಲಡ್ಡಿಯಿಲ್ಲ. ಇತಿಹಾಸದ ತಪ್ಪುಗಳನ್ನು ಸರಿಪಡಿಸುವುದರಲ್ಲಿ ಇದೂ ಸೇರಿಹೋಗುತ್ತದೆಂದು ತೋರುತ್ತದೆ. ತಲೆಗಳನ್ನು ಉರುಳಿಸುವ ಮೂಲಕ ಮತಧರ್ಮದ ರಕ್ಷಣೆಯ ಕೈಂಕರ್ಯವು ಅಚಿಂತ್ಯ ಮತ್ತು ಅನೂಹ್ಯ. ನಮ್ಮ ದೇಶದ ಸಂಸ್ಕೃತಿಯಿಂದ ನಾವು ಕಲಿಯಬೇಕಾದ್ದು ಇದನ್ನೇ ಏನು? ಹಲವು ಶತಮಾನಗಳಿಂದ ನಾವೊಂದು ಶ್ರೇಣೀಕೃತ ಸಮಾಜದ ಹೊರೆಯನ್ನು ಹೊತ್ತು ಬಂದಿದ್ದೇವೆ. ಅದರ ವಿರುದ್ಧ ಸೆಣಸುತ್ತಿರುವಾಗ, ಸಮಾಜದಲ್ಲಿ ಸಮಾನತೆಯು ಅಂಕುರಿಸಬೇಕೆಂದು ತಹತಹಿಸುತ್ತಿರುವಾಗ, ಅಂತರ್ಧರ್ಮೀಯ ಮತ್ತು ಅಂತರ್ಜಾತೀಯ ವಿವಾಹಗಳನ್ನು ನಿರ್ಬಂಧಿಸುವುದು ಉಚಿತವೇ? ಅಂದರೆ, ನಾವು ವಿಷಗಾಳಿಯನ್ನು ಹರಡುತ್ತಿದ್ದೇವೆ, ಸೇವಿಸುತ್ತಿದ್ದೇವೆ. ಅದನ್ನು ನಿವಾರಿಸುವುದು ಹೇಗೆ? ಜನತಾ ವಿಜ್ಞಾನ ಚಳುವಳಿಗೆ ಮಹತ್ತರವಾದ ಜವಾಬ್ದಾರಿ ಇದೆಯೆಂಬುದು ಸ್ಪಷ್ಟ.

ಇನ್ನು ಮೂರನೆಯ ಮತ್ತು ಕಡೆಯ ಅಂಶ : ವೈಜ್ಞಾನಿಕ ಹಾದಿ. ವಸ್ತುನಿಷ್ಠತೆಯು ವಿಜ್ಞಾನದ ಮೂಲಭೂತ ಲಕ್ಷಣ; ಅಂತೆಯೇ, ಅದಕ್ಕೊಂದು ವಿಧಾನವಿದೆ. ಚರಕ ಸಂಹಿತೆಯು ಅದನ್ನು ವಿಶದೀಕರಿಸಿರುವುದು ಹೀಗೆ : "ವಿನಾ ತರ್ಕೇಣ ಯಾ ಸಿದ್ಧಿಃ ಯದೃಚ್ಛಾ ಸಿದ್ಧಿರೇವ ಸಾ." ಅದನ್ನು ವೈದ್ಯಕೀಯದ ಸಂದರ್ಭದಲ್ಲಿ ಹೇಳಲಾಗಿದೆ. "ಅಡ್ಡೇಟಿಗೊಂದು ಗುಡ್ಡೇಟು" ಎಂಬುದು ವೈದ್ಯಕೀಯ ವಿಧಾನವಲ್ಲ. ಕಾರ್ಯ–ಕಾರಣ ಭಾವವು ಅಲ್ಲಿ ರೋಗ ಮತ್ತು ಅದರ ಉಪಚಾರಕ್ಕೆ ಸಂಬಂಧಿಸಿದ್ದು. ಅಕಸ್ಮಾತ್ತಾಗಿ ರೋಗಿಯು ಗುಣಹೊಂದಿದರೆ ಅದು ವೈದ್ಯಕೀಯದ ಶ್ರೇಯಸ್ಸಲ್ಲ. ನಿಷ್ಪಕ್ಷವಾದ ತಿಳಿವಳಿಕೆಯು ವೈದ್ಯಕೀಯದ ಅಡಿಪಾಯ. ರೋಗದ ಲಕ್ಷಣ ವಿಶೇಷ ಮತ್ತು ಔಷಧಿಯ ಲಕ್ಷಣ ವಿಶೇಷ ಸರ್ವಥಾ ತಾಳೆಯಾದಾಗ ಮಾತ್ರ ಅದು ಫಲಕಾರಿ ವೈದ್ಯಕೀಯವೆನಿಸಿಕೊಳ್ಳುತ್ತದೆ. ಅವಲೋಕನ–ವಿಶ್ಲೇಷಣೆ–ತೀರ್ಮಾನ, ಇದು ವಿಜ್ಞಾನದ ಸರಣಿ. ವೈಶೇಷಿಕ ದರ್ಶನದಲ್ಲಿ ಈ ಕಾರಣದಿಂದಾಗಿಯೇ ಪ್ರತಿಯೊಂದು ಪದಾರ್ಥದಲ್ಲೂ 'ವಿಶೇಷ' ಎಂಬ ಪ್ರತ್ಯೇಕ ಪದಾರ್ಥವೊಂದಿರುತ್ತದೆಂಬ ಮಹತ್ವದ ವಿಚಾರವನ್ನು ಪ್ರತಿಪಾದಿಸಲಾಗಿದೆ. ಪ್ರತಿಯೊಂದು 'ವಿಶೇಷ'ವೂ ಬೇರೆಲ್ಲ 'ವಿಶೇಷ'ಗಳಿಂದ ಭಿನ್ನ. ಎಲ್ಲ ಪದಾರ್ಥಗಳಲ್ಲೂ ಸಾಮಾನ್ಯಾಂಶವೊಂದುಂಟು, ಅಂತೆಯೇ ವಿಶೇಷವೂ ಉಂಟು. ಚರಕ ಸಂಹಿತೆಯು "ರಾಜಯಕ್ಷ್ಮ" ಎಂಬ ಕಾಯಿಲೆಯನ್ನು ಗುಣಪಡಿಸುವ ವಿಧಾನವನ್ನು ಹೇಳುವಾಗ ಇದನ್ನು ಒತ್ತಿಹೇಳಿದೆ. ಅದು ವ್ಯಕ್ತಿಯನ್ನು ಕ್ಷಯಿಸಿಹೋಗುವಂತೆ ಮಾಡುವ ಕಾಯಿಲೆ. ಅದಕ್ಕೆ ರಾಮಬಾಣವೆಂದರೆ ಹಸುವಿನ ಮಾಂಸ, ಎನ್ನುತ್ತದೆ ಚರಕ ಸಂಹಿತೆ. ರೋಗಿಯನ್ನು ಗುಣಪಡಿಸುವುದು ವೈದ್ಯನ ನೀತಿಸಂಹಿತೆ; ಆದ್ದರಿಂದ ರೋಗಿಯ ಆಚಾರವು ಅವನಿಗೆ ಮುಖ್ಯವಲ್ಲ. ಹೇಗೋ ಸರಿಯಾದ ಔಷಧಿಯನ್ನು ರೋಗಿಯು ಸೇವಿಸುವಂತೆ ಮಾಡುವುದು ಅವನ ಕೆಲಸ. ಚೆನ್ನಾಗಿ ಅಡಿಗೆ ಮಾಡಿ ಹಸುವಿನ ಮಾಂಸವನ್ನು ಮೊಲದ ಮಾಂಸವೋ ಜಿಂಕೆಯ ಮಾಂಸವೋ ಏನೋ ಎಂದು ಹೇಳಿ ರೋಗಿಗೆ ತಿನ್ನಿಸುವುದು ಅವನ ನೀತಿಸಂಹಿತೆ. ಎಲ್ಲರೂ ಈ ಕೂಡಲೆ ಹಸುವಿನ ಮಾಂಸವನ್ನು ತಿನ್ನಲಾರಂಭಿಸಬೇಕೆಂಬುದು ಇದರರ್ಥವಲ್ಲ, ಆದರೆ ತಿನ್ನಲೇಬೇಕಾದವರು ತಿನ್ನಲು ಅಡ್ಡಿ ಕೂಡದು ಎಂದಷ್ಟೇ ಅದರರ್ಥ. ಅದರ ವೈದ್ಯಕೀಯ ಗುಣವನ್ನಷ್ಟೇ ಅದು ಗಮನಿಸಿದೆ. ಅಂದರೆ, ವಿಜ್ಞಾನದ ಹಾದಿಯಲ್ಲಿ ಉಪಾಧಿಗಳಿಗೆ ಮಾನ್ಯತೆ ಇಲ್ಲವೆಂದರ್ಥ. ಗುರುಗ್ರಹದ ವೀಕ್ಷಣೆಗೆ ದೂರದರ್ಶಕವನ್ನು ಬಳಸಬಹುದೇ ಇಲ್ಲವೇ ಎಂಬುದನ್ನು ಅರಿಸ್ಟಾಟಲ್‌ನಿಂದ ತಿಳಿಯ ಬಯಸಿದ್ದವರು ಗೆಲಿಲಿಯೋ ಕಾಲದಲ್ಲಿದ್ದರು. ಆದರೆ ಗೆಲಿಲಿಯೋಗೆ ಅಂತಹ ಬಂಧನ ಕಾಡಲಿಲ್ಲ.

ಚಿಂತನೆಯ ಮತ್ತು ಕ್ರಿಯೆಯ ಸರ್ವಸ್ವವೂ ವಿಜ್ಞಾನದ ಪರಿಧಿಗೆ ಸೇರುತ್ತದೆ. ಪ್ರಗತಿ ಮತ್ತು ಅಭಿವೃದ್ಧಿಯ ಯೋಜನೆಗಳು, ಪರಿಸರ ಪ್ರಜ್ಞೆ, ಏರುಪೇರುಗಳನ್ನು ಹೆಚ್ಚಿಸುವ ಅಭಿವೃದ್ಧಿ ಕ್ರಮಗಳ ನಿರಾಕರಣೆ, ಇತ್ಯಾದಿಗಳೆಲ್ಲವುಗಳ ಬಗೆಗೂ ವೈಜ್ಞಾನಿಕ ಮತ್ತು ಅವೈಜ್ಞಾನಿಕ ಪರ್ಯಾಯಗಳಿರುತ್ತವೆ. ನಮ್ಮ ಆಯ್ಕೆಯು ವೈಜ್ಞಾನಿಕ ವಿಧಾನವೇ ಆಗಿರಬೇಕು, ಏಕೆಂದರೆ ಇನ್ನೊಂದು ವಿಧಾನವು ಹಾನಿಕಾರಕವಾದ್ದು. ನಮ್ಮ ಸಮಾಜವನ್ನು ಮತ್ತು ದೇಶವನ್ನು ಹೆಚ್ಚು ಸಹ್ಯವಾಗಿಸಬೇಕೆಂಬ ಉದ್ದೇಶವಿದ್ದರೆ ನಮಗಿರುವ ಆಯ್ಕೆ ಒಂದೇ; ಅದು ವೈಜ್ಞಾನಿಕ ವಿಧಾನ.

ಯಾವುದು ವೈಜ್ಞಾನಿಕ ಎಂಬುದರ ಬಗ್ಗೆ ವಿಜ್ಞಾನಿಗಳಲ್ಲೂ ಏಕಾಭಿಪ್ರಾಯವಿಲ್ಲ. ಫಿಲಿಪ್ ಲೆನಾರ್ಡ್ ಎಂಬುವನು ಖ್ಯಾತ ಭೌತವಿಜ್ಞಾನಿ, ಹಿಟ್ಲರನ ಬೆಂಬಲಿಗ.

# ಯಾರು ಆ ಐವರು?

**ಹಾ**ಜಿಮಾ, ಪಾರ್ವತಿ ಆತ್ಮಗಳು
ತೋರಿದ ಪಂಜಿನ ಬೆಳಕಲ್ಲಿ
ಸಾಗಿ ಸುಡುಗಾಡಿಗೆ ಹೋದರು
ನಂಬಿದ ತತ್ವಕ್ಕೆ ಏಕನಿಷ್ಠರಾದರೂ
ಪಂಚ ಪತಿವ್ರತೆಯರಲ್ಲಿ ಇವರಿಲ್ಲ

ಶಸ್ತ್ರ ಎತ್ತಿ ಶಾಸ್ತ್ರವ ಸೀಳಿದರೂ
ಚಂಡಿ ಚಾಮುಂಡಿ ದುರ್ಗಿ ರುದ್ರಿ ಕಾಳಿಯರಲ್ಲ
ಭೂಬಕಾಸುರರು ಗಣಿಹೆಗ್ಗಣಗಳು
ಕೊಟ್ಟ ಖಾಕಿ ಸುಪಾರಿ
ಅಗಿದು ಉಗುಳಿದ ನೆತ್ತರಿವರು

ಯತ್ರ ನಾರ್‍ಯಸ್ತು ಪೂಜ್ಯಂತೇ
ಎಂದರಚುವ ಕರ್ಕಶ ಕಂಠಗಳು
ತುಲಸಿ ಕಟ್ಟೆ ಬಿಟ್ಹೋದವಳನ್ನು
ತಮ್ಮ ರಾಮನಿಂದ ಕೊಲ್ಲಿಸುತ್ತವೆ
ಅಂಬೇಡ್ಕರ್ ಪರಿನಿರ್ವಾಣಕ್ಕೆ
ಎಂಥ ದುರಂತ ಸಾಂಗತ್ಯ!

ಪೇಶ್ವೆ ಕೊಟ್ಟ ಪದಕ ಹೊತ್ತು
ಬರುವ ಅಯೋ... ರಾಮನನ್ನು
ಸ್ವಾಗತಿಸಲು ಕುಂಕುಮ ಮೆತ್ತಿದ
ಕೆಂಜೇಳುಗಳು ಕೊಂಡಿ ಮೇಲೆ
ಹೂಹಾರ ಹಿಡಿದು ಕಾಯುತ್ತಿವೆ

ಬಿಳಿ ದೊದಲ ಪುರೋಹಿತರು
ಯದುವಂಶ ರಾಜಕುವರನೆದುರು
ಸೊಂಟ ಬಗ್ಗಿಸಲು
ಸಕ್ಕರೆ ಬಯಲಿನ ಆನೆಗಳಿಗೆ
ಕಲಿಸಿ ಕೊಡುತ್ತಿದ್ದಾರೆ
ಇವರಿಗೆ ಗೊತ್ತಿಲ್ಲ, ಇನ್ನೂ
ನೆಲದ ಬಸಿರಿನಲ್ಲಿ ಅಸಂಖ್ಯ
ಚೈತನ್ಯಶೀಲ ಜೀವಗಳು ಮಿಸುಕುತ್ತಿವೆ
ಹುಟ್ಟುತ್ತವೆ, ನಿಮ್ಮ ಹುಟ್ಟಡಗಿಸುತ್ತವೆ.

*(ಗಡ್ಚಿರೋಲಿ ಎನ್‌ಕೌಂಟರ್ ಸಂಕಟದಲ್ಲಿ ಹುಟ್ಟಿದ ಕವಿತೆ)*



ಅವನ ಪ್ರಕಾರ ಐನ್‌ಸ್ಟೈನರ ವಿಜ್ಞಾನವು "ಯಹೂದೀ ವಿಜ್ಞಾನ" ಮತ್ತು ತನ್ನದು "ಆರ್ಯ ವಿಜ್ಞಾನ." ಆದ್ದರಿಂದ ಐನ್‌ಸ್ಟೈನರಿಗೆ ಕಿರುಕುಳ ನೀಡಿ ಜರ್ಮನಿಯಿಂದ ಅವರನ್ನು ಹೊರದಬ್ಬಲು ಅವನು ಕ್ರಿಯಾಶೀಲನಾಗಿದ್ದ. ಎಲ್ಲ ವಿಜ್ಞಾನಿಗಳೂ ಬಹುತೇಕ ವಿರೋಧಿಸಿದ್ದ ನ್ಯೂಟ್ರಾನ್ ಬಾಂಬನ್ನು ಎಡ್ವರ್ಡ್ ಟೆಲರ್ ಸಮರ್ಥಿಸಿ ಕೊಂಡಿದ್ದ. ನಮ್ಮ ದೇಶದ ಇಸ್ರೋ ಸಂಸ್ಥೆಯ ಒಬ್ಬ ನಿರ್ದೇಶಕರು ತಾವು ಹಾರಿಸಬೇಕಿದ್ದ ಸ್ಯಾಟಲೈಟ್‌ಗಳ ಮಾದರಿಗಳನ್ನು ತಿರುಪತಿಯ ವೆಂಕಟೇಶ್ವರನ ಮುಂದಿರಿಸಿ, ಅವನ ಆಶೀರ್ವಾದ ಬೇಡಿ, ಆಮೇಲೆ ಮೂಲ ಸ್ಯಾಟಲೈಟುಗಳನ್ನು ಶ್ರೀಹರಿಕೋಟಾದಿಂದ ಹಾರಿಸುತ್ತಿದ್ದರು. ಕೆಲವು ಹಾರಿದವು, ಮತ್ತೆ ಕೆಲವು ಉರುಳಿಬಿದ್ದವು. ವೆಂಕಟೇಶ್ವರನ ಮುಂದಿರಿಸದೆ ಹಾರಿಸಿದ್ದ ಸ್ಯಾಟಲೈಟ್‌ಗಳಿಗೂ ಅದೇ ಪರಿಣಾಮ. ಅಂದರೆ, ನಿಖರ ತಂತ್ರಜ್ಞಾನ ಮತ್ತು ಅದರ ಅಳವಡಿಕೆಯು ವೆಂಕಟೇಶ್ವರನಿಗಿಂತ ಹೆಚ್ಚು ವಿಶ್ವಾಸಾರ್ಹ ಸಾಧನ.

ವರ್ತಮಾನದಲ್ಲಿ ವೈಜ್ಞಾನಿಕ ಹಾದಿಗೆ ನಮ್ಮ ದೇಶದಲ್ಲಿ ಮೊದಲಿಗಿಂತಲೂ ಹೆಚ್ಚು ಅಡಚಣೆಗಳಿವೆ. ವಿಜ್ಞಾನದ ಚಳುವಳಿಗೆ ಅದೊಂದು ಸವಾಲು. ನಮ್ಮ ಸಾಮೂಹಿಕ ಚಿಂತನೆ ಮತ್ತು ಕ್ರಿಯೆಗಳಲ್ಲಿ ಅಂಧಶ್ರದ್ಧೆಯು ವ್ಯಾಪಕವಾಗಿರುವುದು ಹೊಸದೇನಲ್ಲ. ಅದರಿಂದ ನಾವು ಅಸಹಾಯಕರಾಗಿದ್ದೇವೆಂಬ ಭಾವನೆಯು ಮೂಡಲು ಸಾಧ್ಯ. ಹುರುಳಿಲ್ಲದ ಸಿದ್ಧಾಂತಗಳು ಇತಿಹಾಸದ ಗತಿಯಲ್ಲಿ ಮುಳುಗಿಹೋಗಿವೆಯಾದರೂ ಭ್ರಾಂತ ವಿಜ್ಞಾನಕ್ಕೆ ಕೊರತೆಯಿಲ್ಲ. ಕ್ರೈಸ್ತಪಾದ್ರಿ ಜೋರ್ದನೋ ಬ್ರೂನೋ ಖಗೋಳಶಾಸ್ತ್ರಜ್ಞನೂ ಆಗಿದ್ದುದರಿಂದ ಜೀವಂತವಾಗಿ ಸುಡಲ್ಪಟ್ಟಿದ್ದ. ಭಗವಂತನೊಡನೆ ಸಂಪರ್ಕ ಸಾಧಿಸಲು ತನಗೆ ಚರ್ಚಿನ ಮಾಧ್ಯಮ ಬೇಕಿಲ್ಲವೆಂದು ಹೇಳಿದ ಬಾಲೆ ಜೋನ್ ಫ್ರಾನ್ಸಿನಲ್ಲಿ ಜೀವಂತ ಸುಡಲ್ಪಟ್ಟಿದ್ದಳು. ಮಹಾಭಾರತದ ಒಂದು ವೃತ್ತಾಂತದಂತೆ ಕುರುಕ್ಷೇತ್ರದ ಯುದ್ಧಾನಂತರ ರಾಜನಾಗಲು ಹಸ್ತಿನಾಪುರಕ್ಕೆ ವಿಜೃಂಭಣೆಯಿಂದ ಸಾಗುತ್ತಿದ್ದ ಯುಧಿಷ್ಠಿರನನ್ನು ಒಬ್ಬ ಚಾರ್ವಾಕನು ಮೂದಲಿಸಿದನಂತೆ : "ಅಷ್ಟೊಂದು ಮಂದಿಯನ್ನು ಕೊಂದ ನಿನ್ನ ಕೈಗಳು ರಕ್ತಸಿಕ್ತವಾಗಿವೆ; ನೀನು ಸಿಂಹಾಸನವೇರಲು ಅರ್ಹನಲ್ಲ", ಎಂದು. ಸಮೂಹದಲ್ಲಿದ್ದ ಕೆಲವರು ಅವನನ್ನು ಹಿಡಿದು ಘೋಷಿಸಿದರಂತೆ, "ಇವನು ಬ್ರಾಹ್ಮಣನಲ್ಲ, ಬದಲಾಗಿ ಚಾರ್ವಾಕನ ವೇಷದಲ್ಲಿರುವ ರಾಕ್ಷಸ," ಎಂದು. ಅವನು ಅಲ್ಲೇ ಕೊಲ್ಲಲ್ಪಟ್ಟನೆಂದು ಮಹಾಭಾರತವು ಹೇಳಿದೆ. ಏನಾದರೊಂದು ಅವೈಜ್ಞಾನಿಕ ಮಾತು ಅಥವಾ ಕೃತಿಯು ವರದಿಯಾಗದಿದ್ದ ದಿನವೇ ಇಲ್ಲದಂತಾಗಿಹೋಗಿರುವ ನಮ್ಮ ಇಂದಿನ ಸಂದರ್ಭದಲ್ಲಿ ನಾವೆಷ್ಟು ಎಚ್ಚರದಿಂದಿರಬೇಕಾಗಿದೆಯೆಂಬುದನ್ನು ಒತ್ತಿಹೇಳುವ ಅಗತ್ಯವಿಲ್ಲ. ಅಲ್ಪಪ್ರಮಾಣದಲ್ಲಿಯೇ ಆದರೂ ಸರಿಯೇ, ವೈಜ್ಞಾನಿಕ ದೃಷ್ಟಿಯು ವ್ಯಾಪಕವಾಗಿ ಹಬ್ಬುವಂತೆ ಮಾಡಲು ನಾವು ಬದ್ಧರು.

ವಿಜ್ಞಾನದ ಹೆಸರಲ್ಲಿ ಅವೈಜ್ಞಾನಿಕ ವಿಧಾನ ಮತ್ತು ತೀರ್ಮಾನಗಳಿಗೆ ಎರಡು ಉದಾಹರಣೆಗಳನ್ನು ನೋಡೋಣ; ಅವು ವಿಜ್ಞಾನದ ವಸ್ತುನಿಷ್ಠತೆಯನ್ನು ಹೇಗೆ ಗಾಳಿಗೆ ತೂರಿವೆಯೆಂಬುದು ಸ್ಪಷ್ಟವಾಗುತ್ತದೆ. ಸಾಚಾ ಮತ್ತು ಖೋಟಾ ವಿಜ್ಞಾನಗಳ ನಡುವಿನ ವ್ಯತ್ಯಾಸವು ನಮ್ಮ ಮನಸ್ಸಿಗೆ ನಾಟಲು ಇವು ಸಹಾಯಕವೆನಿಸುತ್ತದೆ :

(ಅ) ವಿಂಗಡಣೆಯ ಸಾಧನವಾಗಿ ಡಿಎನ್‌ಎ ಪ್ರಯೋಗವನ್ನು ಅವಲಂಬಿಸುವುದು ಈಚಿನ ವರ್ಷಗಳಲ್ಲಿ ಒಂದು ಪದ್ಧತಿಯಾಗಿದೆ. ಆದರೆ ಪೂರ್ವಕಲ್ಪಿತ ತೀರ್ಮಾನಗಳಿಗೆ ವೈಜ್ಞಾನಿಕ ಮೆರುಗು ನೀಡಲು ಸಹ ಅದು ಬಳಕೆಯಾಗುವುದುಂಟು. ವಿಜ್ಞಾನದ ಮುದ್ರೆಯೊತ್ತಿದರೆ ಪರಮಸತ್ಯದ ಪ್ರಾಪ್ತಿಯಾದಂತೆಯೇ ಅಲ್ಲವೆ! ಭಾರತದ ಪ್ರಾಚೀನ ಇತಿಹಾಸದಲ್ಲಿ ಒಂದು ಮುಗ್ಗಟ್ಟಿನ ಪ್ರಶ್ನೆ ಇದೆ : ಸಿಂಧು ನದಿಯ ನಾಗರಿಕತೆ ಮತ್ತು ವೈದಿಕ ಸಾಹಿತ್ಯ, ಎರಡೂ ನಮ್ಮ ಅಮೋಘ ಪರಂಪರೆ; ಅವೆರಡರ ನಿರ್ಮಾತೃಗಳು ಅಥವಾ ಕರ್ತೃಗಳು ಒಂದೇ ಸಮುದಾಯದವರೋ ಅಥವಾ ಬೇರೆ ಬೇರೆ ಸಮುದಾಯಗಳವರೋ? ಸಿಂಧು ನಾಗರಿಕತೆಗಿಂತಲೂ ಪ್ರಾಚೀನವಾದ್ದು ವೈದಿಕ ಸಾಹಿತ್ಯ ಎನ್ನುವ ಒಂದು ಬಣವಿದೆ. ಅದು ಅಬದ್ಧ, ಆದರೆ ಅದನ್ನವರು ಸಾಧಿಸಿ ತೋರಿಸಲು ವಿಜ್ಞಾನ ಮತ್ತು ಡಿಎನ್‌ಎ ವಿಶ್ಲೇಷಣೆಯನ್ನು ಬಳಸಹೊರಟಿದ್ದಾರೆ. ಅದಕ್ಕಾಗಿ ಸರ್ಕಾರವು "ಪರಿಣತರ" ಸಮಿತಿಯೊಂದನ್ನು ಸಹ ರಚಿಸಿದೆ. ಸಮಿತಿಗೆ ಮುನ್ನವೇ ಕೆಲವರು ಪ್ರಯೋಗಗಳನ್ನು ಮಾಡಿಬಿಟ್ಟಿದ್ದಾರೆ ಮತ್ತು ಫಲಿತಾಂಶವನ್ನು ಪ್ರಕಟಿಸಿಯೂ ಇದ್ದಾರೆ. ನಮ್ಮ ದೇಶವೆಲ್ಲಾ "ಆರ್ಯಮಯ"ವೆಂಬ ಅಯೋಮಯ ಸಿದ್ಧಾಂತವನ್ನು ಮಂಡಿಸಲು ಅವರು ಡಿಎನ್‌ಎ ವಿಶ್ಲೇಷಣೆ ಮಾಡಿದ್ದಾರಂತೆ. ಅದರ ಪ್ರಕಾರ ಉತ್ತರ ಮತ್ತು ದಕ್ಷಿಣ ಭಾರತದ ಜನರೆಲ್ಲರ ಡಿಎನ್‌ಎ ಒಂದೇ ಆಗಿದೆಯಂತೆ. ಅಂದರೆ, ದ್ರಾವಿಡರು ಮತ್ತು ಆರ್ಯರು ಭಿನ್ನರಲ್ಲ, ಆರ್ಯರು ಹೊರಗಿನಿಂದ ಬಂದವರಲ್ಲ, ಎಂದರ್ಥ. ಪ್ರಯೋಗದ ವಿವರಗಳು ಲಭ್ಯವಿಲ್ಲ, ಆದರೆ ತೀರ್ಮಾನವು ಪ್ರಕಟವಾಗಿದೆ. ಈ ಮಹಾನ್ "ಸಂಶೋಧಕ"ರಿಗೆ ಮುಜುಗರ ಉಂಟಾದ್ದು ವಿದೇಶಗಳ ವಿಜ್ಞಾನಿಗಳು ಕೆಲವರು ಅಂಥದೇ ಪ್ರಯೋಗ ಮತ್ತು ವಿಶ್ಲೇಷಣೆ ಮಾಡಿದ್ದರಿಂದ. ಅವರು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಡಿಎನ್‌ಎ ಪ್ರತ್ಯೇಕವಾಗಿದೆ, ಎಂದರು. ಯಾವುದನ್ನು ನಾವು ಸ್ವೀಕರಿಸಬೇಕು? ದಕ್ಷಿಣ ಭಾರತದ ಸಂಶೋಧಕರು ಯಾರಾದರೂ ಇಂಥದೇ ವಿಶ್ಲೇಷಣೆಯಲ್ಲಿ ತೊಡಗಿದರೆ ಬೇರಿನ್ನೇನು ತೀರ್ಮಾನ ಪ್ರಕಟವಾಗುವುದೋ ತಿಳಿಯದು. ಅಂದರೆ, ವಿವಿಧ ಸಮಕಾಲೀನ ರಾಜಕೀಯ ಆಶಯಗಳು ವಿಜ್ಞಾನವನ್ನು ತಮ್ಮ ತಮ್ಮ ಸಮರ್ಥನೆಗೆ ಬಳಸಿಕೊಳ್ಳುತ್ತಿವೆಯೆಂದರ್ಥ. ಪ್ರಯೋಗಗಳು ನೈಜ ವೈಜ್ಞಾನಿಕ ಮಾರ್ಗದಲ್ಲಿ ನಡೆದಿರುವುದೇ ಅನುಮಾನಾಸ್ಪದ.

(ಆ) ಇನ್ನೊಂದು ಉದಾಹರಣೆಯು ಊಹಾತ್ಮಕವಾದುದು. ಈವರೆಗೆ ಯಾರೂ ಇದರ ಬಗ್ಗೆ 'ಸಂಶೋಧನೆ' ನಡೆಸುವ ಪಾಪಕಾರ್ಯ ಮಾಡಿಲ್ಲ; ಆದರೆ ಮುಂದೆಂದೂ ಮಾಡುವುದಿಲ್ಲವೆಂದು ಹೇಳಲಾಗದು. ಜಡ್ಡುಗಟ್ಟಿದ ಮನಸ್ಸುಗಳು ನಮ್ಮ ನಡುವೆ ಇರುವಾಗ ಅಂತಹ ಸಂಶೋಧನೆ ನಡೆಯುವುದಿಲ್ಲವೆಂಬ ಭರವಸೆಯು ಅನುಚಿತ.

ಏನದು ಸಂಶೋಧನೆ? ಶ್ರೀ ಭಗವಾನನು ನಾಲ್ಕು ವರ್ಣಗಳನ್ನು ಅಥವಾ ಸಾಮಾಜಿಕ ಗುಂಪುಗಳನ್ನು ಸೃಷ್ಟಿಸಿದನೆಂದು ಗೀತೆ ಹೇಳುತ್ತದೆ. "ಗುಣ ಮತ್ತು ಕರ್ಮ" ಈ ವಿಭಜನೆಗೆ ಆಧಾರ. ಅವು ನಾಲ್ಕು ವರ್ಣಗಳಿಗೂ ಪ್ರತ್ಯೇಕ. ಗುಣವೆಂದರೆ ಸದ್ಗುಣ ಅಥವಾ ದುರ್ಗುಣವೆಂದಲ್ಲ. ಮತ್ತು ವೈಯಕ್ತಿಕವಲ್ಲ; ಇಡೀ ಬಣಕ್ಕೆ ಅವು ಅನ್ವಯವಾಗುತ್ತವೆ. ಸತ್ವ, ರಜಸ್ ಮತ್ತು ತಮಸ್ ಎಂಬುವು ಗುಣಗಳು. ಗೀತೆಯ ೧೮ನೆಯ ಅಧ್ಯಾಯವು ಇದನ್ನು ವಿವರವಾಗಿ ದಾಖಲಿಸಿದೆ. ಎಲ್ಲ ಗುಣಗಳೂ ಎಲ್ಲರಲ್ಲೂ ಉಂಟು, ಆದರೆ ಮೂರರಲ್ಲಿ ಒಂದು ಗುಣವು ಬೇರೆಬೇರೆ ವರ್ಣಗಳಲ್ಲಿ ಅತ್ಯಧಿಕವಾಗಿರುತ್ತದೆ; ಉಳಿದೆರಡು ಕಡಿಮೆ ಪ್ರಮಾಣದಲ್ಲಿರುತ್ತವೆ. ತಮೋಗುಣವು ಶೂದ್ರ ಮತ್ತು ವೈಶ್ಯರಲ್ಲಿ ಅತಿಹೆಚ್ಚು. ಮುಖ್ಯ ವಿಚಾರವೇನೆಂದರೆ ಈ ಗುಣ ಮತ್ತು ಕರ್ಮಗಳು "ಸ್ವಭಾವಜ" ಅಥವಾ ಹುಟ್ಟಿನಿಂದಲೇ ನಿರ್ಧಾರಿತವಾದವು. ಆದ್ದರಿಂದ ನಾಲ್ಕು ವರ್ಣದವರಿಗೂ ಪ್ರತ್ಯೇಕವಾದ ಸ್ವ-ಧರ್ಮ ಇರುತ್ತದೆ, ಅದನ್ನು ಯಾರೂ ಮೀರಬಾರದು. ಇದು ಗೀತೆಯ ಮಾತು.

ಈ ಹಿನ್ನೆಲೆಯಲ್ಲಿ ಒಬ್ಬ ಸಂಶೋಧಕನು ವೈಜ್ಞಾನಿಕವಾಗಿ ಪ್ರತ್ಯೇಕತೆಯನ್ನು ಸಾಧಿಸಿ ತೋರಿಸಲು ಡಿಎನ್‌ಎ ಪರೀಕ್ಷೆ ಮಾಡುತ್ತಾನೆನ್ನಿ. ವರ್ಣಸಂಕರ ಆಗಿರದಿದ್ದರೆ ಮಾತ್ರ ನಾಲ್ಕು ವರ್ಣಗಳಲ್ಲಿ ಪ್ರತ್ಯೇಕ ಡಿಎನ್‌ಎ ಇರಲು ಸಾಧ್ಯ. ಹಾಗೆ ಪ್ರತ್ಯೇಕವಾಗಿದ್ದರೆ ನಾಲ್ಕು ವರ್ಣಗಳ ಜನರ "ಸ್ವಭಾವಜ" ಗುಣಗಳು ಪ್ರತ್ಯೇಕವಾಗಿರುತ್ತವೆ. ಅಂದರೆ, ಶ್ರೇಣೀಕರಣವು ವೈಜ್ಞಾನಿಕ ಆಧಾರವನ್ನು ಹೊಂದಿದೆಯೆಂದರ್ಥ.

ಈ ನಾಲ್ಕು ವರ್ಣಗಳ ಡಿಎನ್‌ಎ ಪ್ರತ್ಯೇಕವೆಂದಾದರೆ ಗೀತೆಯ ಮಾತು ವೈಜ್ಞಾನಿಕ ಸತ್ಯ; ಇಲ್ಲವಾದರೆ ಆ ಮಾತು ವ್ಯರ್ಥ. ಗೀತೆಯ ಮಾತು ವೈಜ್ಞಾನಿಕ ಸತ್ಯವಾದರೆ ಮೊದಲ ಸಂಶೋಧನೆಯ ತೀರ್ಮಾನವು ಅಸತ್ಯವೆಂದಾಗುತ್ತದೆ, ಏಕೆಂದರೆ ಭಾರತದ ಎಲ್ಲರ ಡಿಎನ್‌ಎ ಒಂದೇ ಎಂದು ಅದು ಪ್ರತಿಪಾದಿಸಿದೆ. ವಿಜ್ಞಾನವನ್ನು ಸಾಮಾಜಿಕ ವ್ಯವಸ್ಥೆಯ ಸಮರ್ಥನೆಗೆ ಬಳಸುವುದು ಅವೈಜ್ಞಾನಿಕವೆಂದಾಯಿತು.

ಜನತಾ ವಿಜ್ಞಾನ ಚಳುವಳಿಯು ನಾವೆಲ್ಲಾ ಒಂದೇ ಎಂಬುದನ್ನು ನಮಗೆ ಮತ್ತು ಪ್ರಪಂಚಕ್ಕೆ ತಿಳಿಸಿಕೊಡಬೇಕಾಗಿದೆ. ನಮಗೆಲ್ಲಾ ಆ ಅರ್ಥದಲ್ಲಿ ಒಂದೇ ಮಾದರಿಯ ಜೀನ್ಸ್ ಇವೆ. ಆದ್ದರಿಂದ ಪರಮಾತ್ಮನೇ ಮಾಡಿದನೆನ್ನಲಾದ ವರ್ಣ ವಿಭಜನೆಯು ಅವೈಜ್ಞಾನಿಕವಾದ್ದು. ನಮ್ಮ ಜೀನ್‌ಗಳಲ್ಲಿ ಪರಸ್ಪರ ಆತ್ಮೀಯತೆ ಇದೆ, ಒಳಗೊಳ್ಳುವಿಕೆ ಇದೆ ಮತ್ತು ವೈಚಾರಿಕತೆ ಇದೆ. ಇವೇ ನಮ್ಮ ಜೀನ್‌ಗಳು ಸಮಾಜದಲ್ಲಿ ಒಂದು ಶೋಭಾಯಮಾನವಾದ ಸತ್ಯವನ್ನು ಸೃಜಿಸುತ್ತವೆ : ಆ ಸತ್ಯವೆಂದರೆ ಸೌಹಾರ್ದತೆ, ಸಮಾನತೆ ಮತ್ತು ಒಳಗೊಳ್ಳುವಿಕೆ. ನಮ್ಮ ವ್ಯಕ್ತಿತ್ವದ ಈ ಘನತೆಯನ್ನು ಹುಸಿ-ವಿಜ್ಞಾನವು ನಾಶಮಾಡಕೂಡದು. ಜನತೆಯ ವೈಜ್ಞಾನಿಕ ದೃಷ್ಟಿಯು ಈ ಫಲವನ್ನು ನೀಡುತ್ತದೆ. ಜನತಾ ವೈಜ್ಞಾನಿಕ ಚಳುವಳಿಯ ಉದ್ದೇಶವೇ ಅದು.

**ಡಾ॥ ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ,
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಎಕ್ಕಾ ಗಾಡಿ

ಒಂದಾನೊಂದು ಕಾಲದಲ್ಲಿ 'ಗಲದುಗ' ಎಂದೇ ಹೆಸರಾಗಿದ್ದ ಗದುಗಿನ ಆ ಪ್ಯಾಟಿಯಲ್ಲಿ ಮೆನುಸಿನಕಾಯಿ ಮಿರ್ಚಿಯಷ್ಟೇ ಚಿರಪರಿಚಿತ ಹೆಸರೆಂದರೆ ಅದು 'ಎಕ್ಕಾ ಗಾಡಿ'ಯ ಗಂಗಮ್ಮಳದು. ಸಾಮಾನು ಸಟ್ರನ್ನು ಗಾಡಿಯಲ್ಲಿ ಜತುನದಿಂದ ಇರಿಸಿ, ಇಳಿಸುವ ಕಾಯಕವನ್ನು ಅವುಳು ಅದೇಟೊ ವರುಷಗಳಿಂದ ಮಾಡುತ್ತಿರುವುದಕ್ಕೋ; ಯಾತಕ್ಕೋ ಅಲ್ಲಿ ಈಗಲೂ ಸಾಮಾನು ಸಟ್ರು ಅಂದರೆ ಎಕ್ಕಾ ಗಾಡಿ; ಎಕ್ಕಾ ಗಾಡಿಯೆಂದರೆ ಗಂಗಮ್ಮ ಎಂಬುದು ಯಾರಿಗಾದರೂ ಗೊತ್ತಿರುವ ಸಂಗತಿಯೇ. ಆ ದೇಶದಿಂದ ಅಲ್ಲಿಗೆ ಬಂದಿದ್ದ ಅವುರು, ಬಂಡಿ ಹೊಡೆಯುವ ತನ್ನ ಫೋಟೊ ತಗಿದಿದ್ದನ್ನು, ಕಪ್ಪು ಬಿಳುಪಿನ ಅದನ್ನು ತನುಗ ಕೊಟ್ಟ ಹೋಗಿದ್ದನ್ನು ಗಂಗಮ್ಮಳು ಈಗಲೂ ನೆನೆಯುತ್ತಾಳೆ; ಅದನ್ನು ತೋರಿಸಿ ಮೂಗು ಮುರಿಯುತ್ತಾಳೆ ತುಸು.

ಎಕ್ಕಾ ಗಾಡಿ ಅನ್ನುತ್ತಲೇ ಕಣ್ತುಂಬಿ ಬರುವುದು ಅವುಳು ಬೆಳುಸಿದ ಕಟುಮಸ್ತಾದ ಎತ್ತು ಲಚುಮ. ಅದುರದು ಅಚ್ಚ ಬಿಳೀ ಬಣ್ಣ. ಸೀಮೆ ಎತ್ತಲ್ಲದಿದ್ದರೂ ಭಯಂಕರ ಭಯ ತರಿಸುವ ಕೋಡುಗಳು, ಚೂಪಿನಾಕಾರದ ಕಿವಿಗಳು, ಮೊಕ ಉದ್ದೋಕೆ, ಎತ್ತುರದ ಇಣಿ, ಇಳೇ ಬಿದ್ದ ಕೊರುಳು, ಪಾದುಕ್ಕೆ ತಾಕುವಷ್ಟು ಬಾಲ, ಹೀಗಿತ್ತು ಆ ಲಚುಮ. ಬರೋ ಅರೇ ಕಾಸಿನಲಿ ಬಂಡಿ ಮೇವು ಖರೀದಿಸಿ, ಮೂರೋತ್ತೂ, ಸಿವುಡು ಕೊರುದು ಹಾಕಿ, ಅದುರ ಹೊಟ್ಟೆ ನೆತ್ತಿ ನೋಡುವುದನ್ನು ಗಂಗಮ್ಮಳು ನಿತ್ಯದ ತನ್ನ ಪರುಮ ಕಾಯಕವೇ ಎಂದೇ ಭಾವಿಸಿದ್ದಳು.

✶ ✶ ✶

ಇಂತಪ್ಪ ಗಂಗಮ್ಮಳು ಅವತ್ತು ಎಂದಿನಂತೆ ಬೆಳಗ್ಗೆದ್ದು, ತಣ್ಣೀರಲಿ ಮೈ ತಕ್ಕೊಂಡು, ಮನೀ ದೇವ್ರು ಚೆಂಬಸುವುಗೆ ಕೈ ಮುಗೂದು, ಲಚುಮನ ಬಾಯಲ್ಲಿ ಬಾಳೆಯನ್ನಿಟ್ಟು, ಅದುಕೆ ನೀರು ಕುಡಿಸಿ, ಸೀದಾ ರೈಲ್ವೆ ಸ್ಟೇಶನ್‌ಗೆ ಬಂಡಿ ತಂದಿದ್ದಳು. ಒಂದಿಬ್ಬರ ಗಂಟುಮೂಟೆಗಳೊಂದಿಗೆ ಹಾತುಲಗೇರಿ ನಾಕಾ ಕಡೆಯ ಅವುರ ಮನಿ ಮುಂದಿಳಿಸಿ, ಇಪ್ಪತ್ತ ರೂಪಾಯಿ ನೋಟನ್ನ ನಡುದಲ್ಲಿ ಸಿಕ್ಕುಸಿಕೊಳ್ಳುತ್ತಲೇ, ಮಟಮಾರಿ ಬಿಸಿಲಿಗೆ ತೇಕುತ್ತಲೇ ಇದ್ದ ಲಚುಮನ ಮೊಕವ ಕಂಡು 'ಅಯ್ಯ ಶಿವುನ' ಎಂದು ಸುಕ್ಕನೆ ಸುರುಗಿದ್ದಳು ಗಂಗಮ್ಮ. ತಡಮಾಡದೇ ಸೀದಾ ಮನಿ ಕಡೆ ಬಂಡಿ ಹೊಡುದು ಅದುಕೆ ಸಿವುಡು ಮೇವಾಕಿ, ತಾನು ಗಟಗಟ ಚರೀಗಿ ನೀರು ಕುಡಿದಳು. ಆಟೊತ್ತಿಗೆ ಅವುಳ ತಲಿಯಲ್ಲಿ ಏನೋ ಹೊಳದು, ಟ್ರಂಕಿನಲ್ಲಿದ್ದ ರೊಕ್ಕಾ ತಗೊಂಡು ಪ್ಯಾಟಿಗೆ ಹೋಗಿ ನಾಕಾರು ಪುಟ್ಟಿ ಕಾಯಿಪಲ್ಲೆ ಖರೀದಿಸಿ, ಯಾಪಾರ ಮಾಡಿ ಬಂದಿದ್ದಳು. ಅವತ್ತು ನೂರಾರು ರೂಪಾಯಿ ಕೈ ಸೇರಲು ಮರುದಿನ, ಒಂದು ವಾರವಿಡೀ, ತಿಂಗಳಿಡೀ ಅದೇ ಯಾಪಾರ ಮಾಡುತ್ತ, ರೋಗಿಯಾಗಿದ್ದ ತನ್ನ ಗಂಡನನ್ನು, ಮಗ ಹನುಮನ್ನು, ಜೊತೆಗೆ ತನ್ನ ಜೀವುದ ಎತ್ತನ್ನು ಸಾಕಿದ್ದಳು.

ಅವತ್ತು, ಬೆಳ್ಳಂಬೆಳಗ್ಗೇನೆ ಬಾಡಿಗೆಯೊಂದು ಬರಲು 'ಬಿಸಲಿಲ್ಲ ಬಿಡು ಏನಾದೀತು' ಎಂದು ಅವುಳು ಅಲ್ಲಿಂದ ಎರಡು ಗಂಟು ಹೊತ್ತುಯ್ಯುವಾಗ ಲಚುಮನು ಅಲ್ಲಿ ದೊಪ್ಪನೆ ಬಿದ್ದು ಇಡೀ ಪ್ಯಾಟಿಯ ಜನರೇ ಸೇರಿದರು. ಆಗ, ಗಂಗಮ್ಮಳ ಜೀವ ಹಲಹಲ ಅಂದಿತು. 'ಬರಾ ಸ್ವಾಮಾರದೊಳುಗ, ಏಳುತ್ಲೇ ಯಾಡು ಸಿವುಡು ಮೇವು ಹಾಕ್ತಿನಪ್ಪೋ ನನ್ನ ಲಚುಮಗ ಮ್ಯಾಲೆ ಏಳುವಂಗ ಮಾಡು ಚೆಂಬಸುವಾ' ಎಂದು ಅವುಳು ನಿಂತುನಿಂತಲ್ಲೇ ಚೆಂಬಸಪ್ಪನ ಗುಡಿಯತ್ತ ಮೊಕವ ಮಾಡಿ ಕೈ ಮುಗುದಳು. ಆಕಡೆ, ಈಕಡೆ ಅಂತ ಜನುರು ಬರುವುದು ಹೆಚ್ಚಾಗಲು, 'ನಡೀ ಹೋಗಾನು' ಎಂದು ಅವುಳು ಲಚುಮನ ಬಾಲ ತಿರುವುತ್ತಲೇ ಅದು ದಡುಗ್ಗನೇ ಎದ್ದು ಹೊರಟಿತು. ತಡ ಮಾಡದೇ ಸೀದಾ ಮನೀಕಡೆ ಅದನ್ನು ಹೊಡೂದು, ಇದ್ದೊಂದು ಸಿವುಡು ಮೇವು ಹಾಕಿ ಮೈಮ್ಯಾಲೆ ಕೈಯಾಡಿಸುತ್ತಲೇ ಅದು ಅವುಳ ಕೈ ನೆಕ್ಕಿತು. 'ಶಿವಾಶಿವಾ ಚೆಂಬಸುವಾ' ಎಂದು ಗಂಗಮ್ಮಳು ಲಚುಮನ ಮುಂಗಾಲಿನ ಪಾದಕ್ಕೆರಗಿದಳು.




ಗವಿಸಿದ್ದ ಹೊಸಮನಿ

ಅದೇಸೋ ವರ್ಷಗಳಿಂದ ಕಬ್ಬಿಣ, ಸಿಮೀಟು, ಕಲ್ಲು, ಮಣ್ಣು, ಗಂಟು ಹೊತ್ತು ಹೊತ್ತು ಸೋತು ಹೋಗಿದ್ದ ಗಂಗಮ್ಮಳ ಮೈಯಲ್ಲಿ ಇತ್ತಿತ್ತಲಾಗಿ ಕಸುವು ಕಮ್ಮಿಯಾಗಿತ್ತು. ಲಚುಮಗೂ ಜಡ್ಡು ಹತ್ತಿ, ಬ್ಯಾರೆ ಎತ್ತು ಕೊಳ್ಳಲಾಗದೆ ಎಕ್ಕಾ ಗಾಡಿಯೂ ಅನಾಥ ವಾಗಿತ್ತು. ಏಸೋ ದಿನದಿಂದ ಕೈ ಹಿಡಿದಿದ್ದ ಕಾಯಿಪಲ್ಲೆ ಮಾರಾಟದಿಂದಷ್ಟೇ ಬರುತ್ತಿದ್ದ ಚಿಲ್ಲರೆ ಕಾಸಿನಿಂದಲೇ ಮಧ್ಯಾಹ್ನದ ಹೊತ್ತು ಬರೀ ರೊಟ್ಟಿ, ರಾತ್ರಿ ನುಚ್ಚಕ್ಕಿ ಅನ್ನ, ತಿಂದುಂಡು ಉಳಿದದ್ದು ಬೆಳುಗ್ಗೆ ವಗ್ಗರಣೆ ಅಂತ ಮಾಡಿ ಗಂಗಮ್ಮ ಅದ್ಯಾಗೋ ಏಸೋ ದಿನಗಳಿಂದ ಜೀವನದ ಬಂಡಿ ನಡೆಸುತ್ತಿದ್ದಳು. ಲಚುಮನು ಎದೆಸೆಟಸಿ ಪಟಪಟ ಅಡ್ಡಾಡುವ ದಿನಗಳಿಡೀ ಚೆಂದಾಗಿದ್ದ, ಯಾರನ್ನೂ ಏನೊಂದೂ ಕೇಳದ, ಯಾವ ಕಚೇರಿಗೂ ಸುತ್ತದ ಗಂಗಮ್ಮಳಿಗೆ ಅವತ್ತಷ್ಟೇ ಬಿಳಿ ಅಂಗಿ ತೊಟ್ಟ ಆತನು ಎದುರಾದಾಗ ಅವುನ ಮುಂದೆ 'ಎಪ್ಪಾ ಹೊಸ ಎತ್ತು, ಬಂಡಿ ಮಾಡಿಸಿ ಎಕ್ಕಾ ಗಾಡಿ ನಡ್ಸು ಅಂದ್ರ ನನ್ನ ಮಗಾ ಹನುಮಂತ ಒಲ್ಲೆಂತಾನ.. ಪ್ಯಾಟ್ಯಾಗ, ಹಳ್ಯಾಗ ಈಗ ಮನಿಗೊಂದ ಟಂಟಂ, ರಿಕ್ಷಾ ಆಗ್ಯಾವು.. ಮಾಲು, ಗೀಲು ಎಲ್ಲಾವ್ನು ಈಗ ಅದ್ರೊಳಗ ಹಾಕ್ಕೊಂಡು ಹೊಕ್ಕಾರ.. ನಮ್ಮ ಬಂಡಿ ಏನ್ ಹತ್ತಾರ.. ಮುಂಜೇನೆದ್ದು ಜಳಕ ಮಾಡಿ ಚಾ ಕುಡದು ಬಾಡಿಗೆ ಕಾಕೋಂತ ನಿಂತ್ರು ಒಂದೂ ಬಾಡಿಗೆ ಬರೂದಿಲ್ಲ ಬಿಡು ಈಗ.. ಬಂದ್ರೂ ಅವ್ರ ಕೊಡಾ ಬಾಡಿಗೆ ಹಣದಿಂದ ಬಾಳೇವು ಆಗೂಲ್ಲ ಅಂತ ನನ್ನ ಮಗಾ ಎಕ್ಕಾ ಗಾಡಿ ಮುಟ್ಟುವಲ್ಲಾ.. ಮಗಾ, ಎತ್ತಿನ ಕಡೆಗೆ ನೋಡ್ಲಾರದ್ಕ ನನುಗ ಚಿಂತಿ ಆಗೈತಿ.. ಮುಂದೇನಂತಾ ತಿಳೀವಲ್ದೆಪ್ಪಾ.. ನನಗೂ ಬಾಳ ವಯಸ್ಸಾದ್ವು' ಎಂದು ಬಸಮ್ಮ ಅಳಲು ತೋಡಿ ಕೊಂಡಳು. ಆಗ ಅವನು, 'ನಿಂದೊಂದು ಎಕ್ಕಾ ಗಾಡಿ ಪೋಟೊ ಕೊಡು.. ಮನೀಗೀನಿ ಮಾಡಸ್ತೀನಿ' ಅಂತ ಹೇಳಿ ಗಂಗಮ್ಮಗೆ ಧೈರ್ಯ ತುಂಬಿ ಹೋಗಿದ್ದನು.

* * *

'ಮನೀ ಕಟ್ಟಿಸಿ ಕೊಡ್ತೀವಿ.. ನಿಮ್ಮ ಪೋಟೊ ಕೊಡ್ರಿ' ಎಂದು ಅವ್ರು ಮೊನ್ನೆಯಷ್ಟೇ ಡಂಗೂರು ಭಾರಿಸಿ ಹೇಳಿದ್ದನ್ನು ಕೇಳಿಸಿಕೊಂಡಿದ್ದು ನೆಪ್ಪಾಗಿ ಗಂಗಮ್ಮಳು ಅವತ್ತು ಬೆಳಗ್ಗೇಳುತ್ತಲೇ ಗದುಗಿನ ರಸ್ತೆಯ ಮುಳುಗುಂದ ನಾಕಾದ ಆ ಕಚೇರಿ ಮುಂದೆ ನಿಂತಿದ್ದಳು. ಆಟೊತ್ತಿಗೆ ಅಲ್ಲಿ ಕಳಸಾಪುರದ ಜೋಗುತಿ ಗೌರವ್ವ 'ಯಾಕಾ ಗಂಗಿ.. ಇಲ್ಲಿ ನಿಂತೀದಿ.' ಎಂದಾಗ ಇಪ್ಪತ್ತು ವರ್ಷದಿಂದ ನೋಡಿದ್ದ ಆ ಮೊಕುವ ಕಂಡು ಚಕಿತಳಾಗಿದ್ದಳು ಗಂಗಮ್ಮ. 'ಅಯ್ಯ ಕಳ್ಳದ ಗೌರೆಲ್ಲಾ.. ಇಷ್ಟ ದಿನ ಎಲ್ಲಿದ್ದಿ.. ಮೊನ್ನೆರ ನಿನ್ನ ಖೂನಾ ಹೇಳಾಕತ್ತಿತ್ತು ನಮ್ಮಕ್ಕಾ' ಎಂದು ಹತ್ತಿರುಕೆ ಬಂದು ಅವುಳ ಕೈಹಿಡಿದ ಮಾತಾಡಿಸಿದಳು.

ಆಟೊತ್ತಿಗೆ ಬಂದ ಅವುರ ಮುಂದೆ ಗಂಗಮ್ಮಳು, 'ಎಪ್ಪಾ ಮನೀ ಕೊಡ್ತೀವಿ ಪೋಟೊ ತರ್ರಿ ಅಂದಿದ್ರಲ್ಲಾ ತಂದೀನಿ ತಗೋರಿ' ಎಂದು ಆ ಹಳೆಯ ಪೋಟೊ ಮುಂದಿಟ್ಟಳು. ಅವುನು ಆ ಪೋಟೊ ನೋಡಿ, 'ಬೇ ಹುಚ್ಚುಗಿಚ್ಚ ಹಿಡದೈತಿ ಅನು ನಿನುಗ.. ನಿಮ್ಮ ಜಾಗುದ್ದು, ಮತ್ತ ಹಳೀ ಮನಿ ಪೋಟೊ ಕೊಡು ಅಂದ್ರ ಯಾವ ಕಾಲುದ್ದೋ ಎಕ್ಕಾ ಗಾಡಿ ಪೋಟೊ ತಂದಿಯಲ್ಲ ಬೇ. ಅದ್ನ ತುಗೊಂಡು ಏನ ಮಾಡ್ಬೇಕು ನಾವು ಹಿಂದ್ಕ ಸರಿ' ಎಂದು ಬೆಂಕಿ ಕಾರಿದನು. ಸಲುಪು ತಡೆದು ಅವುನು 'ಯಾವೂರು ನಿಂದು' ಎನ್ನಲು, 'ಎಪ್ಪಾ ನಮ್ದು ಇಲ್ಲೇ ಹರ್ತಿ ರಿ. ಊರಾಗೀಟು ಹೊಲ ಇದ್ರೂ ಇದ್ದು ಇಲ್ದಂಗ ಐತ್ರಿ.. ಅದ್ರಾಗೆಲ್ಲೆ ಜೀವನಾಗತ್ತ, ಬರಗಾಲ್ದಾಗ ಎಲ್ಲಿ ಉಪಾಸ ಬೀಳುದಂತ ತಿಳೂದ ಆ ಹೊಲಾನಾ ವತ್ತಿ ಕೊಟ್ಟು ಗದಿಗ್ಗೇ ಬಂದು ಬಾಳ ವರ್ಷಾತು ರಿ.. ಪ್ಯಾಟಿಗೆ ಬಂದ ಮ್ಯಾಲೆ ಈಟ ಹೊಟ್ಟಿ ತುಂಬಾಕತೈತಿ. ನಾವಿಲ್ಲೇ ವಡ್ಡರಗೇರ್‍ಯಾಗ ಒಬ್ರು ಸೌಕಾರ ಜಗಾದಾಗ ಸಣ್ಣ ಮನಿ ಕಟಗೊಂಡು ಜೀವನಾ ಮಾಡ್ತೀವ್ರಿ. ಜಗೂದ ಮಾಲಕ್ರು ಹೇಳಿದ ದಿನ ನಾವು ಬಿಟ್ಟು ಹೋಗಬೇಕ್ರಿ.. ನಮಗೊಂದು ಮನೀ ಕೊಡ್ರಿ ಬದ್ಕಾಕ' ಎಂದು ಗಂಗಮ್ಮಳು, ಉಸಿರು ಬಿಡೂದೇ ತನ್ನ ಪಾಡನ್ನು ಹೇಳಿ ಅವುನ ಕಡೆಗೆ ಕೈ ಮುಗಿದಳು. 'ನಿನ್ನ ಮಗನ್ನ ಕೈಯಾಗ ರೇಷನ್ ಕಾರ್ಡ್ ಕೊಟ್ಟ ಕಳುಸೋಗು' ಎಂದು ಅವುರು ಹೇಳಲು, 'ನನ್ನ ಮಗಾ ಮಾತ ಕೇಳಾವಲ್ಲಪ್ಪಾ.. ಗಂಡನ ಕಳಸಬೇಕಂದ್ರ, ಅದ್ಕೂ ವಯಸ್ಸಾಗಿ ಕಸು ಇಲ್ಲದ್ಕ ಮನ್ಯಾಗ ಕುಂತಾನ. ನಾವಿರೂದ ಬ್ಯಾರೇದವರ ಜಗಾದಾಗ. ನಮ್ಮ ಹೆಸರೀಲೆ ಇಲ್ಲೇನೂ ಇಲ್ಲ. ಹಸುರು ಚೀಟಿ, ಮನಿ ನಂಬರ್ ಕೇಳಿದ್ರ ಎಲ್ಲಿಂದ ತಂದು ಕೊಡೂದ್ರಿ. ಮೂವತ್ತ ವರ್ಷದಿಂದ ಟಾಯರ ಗಾಲೀ ಎಕ್ಕಾ ಗಾಡಿ ನಡಸ್ತೀನಿ. ಎತ್ತಿಗೆ ಜಡ್ಡು ಬಂದು ಕೆಲ್ಸ ನಿಂತೈತಿ.. ನಾನು ಸುಳ್ಳ ಹೇಳೂಲ್ಲ.. ಈ ಪೋಟೊನರ ನೋಡ್ರಿ' ಎಂದು ಅವುಳು ಅನ್ನಲು, ಅಧಿಕಾರಿಯು ಅದನ್ನು ಕಿತ್ತೆಸೆದು 'ನಾಳೆ ಬಾ ಹೋಗು ನೋಡಾನು' ಎಂದು ಗದರಿದನು. ಉಗೂಳಿನಲ್ಲಿ ಬಿದ್ದದ್ದ ಅದನ್ನು ಉಡಿಯಲ್ಲಿ ಹಾಕ್ಕೊಂಡು ಕಣ್ಣೀರಾದಳು ಗಂಗಮ್ಮ. ಆಗ ಜೋಗುತಿ ಗೌರವ್ವಳು, 'ಯಾಕ ಹೆದರ್ತಿ ನಡೀ ಗಂಗೀ.. ಒಂದ್ನಾಕು ಅಂಗಡಿ, ಮನಿ ಜೋಗ್ಯಾಡಿಗೊಂಡು ರೊಕ್ಕಾ ಕಾಳು ಮಾಡಿಕೊಟ್ಟ ಹೊಕ್ಕಾಳು ನಿಮ್ಮಕ್ಕ.. ಆಕೀಗೆ ಕರಸ್ತೀನಿ' ಎಂದು ಸನ್ನಾತು ಮಾಡಿ ಕಳಿಸಿದ್ದಳು ಗಂಗಮ್ಮಗೆ.

* * *

ಗೌರಿಯ ಆ ಯಾಡು ಮಾತಿನಿಂದ ಗಂಗಮ್ಮಗೆ ತುಸು ಜೀವಕಳೆ ಬಂದಿತ್ತು ಆ ಹೊತ್ತು. ಆಟೊತ್ತಿಗೆ ಲಚುಮನು ನೆಪ್ಪಾಗಿ, ತಡಮಾಡದೆ ಅಲ್ಲಿ ಅದನ್ನು ಖರೀದಿಸೋ ಹೊತ್ತಿಗೆ ಯಾಕೋ ಅವುಳ ಹೊಟ್ಟೆಯಲಿ ಇರುವೆ ಕಡಿದಂತ ನೋವಾಗಿ 'ಯಾಕ ಚೆಂಬಸುವಾ.. ಮೂಕ ದ್ಯಾವ್ರೆ ಶಿವಾಶಿವಾ' ಎಂದು ಭಯಗೊಂಡಳು. ಅಡುಕೆ ಚೀಲದಲ್ಲಿದ್ದ ಒಂದ್ಯಾಡು ನೋಟುಗಳನ್ನು ಹೊರ ತಗೂದು ಯಾಡು ಸಿವುಡು ಮೇವು, ಗೋದಿ ಹಿಟ್ಟು, ನೌಟಾಕು ಬೆಲ್ಲ ತಕ್ಕೊಂಡು, 'ಲಚುಮಗೆ ಹುಗ್ಗಿ ಉಣುಸಿದಾರಾಯ್ತು' ಎಂದು ಅವುಸವುಸರದಿಂದ ಮನೆಯತ್ತ ಹೊರಟದ್ದಳು ಗಂಗಮ್ಮ.

## ಅಭಿನಂದನೆ...

ಪ್ರಸಕ್ತ ಸಾಲಿನ ರಾಜ್ಯಮಟ್ಟದ ಪ್ರತಿಷ್ಠಿತ 'ಬಿ. ಎಚ್. ಶ್ರೀಧರ ಸಾಹಿತ್ಯ' ಪ್ರಶಸ್ತಿಯು ಹಿರಿಯ ಸಾಹಿತಿ, ಅಂಕಣಕಾರ ಹಾಗೂ ವಿಮರ್ಶಕ ಶ್ರೀ ಎಸ್. ಆರ್. ವಿಜಯಶಂಕರ್ ಅವರಿಗೆ ಲಭಿಸಿದೆ. ವಿಮರ್ಶಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಆಗಲೇ ಚಂಜಿಯಾಗತೊಡುಗಿತ್ತು. ಇನ್ನೇನು ತನ್ನ ಜೋಪುಡಿ ಮನೀ ಹತ್ತಿರ ಬರುತ್ತಲೇ ಅಲ್ಲಿ ಲಚುಮ ಕಾಣದೇ ಬರೀ ಕೊಳುಗಣ್ಣಿ ಕಂಡು ಗಂಗಮ್ಮ ಬಳುಬಳು ಬೆವುರೊಡೆದಳು. 'ಎಲೋ ಹನುಮಾ ಬಾರಲೋ ಹೊರೂಗ.. ಎತ್ತು ಕಾಣಾವಲ್ದಲ್ಲೊ...' ಎಂದು ಕಿರುಚುತ್ತ ತಳಮಳಿಸಿದಳು. ತಡಮಾಡುದೇ ಸುತ್ಯಾಡ್ಮೂರು ಕಡೆ ತಿರುಗಿ ಬಂದಳು. 'ಎತ್ಲಾಗೋತೊ ಎತ್ತು ಅದುನಾರ ಹೇಳೋ' ಎಂದು ಗಂಗಮ್ಮ ಮತ್ತೆ ಬೈದಾಡುತ್ತಲೇ, 'ಅದ್ಕ ದಿನಾನೂ ಏಟಂತ ಮೇವು ಹಾಕ್ತಿ ನೀನು.. ಎಲ್ಲಿಂದ ತರ್ತಿ ಅದ್ನ.. ಲಾಭ ಐತಿನ ಎತ್ನಿಂದ..' ಎಂದು ಮಗ ಹನುಮನು ಮುಖ ಕೆಳುಗ ಮಾಡುತ್ತಲೇ 'ಅಯ್ಯೋ ಚೆಂಬಸುವಾ.. ನನ್ನ ಲಚುಮ, ಹ್ಯಾಂಗೋದೋ ನೀನು ನನ್ಬಿಟ್ಟು.. ನಿನುಗು ಮೇವು ತಂದೀನಿ ಬಾರೋ.. ಇವತ್ತು ಹುಗ್ಗಿ ಮಾಡ್ತೀನಿ ಬಾರೋ' ಎಂದು ಆ ರಾತ್ರಿಯಿಡೀ ಗೋಗರೆದಳು ಗಂಗಮ್ಮ.

ಲಚುಮಾ ಹೋದ ಚಣುದಿಂದ ಹಾಸಿಗೆ ಹಿಡುದಿದ್ದ ಗಂಗಮ್ಮಳು ಆಗಾಗ ಸಬ್ ಸವುರಾತ್ರಿಯಲ್ಲಿ ದಿಗ್ಗನೆದ್ದು 'ನನ್ನ ಲಚುಮ.. ಚೆಂಬಸುವಾ.. ಬಾರೋ ಲಚುಮ' ಎಂದು ಬಡಬಡಿಸುತ್ತಲೇ ಇದ್ದಳು. 'ಬೇ ಹಂಗ್ಯಾಕ ಮಾಡ್ತಿ, ತುಗೋ ಈ ರೊಕ್ಕಾ.. ಬ್ಯಾರೇ ಏನರ ತುಗೋ. ಎತ್ತಗಿತ್ತ ಅನುಬ್ಯಾಡ ನೋಡು' ಎಂದು ಹನುಮನು ಅನ್ನಲು. ಆ ಹೊತ್ತು, ಗಂಗಮ್ಮನ ಗಂಟಲು ಕಟ್ಟಿಹೋಗಿತ್ತು. ಯಾಡು ಮೂರು ದಿನದಿಂದ ಅಲ್ಲಿಂದ, ಆ ಮೂಲೆಯಿಂದ 'ಗಂಗೀ.. ಗಂಗೀ' ಎಂದು ಕೇಳಿ ಬರುತ್ತಲೇ ಇದ್ದ ಕೀರಲು ಧ್ವನಿಯೂ ಸಲುಪು ದಿನಗಳ ನಂತರ ನಿಂತು ಹೋಗಿತ್ತು. ಅವುಳು, ಅದೇಸೋ ವರುಷಗಳ ಕಾಲ ತನ್ನುಡಿಯಲಿ, ಜತುನದಿಂದ ಇರಿಸಿಕೊಂಡು ಬಂದಿದ್ದ ಆ ಕಪ್ಪು ಬಿಳುಪಿನ ಪಟವು ಅಲ್ಲಿ ಅನಾಥವಾಗಿ ಬಿದ್ದಿತ್ತು!

**ಗವಿಸಿದ್ದ ಹೊಸಮನಿ**
ಜಿಲ್ಲಾ ವಾರ್ತಾಧಿಕಾರಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ರೈಲ್ವೆ ನಿಲ್ದಾಣದ ಹತ್ತಿರ, ಬೀದರ
ಬೀದರ ಜಿಲ್ಲೆ

# ಯೂರಿಪಿಡಿಸ್‌ನ ನಾಟಕದಲ್ಲಿನ ಹೆಲೆನ್ ಹಾಗೂ ಮಹಾಕಾವ್ಯದ ಸೀತೆ



ಹೆಲೆನ್



ತಾರಾಮಣಿ ಆರ್.

ಗ್ರೀಕರ ಸಾಂಸ್ಕೃತಿಕ ಕೊಡುಗೆಗಳಲ್ಲಿ ಅತ್ಯಂತ ಪ್ರಮುಖವಾದುದು ಗಂಭೀರ ನಾಟಕಗಳು. ಗ್ರೀಕರ ಜೀವನಕ್ಕೂ ನಾಟಕಕ್ಕೂ ನಿಕಟ ಸಂಬಂಧವಿದೆ. ಇತರ ಜನಾಂಗಗಳಲ್ಲಿರುವಂತೆ ನಾಟಕದ ಅಭಿನಯವು ಗ್ರೀಕರಿಗೆ ದೈನಂದಿನ ಮನೋರಂಜನೆ ಕಾರ್ಯ ಮಾತ್ರವಾಗಿರದೆ ಪವಿತ್ರವಾದ ಧರ್ಮಕಾರ್ಯವೂ ಆಗಿತ್ತು. ಡಯೋನಿಸಸ್ ದೇವತೆಯ ಹಬ್ಬದಲ್ಲಿ ರುದ್ರನಾಟಕಗಳು, ಪ್ರಹಸನಗಳು, ವಿಡಂಬನೆಗಳು ಆಚರಿಸಲ್ಪಡುತ್ತಿದ್ದರೂ ರುದ್ರನಾಟಕಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಯಿತು. ರುದ್ರನಾಟಕದ ವಸ್ತುಗಳು ಪ್ರಾಚೀನ ವೀರರ ಜೀವನದ ದೃಶ್ಯಗಳನ್ನು ಪ್ರತಿನಿಧಿಸುತ್ತವೆ. ನಾಟಕದ ವಸ್ತುವನ್ನು ಪ್ರೇಕ್ಷಕರಿಗೆ ತಿಳಿದಿರುವ ಕತೆಗಳಿಂದ ನಾಟಕಕಾರ ಆಯ್ಕೆ ಮಾಡಿಕೊಳ್ಳುವುದರ ಮೂಲಕ ಅದನ್ನು ಸ್ವತಂತ್ರವಾಗಿ ಅನುಮೋದಿಸುತ್ತಿದ್ದನು. ವಸ್ತುವನ್ನು ಆಯ್ದುಕೊಳ್ಳುವಲ್ಲಿ ನಾಟಕಕಾರನಿಗೆ ಸಂಪೂರ್ಣ ಸ್ವಾತಂತ್ರ್ಯವಿತ್ತು. ಆದರೆ ನಾಟಕಕಾರ ತಾನು ನಾಟಕಗಳಲ್ಲಿ ಪ್ರತಿಬಿಂಬಿಸುವ ಯಾವುದೇ ಚಿತ್ರಣ, ಊಹಾತ್ಮಕ ಹಾಗೂ ನೈತಿಕ ದೃಷ್ಟಿಕೋನಗಳು, ಸಮಕಾಲೀನ ಜೀವನದ ಬಗೆಗಿನ ಟೀಕೆ ಇವೆಲ್ಲವೂ ಮುಖ್ಯ ಉದ್ದೇಶಗಳಿಗೆ ಬದ್ಧವಾಗಿರಬೇಕೆಂಬ ನಿಯಮಗಳಿಗೆ ಅನುಸಾರವಾಗಿ ನಾಟಕ ರಚನೆಗೊಳ್ಳುತ್ತಿದ್ದವು.

ಪ್ರಾಚೀನ ಗ್ರೀಸಿನ ನಾಟಕಕಾರರಲ್ಲಿ ಅತ್ಯಂತ ಪ್ರಮುಖನಾದ ನಾಟಕಕಾರ ಯೂರಿಪಿಡಿಸ್. ತನ್ನ ನಾಟಕಗಳಲ್ಲಿ ವಾಸ್ತವತೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟವನು. "ಅವನೊಬ್ಬ ವಿವೇಚನಾಶಾಲಿಯಾಗಿದ್ದುದರಿಂದಲೇ ಜೀವನದಲ್ಲಿರುವ ವಿವೇಚನಾಶೂನ್ಯ ಶಕ್ತಿಗಳ ಪರಿಜ್ಞಾನ ಅವನಲ್ಲಿ ತೀಕ್ಷ್ಣವಾಗಿತ್ತು" ಎಂದು ಹೆಚ್. ಸಿ. ಬಾಲ್ಡ್ರೈ ಅಭಿಪ್ರಾಯಪಡುತ್ತಾರೆ. ಯೂರಿಪಿಡಿಸನನ್ನು "ಆಧುನಿಕ ನಾಟಕಗಳ ಜನಕ" ಎಂದೂ ಕರೆಯಲಾಗುತ್ತದೆ. ವರ್ನರ್ ಜೇಗರ್ "ಪ್ರಥಮ ಮನೋವಿಜ್ಞಾನಿ" ಎಂದು ಕರೆದರೆ, ಬ್ರೂನೊ ಸ್ನೆಲ್ "ಮನುಷ್ಯನಲ್ಲಿರುವ ತರ್ಕಾತೀತ ಶಕ್ತಿಗಳನ್ನು ದಾಖಲಿಸಿದವರಲ್ಲಿ ಯೂರಿಪಿಡಿಸ್ ಮೊದಲಿಗ" ಎನ್ನುತ್ತಾನೆ.

ಯೂರಿಪಿಡಿಸನ ನಾಟಕಗಳು ದೈವದ ಪ್ರಾಬಲ್ಯವನ್ನು ನಿರಾಕರಿಸುತ್ತಾ ಮನುಷ್ಯನ ದುರಂತಕ್ಕೆ ಅವನಲ್ಲಿರುವ ದೌರ್ಬಲ್ಯಗಳೇ ಕಾರಣವೆಂದು ಬಿಂಬಿಸುತ್ತವೆ. ಯೂರಿಪಿಡಿಸ್ ಪೌರಾಣಿಕ ಭವ್ಯತೆಯನ್ನು ನಿರಾಕರಿಸಿದ. ಮನುಷ್ಯರು ತಮ್ಮ ನಿಜ ಜೀವನದಲ್ಲಿ ಹೇಗಿದ್ದಾರೋ ಹಾಗೆ ಅವರನ್ನು ಚಿತ್ರಿಸಿದ. ಸಾಫೋಕ್ಲಿಸ್ ಮನುಷ್ಯನನ್ನು ದೈವೀಕರಿಸಿದರೆ, ಯೂರಿಪಿಡಿಸ್ ದೇವತೆಗಳನ್ನು ಮಾನವೀಕರಿಸಿದ. ಅವನ ಮುಖ್ಯವಾದ ಆಸಕ್ತಿಯಿರುವುದು ಮಾನವರಲ್ಲಿ ಹಾಗೂ ಮಾನವೀಯತೆಯಲ್ಲಿ ಎಂಬುದನ್ನು ಅವನ ಪ್ರಮುಖ ನಾಟಕಗಳಾದ ಹಿಪ್ಪೋಲಿಟಸ್, ಮೀಡಿಯಾ, ಹೆಲೆನ್, ಎಲೆಕ್ಟ್ರಾ ಮುಂತಾದ ನಾಟಕಗಳು ಸಾದರಪಡಿಸುತ್ತದೆ. ಯೂರಿಪಿಡಿಸ್‌ನ ನಾಟಕಗಳ ವಸ್ತು ಪುರಾಣಗಳಾದರೂ ಅದನ್ನು ಅವನು ತನ್ನ ನಾಟಕಗಳಲ್ಲಿ ವಿನೂತನವಾಗಿ ತರುವ ಪ್ರಯತ್ನವನ್ನು ಮಾಡುತ್ತಾನೆ. ಪುರಾಣ ಪಾತ್ರಗಳು ಹೊಸದಾದ ರೂಪವನ್ನು ಹೊಂದುತ್ತವೆ. ಗಿಲ್ಬರ್ಟ್ ನಾರ್ವುಡ್ 'ಅವನ ಎಷ್ಟೋ ನಾಟಕಗಳು ದುರಂತ ನಾಟಕಗಳೇ ಅಲ್ಲ, ದುರಂತ ವೈನೋದಿಕಗಳು' ಎನ್ನುತ್ತಾನೆ.

ಯೂರಿಪಿಡಿಸ್‌ನಿಂದ ಕ್ರಿ. ಪೂ. ೪೧೨ರಲ್ಲಿ ಡಯೋನಿಸಸ್ ದೇವತೆಯ ಉತ್ಸವದ ಸಂದರ್ಭದಲ್ಲಿ ಪ್ರದರ್ಶಿಸಲು ರಚನೆಗೊಂಡ ನಾಟಕ ಹೆಲೆನ್. ಹೆಲೆನ್ ಯೂರಿಪಿಡಿಸ್‌ನ ನಾಟಕಗಳಲ್ಲಿ ಅತ್ಯಂತ ಪ್ರಸಿದ್ಧವಾದ ನಾಟಕವಲ್ಲ ಆದರೂ ವಿಶ್ಲೇಷಣೆ ಮತ್ತು ಅಧ್ಯಯನದ ದೃಷ್ಟಿಯಿಂದ ಇದು ಅತ್ಯಂತ ಕುತೂಹಲಕಾರಿಯಾದ ನಾಟಕವಾಗಿದೆ.

ಮೂಲ ಕತೆಯಂತೆ ಹೆಲೆನ್ ಗ್ರೀಕ್‌ನ ಸ್ಪಾರ್ಟಾ ನಗರದ ಟಿಂಡರಿಯಸ್, ಲಿಡಾ(ಲೆದಾ) ದಂಪತಿಗಳ ಮಗಳು ಹಾಗೂ ಮನಿಲೇಯಿಸ್‌ನ ಹೆಂಡತಿ. ಈಕೆ ಅದ್ವಿತೀಯವಾದ ಸೌಂದರ್ಯವನ್ನು ಹೊಂದಿದ್ದಳು. ದೇವತೆಗಳಾದ ಹೀರಾ, ಅಥೇನೀ ಹಾಗೂ ಅಪ್ರೋದಿತೆಗಳ ಜಗಳವನ್ನು ಪರಿಹರಿಸಿದ್ದಕ್ಕಾಗಿ ಪ್ಯಾರಿಸ್‌ಗೆ ಹೀರಾಳಿಂದ ವರವಾಗಿ ದೊರಕಿದವಳು ಹೆಲೆನ್. ಒಬ್ಬ ಜಾರಿಣಿಯಂತೆ, ಅಪಮಾನ ಹಾಗೂ ಆಘಾತದ ಸಂಕೇತವಾಗಿ ಗ್ರೀಕ್ ಪುರಾಣಗಳಲ್ಲಿ ಈಕೆಯನ್ನು ಚಿತ್ರಿಸಲಾಗಿದೆ. ಹೆಲೆನಳನ್ನು ಹಿಂತಿರುಗಿ ಕರೆದುಕೊಂಡು ಬರಲು ಗ್ರೀಕ್‌ನ ಲೆಕ್ಕವಿರದಷ್ಟು ವೀರಪುರುಷರೆಲ್ಲರೂ ಟ್ರಾಯ್ ನಗರದ ವಿರುದ್ಧ ಹೋರಾಡಲು ಹಾಗೂ ಸಾಯಲು ಸಿದ್ಧರಾಗಿ ಹೋದವರು ಗೆದ್ದು ಹಿಂತಿರುಗುವಾಗ ದಿಕ್ಕಾಪಾಲಾಗಿ ಹರಿದು ಹಂಚಿಹೋಗುವ ವೀರರನ್ನು ಕಾಣುತ್ತೇವೆ. ಆದರೆ ಈ ಮೂಲ ಕತೆಗೆ ಪರ್ಯಾಯವಾಗಿ ಹೆಲೆನ್ ಟ್ರಾಯ್‌ಗೆ ಹೋಗದೆ ಈಜಿಪ್ಟಿನಲ್ಲಿ ಉಳಿದಳೆನ್ನುವ ದಂತಕತೆಯನ್ನು ಆಧಾರವಾಗಿಟ್ಟುಕೊಂಡು ಕ್ರಿ. ಪೂ. ಸು. ೬೦೦ರಲ್ಲಿ ಬದುಕಿದ್ದ ಸ್ಟೆಸಿಕೋರಸ್, ಹೆರಾಡಾಟಸ್ ಮತ್ತು ಯೂರಿಪಿಡಿಸ್ ತಮ್ಮದೇ ಆದ ದೃಷ್ಟಿಕೋನಗಳ ಮೂಲಕ ಭಿನ್ನವಾಗಿ ಚಿತ್ರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಸ್ಟೆಸಿಕೋರಸ್ ಹೆಲೆನಳನ್ನು ಮೊದಲಿಗೆ

ಪತಿದ್ರೋಹಿಯನ್ನಾಗಿಯೇ ಚಿತ್ರಿಸಿದ್ದನಂತೆ. ಆದರೆ ಹೆಲೆನ್ ಕೇವಲ ಸಾಮಾನ್ಯ ಹೆಣ್ಣಾಗಿರದೆ ದೇವಿಯೂ ಆಗಿದ್ದರಿಂದ ಅವಳ ಕೋಪಕ್ಕೆ ಕುರುಡುತನವನ್ನು ಅನುಭವಿಸಿದ ಈತ ಹೆಲೆನ್ ನಿಜವಾಗಿ ಟ್ರಾಯ್ ನಗರಕ್ಕೆ ಹೋದವಳೇ ಅಲ್ಲ, ಹೋದದ್ದು ಅವಳ ಛಾಯೆ ಮಾತ್ರವೇ ಎಂಬ ಮತ್ತೊಂದು ಕತೆಯನ್ನು ರಚಿಸಿ ದೃಷ್ಟಿಯನ್ನು ಮರಳಿ ಪಡೆದನಂತೆ. ಯೂರಿಪಿಡಿಸ್ ಬಹುಶಃ ಈ ಕತೆಯನ್ನು ಆಧರಿಸಿ ಹೆಲೆನ್ ನಾಟಕವನ್ನು ರಚಿಸಿದ್ದಾನೆ. ಯೂರಿಪಿಡಿಸನ ಈ ನಾಟಕದಲ್ಲಿ ಹೆಲೆನ್ ನೈಜ, ನೇರವಾದ ಮಹಿಳೆ ಎಂಬುದಾಗಿ ಚಿತ್ರಿತಗೊಂಡಿರುವುದರಿಂದ ಅವಳಲ್ಲಿನ ವಿರೋಧಾತ್ಮಕವಾದ ಗುಣಗಳನ್ನು ತಳ್ಳಿಹಾಕುತ್ತದೆ. ಇದುವರೆಗೂ ಹೆಲೆನ್ ಅನೈತಿಕ ಸಂಬಂಧದಿಂದ ಎದುರಿಸುತ್ತಿದ್ದ ಅಪಮಾನದ ಬಗೆಗಿನ ಪ್ರಶ್ನೆಗಳನ್ನು ಇಲ್ಲವಾಗಿಸುತ್ತದೆ. ಈ ನಾಟಕದ ಮೂಲಕ ಯೂರಿಪಿಡಿಸ್ ಐದನೆಯ ಶತಮಾನದ ಅಂತ್ಯದ ಬೌದ್ಧಿಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳನ್ನು ಪ್ರತಿಬಿಂಬಿಸುತ್ತಾನೆ.

ಯೂರಿಪಿಡಿಸ್‌ನ ಹೆಲೆನ್ ನಾಟಕ ದುರಂತ ನಾಟಕವಲ್ಲ, ಸುಖಾಂತ ನಾಟಕ ವಾಗಿದೆ. ನಾಟಕವು ಹೆಲೆನಳ ಸ್ವಗತದಿಂದ ಪ್ರಾರಂಭಗೊಂಡು, ಆಕೆಯ ಜೀವನದಲ್ಲಿ ಸಂಭವಿಸಿದ ಘಟನೆಯ ಸಂಕ್ಷಿಪ್ತ ವಿವರವು ಆರಂಭದಲ್ಲಿಯೇ ದೊರಕುತ್ತದೆ. "ನಾಟಕ ಜರುಗುವುದು ಈಜಿಪ್ಟಿನ ಅರಮನೆಯ ಮುಂದೆ. ಸ್ಪಾರ್ಟಾದ ರಾಣಿಯಾದ ಹೆಲೆನ್ ಪ್ಯಾರಿಸಿನೊಂದಿಗೆ ಓಡಿಹೋಗಿ, ಟ್ರಾಯ್ ಯುದ್ಧಕ್ಕೆ ಇದೇ ಕಾರಣವಾಯಿತು ಎಂದು ಎಲ್ಲರೂ ಸ್ವೀಕರಿಸಿದ ಕತೆಯಷ್ಟೇ. ಈ ನಾಟಕದಲ್ಲಿ ಈ ಕತೆ ಬೇರೆ ರೂಪ ತಾಳಿದೆ. ನಿಜವಾದ ಹೆಲೆನ್ ಟ್ರಾಯ್‌ಗೆ ಹೋಗಲಿಲ್ಲ. ಹೋದದ್ದು ಅವಳಂತೆಯೇ ಕಾಣುತ್ತಿದ್ದ ಮೂರ್ತಿ. ಹೀಗೆ ಪ್ಯಾರಿಸಿಗೆ ಮೋಸವಾದದ್ದು ಸ್ಯೂಸನ ರಾಣಿ ಹೀರಾಳಿಂದ. ಸ್ಯೂಸನ ಅಪ್ಪಣೆಯಂತೆ ಹರ್ಮಿಸ್ ನಿಜವಾದ ಹೆಲೆನಳನ್ನು ಈಜಿಪ್ಟಿಗೆ ತಂದಿರಿಸಿದ. ಆಗ ಅರಸನಾಗಿದ್ದವನು ಪ್ರೋಟಿಯಾಸ್, ಸಜ್ಜನ. ಅವನು ಸತ್ತು ಅವನ ಮಗ ಥಿಯೋಕ್ಲೆಮಿನಸ್ ರಾಜನಾಗಿದ್ದಾನೆ, ತನ್ನನ್ನು ಮದುವೆಯಾಗೆಂದು ಹೆಲೆನಳನ್ನು ಪೀಡಿಸುತ್ತಿದ್ದಾನೆ. ಅದರಿಂದ ಅವಳು ಸತ್ತ ಅರಸನ ಸಮಾಧಿಯ ಬಳಿಯೇ ವಾಸ ಮಾಡುತ್ತಿದ್ದಾಳೆ. ನಾಟಕದ ಪ್ರಾರಂಭದಲ್ಲಿ ಹೆಲೆನ್ ತನ್ನ ಕಥೆಯನ್ನು ಹೇಳಿಕೊಳ್ಳುತ್ತಾಳೆ. ಅಲ್ಲಿಗೆ ಬಂದ ಗ್ರೀಕ್ ವೀರ ಟ್ಯೂಸರ್ ಎಂಬುವನಿಂದ ಟ್ರಾಯ್ ಯುದ್ಧ ಮುಗಿಯಿತೆಂದೂ, ಮೆನೆಲಾಸ್ ಮತ್ತು ಅವನ ಹೆಂಡತಿ ಗ್ರೀಸಿಗೆ ಹೊರಟರೆಂದೂ, ಇದಾಗಿ ಏಳು ವರ್ಷ ಕಳೆಯಿತೆಂದೂ, ಈಗ ಇದ್ದಕ್ಕಿದ್ದಂತೆ ಗಂಡ ಹೆಂಡತಿಯರು ಮಾಯವಾಗಿದ್ದಾರೆಂದೂ ಸುದ್ದಿ ಕೇಳುತ್ತಾಳೆ. ಹೆಲೆನ್ ತನ್ನ ಕಷ್ಟವನ್ನೆಲ್ಲ ಹೇಳಿಕೊಂಡು ದುಃಖಿಸುತ್ತಾಳೆ. ಅವಳೂ ಮೇಳದವರೂ ಅರಮನೆಯೊಳಕ್ಕೆ ಹೋದ ಮೇಲೆ ಚಿಂದಿಯುಟ್ಟ ಮೆನೆಲಾಸ್ ಬರುತ್ತಾನೆ. ಅವನು ಹೆಂಡತಿಯನ್ನು ಒಂದೆಡೆ ಬಚ್ಚಿಟ್ಟು ಬಂದಿದ್ದೇನೆ ಎನ್ನುತ್ತಾನೆ. ಹೆಲೆನ್ ಮೆನೆಲಾಸರ ಭೇಟಿಯಾಗುತ್ತದೆ. ಅವನು ಯಾರೆಂದು ತಿಳಿದಾಗ ಹೆಲೆನ್ ತಾನು ಅವನ ಹೆಂಡತಿ ಎನ್ನುತ್ತಾಳೆ. ಬಹಳ ಹೊತ್ತು ಅವನು ನಂಬುವುದಿಲ್ಲ. ಅಲ್ಲಿಗೆ ಬಂದ ಅವನ ಸೇವಕ ಅವನ ಹೆಂಡತಿ ಮಾಯವಾಗಿ ಬಿಟ್ಟಿದ್ದಾಳೆ ಎಂದು ಹೇಳಿದಾಗ, ಹೆಲೆನಳ ಕತೆಯನ್ನು ನಂಬುತ್ತಾನೆ. ಅವರು ತಪ್ಪಿಸಿ ಕೊಳ್ಳುವುದು ಹೇಗೆ ಎಂಬುದು ಪ್ರಶ್ನೆ. ಹೆಲೆನಳೇ ಹಂಚಿಕೆ ಯೋಚಿಸುತ್ತಾಳೆ. ಮೆನೆಲಾಸ್ ಸತ್ತನೆಂದು ಸುದ್ದಿ ಬಂದಿದೆ, ಈಗ ತಾನು ಥಿಯೋಕ್ಲೆಮಿಸನ್ನು ಮದುವೆಯಾಗಲು ಸಿದ್ಧ, ಆದರೆ ಸತ್ತವನ ಆತ್ಮದ ಶಾಂತಿಗಾಗಿ ಸಂಸ್ಕಾರ ಅಗತ್ಯ ಎಂದು ಅರಸನಿಗೆ ಹೇಳಿ ಒಂದು ದೋಣಿಯನ್ನು ಪಡೆಯುವುದು, ಮೆನೆಲಾಸ್ ಯಾರೆಂದು ಅವನಿಗೆ ತಿಳಿಸದೆ, ಅವನೇ ಸಾವಿನ ಸುದ್ದಿಯನ್ನು ತಂದ ದೂತ ಎಂದು ಹೇಳಿ, ಅಂತ್ಯ ಸಂಸ್ಕಾರ ಮಾಡಲೆಂದು ತಾವಿಬ್ಬರೂ ದೋಣಿಯಲ್ಲಿ ಕುಳಿತು ಹೊರಟು ತಪ್ಪಿಸಿಕೊಳ್ಳುವುದು. ಹಂಚಿಕೆ ಫಲಿಸುತ್ತದೆ, ನಿಜವನ್ನು ತಿಳಿದು ರಾಜ ಕೋಪದಿಂದ ಕುದಿಯುತ್ತಿದ್ದಾಗ, ಸ್ಯೂಸನ ಇಬ್ಬರು ಮಕ್ಕಳು ಕಾಣಿಸಿಕೊಂಡು ಅವನನ್ನು ಸಮಾಧಾನಗೊಳಿಸುತ್ತಾರೆ."

ಯೂರಿಪಿಡಿಸ್‌ನ ಹೆಲೆನ್ ನಾಟಕವು ದುರಂತ ಮರಣ ಅಥವಾ ದೂರಾಗುವಿಕೆ ಯೊಂದಿಗೆ ಕೊನೆಯಾಗದೆ ಪುನರ್ಮಿಲನ ಮತ್ತು ಸಂತೋಷದ ನಿರ್ಣಯದಿಂದ ಕೊನೆಗೊಳ್ಳುತ್ತದೆ. ಈ ಅಂಶಗಳಿಂದಾಗಿ ನಾಟಕವು ಆಸಕ್ತಿದಾಯಕ ಹಾಗೂ ಮೌಲ್ಯಯುತವಾದುದಾಗಿ ಕಂಡುಬರುತ್ತದೆ. ಯೂರಿಪಿಡಿಸ್‌ನ ಹೆಲೆನ್ ಪಾತ್ರವನ್ನು ಭಾರತೀಯ ಮಹಾಕಾವ್ಯದಲ್ಲಿನ ಸೀತೆಯ ವ್ಯಕ್ತಿತ್ವದಲ್ಲಿ ಹಲವಾರು ಸಾಮ್ಯತೆಗಳಿರು ವುದನ್ನು ಕಾಣಬಹುದು. ಈ ಇಬ್ಬರೂ ಪಾತ್ರಗಳಲ್ಲಿ ನಾವು ಕಾಣುವ ಸಮಾನಾಂಶ ಗಳೆಂದರೆ, ಮೊದಲನೆಯದಾಗಿ, ಸೀತೆ ಮತ್ತು ಹೆಲೆನ್ ಅದ್ಭುತ ಲಾವಣ್ಯವನ್ನು ಹೊಂದಿ ದವರು, ಅವರ ರೂಪವೇ ಅವರಿಗೆ ಕೇಡನ್ನುಂಟುಮಾಡಿದ ವಿಚಾರವೊಂದಾದರೆ ಎರಡನೆಯದಾಗಿ, ತಮ್ಮ ಪತಿಯ ಬರುವಿಕೆಗಾಗಿ ಕಾಯುವಿಕೆ ಇಬ್ಬರಲ್ಲೂ ಅಧಿಕವಾಗಿದೆ. ಅದಕ್ಕಾಗಿಯೇ ಜೀವಂತಿಕೆಯಿಂದ ಇಬ್ಬರೂ ಕಾಯುತ್ತಿರುವುದನ್ನು ಕಾಣಬಹುದು. ಸೀತೆ ಲಂಕಾನಗರಿಯ ವಿನಾಶಕ್ಕೆ ಕಾರಣಳಾದರೆ ಹೆಲೆನ್ ಟ್ರಾಯ್ ನಗರದ ವಿನಾಶಕ್ಕೆ ಕಾರಣಳಾಗುತ್ತಾಳೆ. ಸೀತೆಯ ರೂಪದಿಂದ ಆಕರ್ಷಿತನಾದ ರಾವಣ ಆಕೆಯನ್ನು ಲಂಕೆಗೆ ಎಳೆದೊಯ್ಯುತ್ತಾನೆ. ಲಂಕೆಯಲ್ಲಿದ್ದಾಗ ರಾವಣನ ವೈಭವವಾಗಲಿ, ಬೆದರಿಕೆಯಾಗಲಿ ಸೀತೆಯನ್ನು ಪತಿನಿಷ್ಠೆಯಿಂದ ಎಳ್ಳಷ್ಟೂ ವಿಚಲಿತಳನ್ನಾಗಿ ಮಾಡುವುದಿಲ್ಲ. ಪ್ರತಿಯಾಗಿ ಆತನ ಬಗೆಗೆ ರೋಷ ತಾತ್ಸಾರಗಳೇ ಹೆಚ್ಚಾಗುತ್ತಾ ಸಾಗುತ್ತವೆ. ಕ್ರೂರ ರಾಕ್ಷಸರ ಮಧ್ಯೆ ಅತಿ ಕ್ರೂರವಾದ ರಾಕ್ಷಸ ರಾಜನ ಮುಂದೆ ಹೆಣ್ಣೊಬ್ಬಳು ಏಕಾಂಗಿಯಾಗಿ, ಅಸಹಾಯಕಳಾಗಿ ಇದ್ದರೂ ಆಕೆ ತನ್ನ ಪತಿವ್ರತಾಧರ್ಮವನ್ನು ಎಂದಿಗೂ ಬಿಡದೆ ತನ್ನ ಪತಿ ತನ್ನನ್ನು ಬಿಡಿಸಿಕೊಂಡು ಹೋಗಲು ಬಂದೇ ಬರುವನೆಂಬ ಅದಮ್ಯ ಬಯಕೆಯಿಂದ ಕಾಯುತ್ತಿರುತ್ತಾಳೆ. ಯೂರಿಪಿಡಿಸ್‌ನ ಹೆಲೆನ್ ಅತ್ಯಂತ ಸುಂದರವಾದ ಹೆಣ್ಣು 'ಸೌಂದರ್ಯ ಬೇರೆ ಹೆಣ್ಣುಗಳಿಗೆ ಸುಖಮಯ ಜೀವನವನ್ನು ಕೊಟ್ಟಿದೆ, ಆದರೆ ನನ್ನನ್ನು ಹಾಳು ಮಾಡಿರುವುದು ಇದೇ ಸೌಂದರ್ಯ' ಎಂಬ ವೇದನೆ ಆಕೆಯ ಮಾತುಗಳಲ್ಲಿವೆ.

ದೇವತೆಗಳಾದ ಹೀರಾ, ಅಫ್ರೋದೆತೆಯರ ಪರಸ್ಪರ ವೈರಕ್ಕೆ ಬಲಿಯಾದ ಮುಗ್ಧೆ, ಪ್ಯಾರಿಸ್‌ನೊಡನೆ ಟ್ರಾಯ್‌ಗೆ ಹೋದದ್ದು ಅವಳ ನೆರಳಾದರೂ ಅಪಮಾನ ಅಪಕೀರ್ತಿಯನ್ನು ಪಡೆದವಳು ಹೆಲೆನ್. ನಾಟಕದ ಪ್ರಾರಂಭದಲ್ಲಿ ಅವಳೇ ಹೇಳುವಂತೆ "ನಾನು ನನ್ನ ಪತಿಗೆ ದ್ರೋಹ ಬಗೆದು, ಸಮಸ್ತ ಗ್ರೀಸ್‌ಗೆ ಕಾಳಗದ ಬೆಂಕಿ ಹೊತ್ತಿಸಿದ್ದೇನೆಂದು ಅವರು ಹೇಳುತ್ತಾರೆ. ಹಾಗಿದ್ದರೆ, ನಾನಿನ್ನು ಬದುಕಿರುವುದೇಕೆ? ಏಕೆಂದರೆ ನಾನು ಟ್ರಾಯ್‌ಗೆ ಎಂದೂ ಹೋಗಲಿಲ್ಲವೆಂಬುದು ನನಗೆ ಗೊತ್ತು. ಮತ್ತೆ ನಾನು ಸ್ಪಾರ್ಟಾದ ಹೆಸರುವಾಸಿ ಬಯಲಿನಲ್ಲಿ ನನ್ನ ಸ್ವಂತ ಪತಿಯೊಡನೆ ಬದುಕುತ್ತೇನೆ, ಮತ್ತಾರಿಗೂ ಹೆಂಡತಿಯಾಗುವುದಿಲ್ಲ ಎಂಬ ಮಾತನ್ನು ಹರ್ಮಿಸ್‌ನಿಂದ ಕೇಳಿದ್ದೇನೆ. ಪ್ರೋಟಿಯಸ್ ಹಗಲಿನ ಬೆಳಕು ಕಾಣುತ್ತಿದ್ದ ಅವಧಿಯುದ್ದಕ್ಕೂ ನಾನು ನನ್ನ ಮದುವೆಯನ್ನು ಮುಕ್ಕಾಗದಂತೆ ಉಳಿಸಿಕೊಂಡೆ. ಆದರೆ ಅವನೀಗ ರಸಾತಲದ ಕತ್ತಲೆಗೆ ತೆರಳಿರುವುದರಿಂದ, ಮೃತರಾಜನ ಮಗ ತನಗೆ ಹೆಂಡತಿಯಾಗುವಂತೆ ತನ್ನನ್ನು ಒತ್ತಾಯಿಸುತ್ತಿದ್ದಾನೆ. ಆದರೆ ನನ್ನ ಹಿಂದಿನ ಪತಿಗೆ ನಾನು ನಿಷ್ಠಳಾಗಿದ್ದೇನೆ. ಗ್ರೀಸ್‌ನಲ್ಲಿ ನನಗೆ ಕೆಟ್ಟ ಹೆಸರಿದ್ದರೂ, ಕಡೆಯ ತನಕ ನನ್ನನ್ನು ಪತಿವ್ರತೆಯಾಗಿಸಲೆಂದು, ಕಡೆಯ ಪಕ್ಷ ಇಲ್ಲಿ ನನ್ನ ಮೈ ಅಪಮಾನದಿಂದ ಕಳಂಕಿತವಾಗದಿರಲೆಂದು ಪ್ರೋಟಿಯಸ್ಸಿನ ಈ ಗೋರಿಗಿಲ್ಲಿ ಶರಣಾಗತೆಯಾಗಿ ಅಂಟಿಕೊಂಡಿದ್ದೇನೆ." ಈ ದೃಶ್ಯವು ಸೀತೆ ಅಶೋಕ ವನದಲ್ಲಿ ಕುಳಿತು ರಾಮನಿಗಾಗಿ ಪರಿತಪಿಸುವ ಸನ್ನಿವೇಶವನ್ನು ನೆನಪಿಗೆ ತರುತ್ತದೆ.

ಸೀತೆ ರಾವಣನಿಂದ ತನ್ನ ಪತಿವ್ರತಾ ಧರ್ಮವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದಂತೆ ಯೂರಿಪಿಡಿಸ್ ನಾಟಕದಲ್ಲಿನ ಹೆಲೆನ್ ತನ್ನನ್ನು ಈಜಿಪ್ಟಿನ ಅರಸ ಪ್ರೋಟಿಯಸ್ ಹಾಗೂ ಥಿಯೋಕ್ಲೆಮಿನಸ್‌ನಿಂದ ತನ್ನ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಲು ಹವಣಿಸುತ್ತಾಳೆ. ಥಿಯೋಕ್ಲೈಮಿನಸ್ ರಾವಣನಂತೆ ಪ್ರಲೋಭನೆ ಬೀರಿದರೂ ಅವನಿಗೆ ವಶಳಾಗದೆ, ಸೀತೆಯಂತೆ ಪತಿಗಾಗಿ ಕಾಯುತ್ತ ಹಂಬಲಿಸುವ ಹೆಲೆನ್‌ಳನ್ನು ಕಾಣುತ್ತೇವೆ. ಆದರೆ ಮೂಲ ಕತೆಗಳಲ್ಲಿ ಹೆಲೆನ್ ಕುಲಟೆಯಂತೆ ಚಿತ್ರಿತಗೊಂಡಿದ್ದಾಳೆ. ಯೂರಿಪಿಡಿಸ್‌ನು ಹೆಲೆನ್‌ಳನ್ನು ಪತಿವ್ರತಾಶಿರೋಮಣಿ ಯನ್ನಾಗಿಸಿದ್ದು ಅವನ ಪ್ರಕಾರ ಹೆಲೆನ್ ಹೆಣ್ಣು ಮಕ್ಕಳಲ್ಲಿ ಮತ್ತು ವಿವೇಕಿಗಳಲ್ಲಿ ಅತ್ಯುತ್ತಮವಾದವಳು. ಹಾಗಾಗಿ ಸೀತೆ, ದ್ರೌಪದಿ, ಯೂರಿಪಿಡಿಸ್‌ನ ಹೆಲೆನ್ನಳ ದುರವಸ್ಥೆಯನ್ನು ಕಂಡು ಮರುಗುವ ಮನಸ್ಸು ಕ್ಲೈಟಮೆಸ್ತ್ರ, ಫೀದ್ರಾ, ಮೀಡಿಯಾ ರಂತಹ ಹೆಣ್ಣುಗಳಿಗೆ ಅಷ್ಟು ಸುಲಭವಾಗಿ ಮಿಡಿಯದು.

ಯೂರಿಪಿಡಿಸ್‌ನ ನಾಟಕ ಪರಂಪರಾಗತ ನಂಬಿಕೆಗಳನ್ನು ಒಡೆಯುತ್ತದೆ ಆದ್ದರಿಂದ ಈ ನಾಟಕದ ಬಗೆಗೆ ವಿದ್ವಾಂಸರುಗಳು ಹಲವಾರು ಪ್ರಶ್ನೆಗಳನ್ನು ಎತ್ತಿರುವ ರಾದರೂ, ಹೆಲೆನ್ ಪಾತ್ರದ ಮೂಲಕ ದಾಂಪತ್ಯ ಜೀವನದಲ್ಲಿ ಸೀಳು ಕಾಣಿಸಿಕೊಳ್ಳು ತ್ತಿರುವ, ನಿಷ್ಠೆ ಸಡಿಲಾಗುತ್ತಿರುವ ಆಧುನಿಕ ಕಾಲಕ್ಕೆ ಅನ್ಯೋನ್ಯತೆ, ನಿಷ್ಠೆ, ಸಾಮರಸ್ಯಗಳ ಸಂದೇಶವನ್ನು ಯೂರಿಪಿಡಿಸ್ ನೀಡುತ್ತಿದ್ದಾನೆಯೇ, ಅದರಲ್ಲೂ ಕುಲಟೆಯೆಂದು ಲೋಕ ಜರೆಯುತ್ತಿರುವ ಹೆಲೆನ್‌ಳ ಪಾತ್ರದ ಮೂಲಕ, ಈ ಕಾರಣಗಳಿಗಾಗಿಯೇ ಹೆಲೆನ್ ನಾಟಕ ಭಿನ್ನವಾಗಿ ತೋರುತ್ತದೆ ಎಂಬುದನ್ನು ಗಮನಿಸಬಹುದು.

**ತಾರಾಮಣಿ ಆರ್.**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು-೩೬



## ಅಂಬೇಡ್ಕರ್

# ಸಂವಿಧಾನ ಮತ್ತು ಲಿಂಗರಾಜಕಾರಣ

ಡಾ॥ ವಿನಯಾ ಒಕ್ಕುಂದ

ಸ್ವತಂತ್ರ ಭಾರತ ತನ್ನನ್ನು ತಾನು ಅಭಿನಂದಿಸಿಕೊಳ್ಳಬಹುದಾದ ಅತ್ಯಂತ ಮಹತ್ವದ ಚಹರೆಯೆಂದರೆ ಅದು ಭಾರತದ ಸಂವಿಧಾನ. ಮೂಕ ಭಾರತ ತನ್ನೆಲ್ಲ ಅನುಭವ ದ್ರವ್ಯದಲ್ಲಿ ಅದ್ದಿ ತೆಗೆದ ತೂಕದ ಮಾತುಗಳು ಸಂವಿಧಾನದ ಪುಟಗಳಲ್ಲಿವೆ. ಆಧುನಿಕ ಭಾರತದ ಮಹಿಳೆಯನ್ನು ರೂಪಣಗೊಳಿಸುವ ಹಕ್ಕೊತ್ತಾಯಗಳು ಇಲ್ಲಿವೆ. ಇಂದಿನ ಮಹಿಳಾ ಪ್ರಜ್ಞೆ ದಣಿದು ಒರಗಿಕೊಂಡಾಗ, ಆಸರೆ ಕೊಟ್ಟು ಚೇತನ ತುಂಬುವ ಬೆನ್ನ ಹಿಂದಿನ ಆಧಾರದಂತಿದೆ. ಅಭಿಮಾನದ ವಿಷಯವೆಂದರೆ ಲಿಂಗರಾಜಕಾರಣದ ಬೀಜಗಳು ಸಂವಿಧಾನದ ನೇಯ್ಗೆಯ ಎಳೆಗಳಲ್ಲೇ ಇವೆ. ಲಿಂಗಸೂಕ್ಷ್ಮತೆಯಿಂದ ಬದುಕನ್ನು ಪರಾಮರ್ಶಿಸಬೇಕಾದದ್ದು ಒಂದು ಸಹಜಧರ್ಮ ಎಂಬ ನೈತಿಕತೆಯನ್ನು ಎಚ್ಚರಿಸುವ ವಿಧಾನವನ್ನೂ ಸಂವಿಧಾನ ಒಳಗೊಂಡಿದೆ.

ಸಂವಿಧಾನದ ಕುರಿತು ಆಡುವ ಮಾತುಗಳು ಅನಿವಾರ್ಯವಾಗಿ ತಲುಪುವುದು ಡಾ॥ ಬಾಬಾಸಾಹೇಬ ಅಂಬೇಡ್ಕರರ ಸೂಕ್ಷ್ಮಜ್ಞತೆಗೆ. 'ನಮ್ಮ ಸಂವಿಧಾನ ಏನು ಹೇಳುತ್ತಿದೆ ಎಂದರೆ...' ಎಂದು ಅದೆಷ್ಟೇ ಶಿಷ್ಟಾಚಾರದ ಸುಪರ್ದಿಯಲ್ಲಿ ಮಾತನಾಡುವಾಗಲೂ ಅದರ ಅಂತರಾರ್ಥ "ಅಂಬೇಡ್ಕರರು ಏನು ನಿಷ್ಕರ್ಷಿಸುತ್ತಾರೆಂದರೆ..." ಎಂದೇ ಆಗುತ್ತದೆ. ಅಂಬೇಡ್ಕರ್ ಮತ್ತು ಸಂವಿಧಾನ ಆಧುನಿಕ ಭಾರತದ ಅಭಿನ್ನ ರೂಪಕವಾಗುತ್ತದೆ. ಈ ವಿದ್ಯಮಾನವನ್ನು ಹೀಗೆ ನಿರ್ವಚಿಸುವುದು ತಪ್ಪಲ್ಲ ಎನ್ನಲು ಎರಡು ಚಾರಿತ್ರಿಕ ಸಂದರ್ಭಗಳನ್ನು ಗಮನಿಸಬಹುದು.

**(೧) ಸಂವಿಧಾನ ಕರಡು ಸಲ್ಲಿಕೆಯ ಚಾರಿತ್ರಿಕ ಚರ್ಚೆಯಲ್ಲಿ ಸಂಸತ್ತಿನಲ್ಲಿ ಅಂಬೇಡ್ಕರರ ಭಾಷಣ :** ಸಂವಿಧಾನದ ಕರಡು ಪ್ರತಿಯ ಸಿದ್ಧತೆಗೆ ಸುದೀರ್ಘ ಕಾಲಾವಕಾಶ ಮತ್ತು ಬಹುದೊಡ್ಡ ಮೊತ್ತದ ಸಾರ್ವಜನಿಕ ಹಣ ಪೋಲಾಗಿದೆ ಎಂಬ ಆರೋಪಕ್ಕೆ ಅಂಬೇಡ್ಕರ ನೀಡಿದ ಪ್ರತಿಕ್ರಿಯಾತ್ಮಕ ಉತ್ತರ ಇದಾಗಿತ್ತು – ಸಂವಿಧಾನ ರಚನಾ ಸಮಿತಿಯ ಸಭೆ ಮೊದಲು ಸೇರಿದ್ದು ೯.೧೨.೧೯೪೬ರಂದು. ಕರಡು ರಚನೆಯು ಸಂಪನ್ನಗೊಳ್ಳಲು ೨ ವರ್ಷ ೧೧ ತಿಂಗಳು ೧೭ ದಿನಗಳು ಬೇಕಾದವು. ೧೧ ಸಭೆಗಳು ಜರುಗಿದವು. ಅವುಗಳಿಗೆ ೧೬೫ ದಿನಗಳು ಬೇಕಾಯಿತು. ಕರಡು ಪ್ರತಿ ಪರಿಶೀಲನೆಗೆ ೧೧೪ ದಿನಗಳು ಬೇಕಾದವು. ಕರಡು ರಚನೆಗೆ ೧೪೧ ದಿನಗಳು ಹಿಡಿದವು. ಪ್ರಸ್ತುತ ಸಂವಿಧಾನದಲ್ಲಿ ೩೯೫ ವಿಧಿ, ೧೨ ಅನುಸೂಚಿತಗಳಿವೆ. ೨೪೭೩ ತಿದ್ದುಪಡಿಗಳಿವೆ. ವಿಳಂಬದ ಆಪಾದನೆಯನ್ನು ಮಾಡುವವರು ಕೆನಡಾ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ, ಅಮೇರಿಕಾ ದೇಶಗಳ ಉದಾಹರಣೆಯನ್ನು ನೀಡುತ್ತಾರೆ. ಭಾರತದ ಸಾಮಾಜಿಕ ಸೂಕ್ಷ್ಮತೆಯ ಬಿಕ್ಕಟ್ಟನ್ನು ಆ ದೇಶಗಳು ಎದುರಿಸುವುದಿಲ್ಲ. ಕರಡು ಚರ್ಚೆಯ ಸುದೀರ್ಘತೆ ಮತ್ತು ತಿದ್ದುಪಡಿಗಳ ಸಂಖ್ಯೆಯನ್ನು ಪರಿಶೀಲಿಸಿದರೆ ನನ್ನ ಅಭಿಪ್ರಾಯ ಸ್ಪಷ್ಟವಾಗುತ್ತದೆ – ಎಂದಿದ್ದರು. ಸಂಸತ್ತಿನ ಅಧ್ಯಕ್ಷರು ಅಭಿನಂದನಾ ಭಾಷಣದಲ್ಲಿ ಅಂಬೇಡ್ಕರರ ಶ್ರಮ ಮತ್ತು ಕ್ಷಮತೆಯನ್ನು ವಿಶೇಷವಾಗಿ ಉಲ್ಲೇಖಿಸುವುದನ್ನೂ ಗಮನಿಸಬೇಕಿದೆ.

**(೨) ತ್ರಿವೇಂಡ್ರಂನಲ್ಲಿ ಮಾಡಿದ ಭಾಷಣ :** ಸಂವಿಧಾನವು ಅನುಮೋದನೆಗೊಂಡ ೫ ವರ್ಷಗಳ ಬಳಿಕ ಅಂಬೇಡ್ಕರರು ತ್ರಿವೇಂಡ್ರಂನಲ್ಲಿ 'ಸಂವಿಧಾನದ ನೀತಿ ಪಾಲಿಸಿ' ಎಂಬ ವಿಷಯವಾಗಿ ಮಾತನಾಡುತ್ತಾರೆ. "ಸಂವಿಧಾನ ಸಿದ್ಧಪಡಿಸುವಲ್ಲಿ ನನ್ನ ಪಾತ್ರ ಮಹತ್ವದ್ದಾಗಿತ್ತು. ಈಗ ಕೆಲವರು ಹೇಳುತ್ತಿದ್ದಾರೆ. ಕಾರಕೂನರು ಸಿದ್ಧಪಡಿಸಿದರು. ಅಂಬೇಡ್ಕರ್ ಸಹಿ ಹಾಕಿದರು – ಎಂದು. ನನ್ನೊಡನಿದ್ದ ಸದಸ್ಯರು ಯಾರು ಎಲ್ಲಿ ಹೇಗೆ ನಾಪತ್ತೆಯಾಗುತ್ತಿದ್ದರೆಂಬ ಅಧ್ಯಾಯವನ್ನು ಎಂದಾದರೂ ಹೇಳುತ್ತೇನೆ. ಅವು ಗಮ್ಮತ್ತಿನ ಸಂಗತಿಗಳು. ಆತ್ಮಕಥೆ ಬರೆಯುವಾಗ ಅವುಗಳನ್ನು ಬರೆಯುತ್ತೇನೆ."

ಈ ಎರಡು ನಿದರ್ಶನಗಳು ಸಂವಿಧಾನ ಸಿದ್ಧತೆಯಲ್ಲಿ ಅಂಬೇಡ್ಕರ್, ತಮ್ಮ ಅಧ್ಯಯನ ಸಾಮರ್ಥ್ಯ, ಜ್ಞಾನ, ಸಾಮಾಜಿಕ ನ್ಯಾಯದ ಖಚಿತ ತಿಳಿವನ್ನು ಸತತವಾಗಿ ಎರೆದರೆಂಬುದರ ಪುರಾವೆಗಳಾಗಿವೆ. ಬೇರೆ

ಯಾರೆಲ್ಲರ ಯೋಗದಾನ ಇಲ್ಲಿ ಸಲ್ಲಿಕೆಯಾಗಿದ್ದರೂ ಬಾಬಾಸಾಹೇಬರಿಗೆ ಮಾತ್ರ ಇದು ಜೀವನ್ಮರಣದ ಸವಾಲಾಗಿತ್ತು. ಅದಕ್ಕೇ ಏನೋ ಸಂವಿಧಾನ ಮತ್ತು ಪ್ರಜಾತಂತ್ರ ವ್ಯವಸ್ಥೆಯ ಸಂರಕ್ಷಣೆಯ ವಿಷಯದಲ್ಲವರು ಬಹಳ ಸಲ ಭಾವೋದ್ವೇಗಕ್ಕೆ ಒಳಗಾಗುತ್ತಿದ್ದರು. ನಮ್ಮ ರಕ್ತದ ಕೊನೆಯ ಹನಿಯನ್ನು ತರ್ಪಣ ಕೊಟ್ಟಾದರೂ ಈ ಎರಡನ್ನೂ ರಕ್ಷಿಸಬೇಕು – ಎನ್ನುತ್ತಿದ್ದರು. ಜಡ ಅಮಾನವೀಯ ಸಂಪ್ರದಾಯಗಳ ರೋಗಕ್ಕೆ ಬಲಿಯಾಗಿ ವಿಲಿಗುಡುತ್ತಿರುವ ಭಾರತದ ಸ್ವಾಭಿಮಾನದ ರಕ್ಷಣೆ ಸಂವಿಧಾನದ ಪಾಲನೆಯಿಂದ ಮಾತ್ರ ಸಾಧ್ಯ ಎಂಬ ವಿಶ್ವಾಸ ಅವರದ್ದು. ಹೆಣ್ಣಿನ ಹಕ್ಕುಬಾಧ್ಯತೆಗಳ ಬಗ್ಗೆ ಅಂಬೇಡ್ಕರ್ ಅವರು ಹೊಂದಿದ್ದ ಖಚಿತ ಅಭಿಪ್ರಾಯದ ಕಾರಣಕ್ಕಾಗಿಯೇ ಸಂವಿಧಾನವು ಲಿಂಗರಾಜಕಾರಣವನ್ನು ನಿರ್ವಹಿಸಲು ಸಮರ್ಥವಾಯಿತು.

**ಪುಟಗೌರಿಯ ನವುಲು**

We the people of India... ಭಾರತದ ಜನಗಳಾದ ನಾವು ಭಾರತವನ್ನು ಒಂದು ಸಾರ್ವಭೌಮ ಸಮಾಜವಾದೀ ಸರ್ವಧರ್ಮ ಸಮಭಾವದ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ಮತ್ತು ಅದರ ಸಮಸ್ತ ನಾಗರಿಕರಿಗೆ – ಸಾಮಾಜಿಕ ಆರ್ಥಿಕ ರಾಜಕೀಯ ನ್ಯಾಯ; ವಿಚಾರ ಅಭಿವ್ಯಕ್ತಿ, ವಿಶ್ವಾಸ ಧರ್ಮಶ್ರದ್ಧೆ ಮತ್ತು ಉಪಾಸನಾ ಸ್ವಾತಂತ್ರ್ಯ, ಸ್ಥಾನಮಾನ ಹಾಗೂ ಅವಕಾಶ ಸಮಾನತೆ ದೊರೆಯುವಂತೆ ಮಾಡಲು ಮತ್ತು ವ್ಯಕ್ತಿಗೌರವವನ್ನು, ರಾಷ್ಟ್ರದ ಏಕತೆ ಹಾಗೂ ಅಖಂಡತೆಯನ್ನು ಸುನಿಶ್ಚಿತಗೊಳಿಸಿ ಅದರಲ್ಲಿ ಭ್ರಾತೃಭಾವನೆಯನ್ನು ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ – ನಮ್ಮ ಸಂವಿಧಾನ ಸಭೆಯಲ್ಲಿ ೧೯೪೯ ನವೆಂಬರ್ ೨೬ರ ಈ ದಿನ ಸಂವಿಧಾನವನ್ನು ಅಂಗೀಕರಿಸಿ ಅಧಿನಿಯಮಿಸಿ ಅರ್ಪಿಸಿಕೊಂಡಿದ್ದೇವೆ – ಎಂಬ ನಮ್ಮ ಸಂವಿಧಾನದ ಪ್ರಿಯಾಂಬಲ್ ದೇಶದ ಘನತೆಯ ಸ್ವಾಯತ್ತ ಸ್ವಾಭಿಮಾನದ ಸಂಕಥನವಾಗಿದೆ.

ಅಟ್ಲಾಂಟಿಕ್ ಸಾಗರದಲ್ಲಿರುವ ಒಂದು ವಿಶಿಷ್ಟ ಜಾತಿಯ ಮೀನು ನೀರಿನೊಳಗೇ ಹಾದಿಹಿಡಿದು ಮಿಂಚಿನಂತೆ ನೂರಾರು ಕಿ.ಮೀ. ದೂರ ಕ್ರಮಿಸಿಬಿಡುತ್ತದಂತೆ, ಚಲನೆಯ ಸದ್ದೂ ಇಲ್ಲದೆ ತಣ್ಣಗೆ. ನಮ್ಮ ಸಂವಿಧಾನದ ಪಥಕ್ರಮವೂ ಹೀಗೆಯೇ. ಮನುಧರ್ಮಶಾಸ್ತ್ರದಂತಹ ಅಮಾನವೀಯ ಸಂಹಿತೆಯಿಂದ ದಮನಿತರಾದವರನ್ನು ಕೈಹಿಡಿದು, ಸಾಂವಿಧಾನಿಕ ಗೌರವವನ್ನು ಒದಗಿಸಿದ್ದು ನೀರಿನಾಳದಲ್ಲಿ ಯುಗಾಂತರವನ್ನೇ ದಾಟಿಬಂದಂತಹ ಸಾಹಸಯಾತ್ರೆಯಾಗಿತ್ತು.

ಈ ಸಾಹಸದಲ್ಲಿ ಹೆಣ್ಣನ್ನೂ ಒಳಗೊಳ್ಳಲಾಗಿತ್ತೆಂಬುದು ಚೇತೋಹಾರಿ ವಿದ್ಯಮಾನವೇ ಸರಿ. We the People ಎಂಬ ಪದ ಸಂಘಟನೆಯಲ್ಲಿ ಹೆಣ್ಣಿನ ಇರುವಿಕೆಯಿರುವುದು ಎಂದರೆ, ಭಾರತೀಯ ಮಹಿಳೆ ಪುರೋಹಿತಶಾಹಿಯ ನಿರ್ವಚನದಿಂದ ಹೊರಬಂದು ಉಸಿರಾಡುವ ಪ್ರಕ್ರಿಯೆಯಾಗಿತ್ತು. ನೂರಾರು ವರ್ಷಗಳಿಂದ ರೂಪಿಸಿ ರೂಢಿಗತವಾಗಿಸಿದ್ದ ಮನುಧರ್ಮಶಾಸ್ತ್ರ; ಪುರುಷರಿಗಿಂತ ಸ್ತ್ರೀಯರಲ್ಲಿ ಎರಡು ಪಟ್ಟು ಹಸಿವು, ನಾಲ್ಕು ಪಟ್ಟು ಬುದ್ಧಿ, ಆರು ಪಟ್ಟು ಧೈರ್ಯ, ಎಂಟು ಪಟ್ಟು ಕಾಮ ಎಂಬ ಕಲ್ಪಿತಗಳನ್ನು ಹುಟ್ಟಿಸಿ ಸಾಮಾಜಿಕತೆಯನ್ನು ಭ್ರಮಾಧೀನಗೊಳಿಸುತ್ತಿದ್ದ ಚಾಣಕ್ಯನ ಅರ್ಥಶಾಸ್ತ್ರದಂತಹ ತುರುಚಿ ಬಳ್ಳಿಯನ್ನು ಕತ್ತರಿಸಿ ಹೆಣ್ಣನ್ನು ಮನುಷ್ಯ ಸಹಜತೆಯ ವಾಸ್ತವಕ್ಕೆ ತರುವುದು ಸಾಮಾನ್ಯ ಸಂಗತಿಯಾಗಿರಲಿಲ್ಲ. ನಮ್ಮ ಸಂವಿಧಾನ ಅಂತಹದೊಂದು ಅನುಭೂತಿಯನ್ನು ಒದಗಿಸಿತು. ಹೆಣ್ಣನ್ನು 'ಪ್ರಜೆ' ಎಂದು, 'ನಾಗರಿಕಳು' ಎಂದು ಸ್ವೀಕರಿಸುವುದೆಂದರೆ, ಅದು ತನ್ನಿಂದ ತಾನೇ ಹೆಣ್ತನದ ಹರಲಿಗಳಿಂದ ಪಾರುಗಾಣಿಸುವ ಸ್ಪಷ್ಟ ಲಿಂಗರಾಜಕಾರಣದ ನಡೆಯಾಗಿತ್ತು.




ಒಡಲಾಳ ಕೃತಿಯಲ್ಲಿ ಪುಟಗೌರಿ ನವುಲು ಬರೆಯುತ್ತಾಳೆ. ನವುಲು ಬರೆಯಲು ಪೂರಕವಾದ ಪರಿಕರಗಳಿಲ್ಲದ್ದನ್ನು, ಪರಿಸ್ಥಿತಿಯಿಲ್ಲದ್ದನ್ನು ದಿವ್ಯ ನಿರ್ಲಕ್ಷ್ಯದಿಂದ ಉಪೇಕ್ಷಿಸಿ. ನವುಲು ಬರೆವ ಬೆರಗನ್ನು ಶಿವು ಕಣ್ಣು ಬಾಯಿ ಬಿಟ್ಟುಕೊಂಡು ನೋಡುತ್ತಿದ್ದ. ಪುಟಗೌರಿ ನವುಲಿನ ಕಾಲನ್ನು ಮೊದಲು ಬರೆದಳು. ತಲೆಯಿಂದ ಚಿತ್ರ ಬರೆವ ಸಂಪ್ರದಾಯವನ್ನು ಉಲ್ಲಂಘಿಸುತ್ತೇನೆಂಬ ಜರ್ಬಿನಲ್ಲಿ. ಅದಕ್ಕೇ ಏನೋ ಚಿತ್ರ ಮುಗಿದಾದ ಮೇಲೆ ಶಿವೂಗೆ ನವುಲು ಕುಣೀತಿದ್ದಾಂಗೆ ಕಾಣುತ್ತದೆ. 'ಎಸ್ಟ ಚೆಂದಾಗದೆ' ಎಂದು ಉದ್ಗರಿಸುತ್ತಾನೆ. ಸಂವಿಧಾನದ ರಚನಾ ಕ್ರಮದಲ್ಲಿ ಹೀಗೆ ರೂಢಿಗತ ಅನುಕ್ರಮಣಿಕೆಯನ್ನು ಮೀರುವ ಚೆಲುವಿದೆ. ಅದರ ಒಂದು ನೂಲು ಹೆಣ್ಣಿನ ಸಮಾನತೆಯ ಅರಿವಿನದಾಗಿತ್ತು.

**ಸಂವಿಧಾನ ನಿರ್ವಚಿಸುವ ಲಿಂಗಸೂಕ್ಷ್ಮದ ಎಳೆಗಳು**

ಭಾರತದ ಸಂವಿಧಾನವು ಹೆಣ್ಣಿನ ಬದುಕಿನ ಹಕ್ಕನ್ನು ಪ್ರತಿಪಾದಿಸುವ ವಿಧಾನ ಒಂದು ಮುಖವಾದರೆ, ಅಂತಹ ನಿರ್ಧಾರಗಳ ಹಿಂದೆ ನಡೆದ ವಾದ–ವಿವಾದ, ಪೂರ್ವಾಗ್ರಹ ಮತ್ತು ವೈಚಾರಿಕತೆಯ ಸಂಘರ್ಷದ ಚರಿತ್ರೆಯದು ಒಳಮುಖ. ನಿದರ್ಶನಕ್ಕಾಗಿ, ಮತದಾನ ಹಕ್ಕಿನ ಚರ್ಚೆಯನ್ನು ಗಮನಿಸಬಹುದು. ಇಂಗ್ಲೆಂಡಿನಂಥ ದೇಶದಲ್ಲಿ ಮಹಿಳೆಯರು ಮತದಾನದ ಹಕ್ಕನ್ನು ಹೋರಾಡಿ ಪಡೆದರು. ಆದರೆ ಭಾರತದ ಹೆಣ್ಣುಗಳು ಇಂತಹದೊಂದು ಸವಾಲನ್ನು ಎದುರಿಸಬೇಕಾಗಲಿಲ್ಲ. ಮತದಾನದ ಹಕ್ಕನ್ನು ಸಂವಿಧಾನದೊಂದಿಗೇ ಪಡೆದರು ಎಂಬ ಅಂಶವು ಸರ್ವವಿದಿತವಾದುದು. ಆದರೆ ಸಂವಿಧಾನ ಸಿದ್ಧತೆಯ ಪೂರ್ವಭಾವಿ ದಿನಗಳಲ್ಲಿ ಅಂಬೇಡ್ಕರರು ಈ ಚರ್ಚೆಯನ್ನು ನಿರ್ವಹಿಸಿದ ರೀತಿ ಅತ್ಯಂತ ಗಮನಾರ್ಹವಾದದ್ದು.

೧) ಭಾರತೀಯ ಮಹಿಳೆಯರ ಮತದಾನ ಹಕ್ಕಿನ ಬ್ರಿಟಿಷ್ ಸಮಿತಿಯ ಪರವಾಗಿ ಲೇಡಿ ಲೇಟನ್, ಮಿಸೆಸ್ ಸ್ಟ್ರಾಸಿ ಮತ್ತು ಸರ್ ಫಿಲಿಪ್ ಹ್ಯಾರ್ಟೋಗ್ ಅವರು ಅಂಬೇಡ್ಕರರೊಂದಿಗೆ ನಡೆಸಿದ ಮಾತುಕತೆಯು ಚಾರಿತ್ರಿಕವಾದುದು. ಮತದಾನದ ಹಕ್ಕನ್ನು ಪ್ರಾತಿನಿಧಿಕವಾಗಿ ಮಹಿಳೆಯರಿಗೆ ನೀಡಬೇಕು ಎನ್ನುವುದು ಸಮಿತಿಯ ಒತ್ತಾಯವಾಗಿತ್ತು. ಪ್ರಾತಿನಿಧಿತ್ವವನ್ನು ನಿರ್ಧರಿಸಲು ಶಿಕ್ಷಣ ಮತ್ತು ಆಸ್ತಿಯನ್ನು ಮಾನದಂಡಗಳಾಗಿಸಿಕೊಳ್ಳಬೇಕು ಎನ್ನಲಾಯಿತು. ಈ ಪ್ರಾತಿನಿಧಿತ್ವದ ಪ್ರಶ್ನೆಯೇ ಅಮಾನವೀಯವಾದದ್ದು ಎಂಬ ಸ್ಪಷ್ಟತೆ ಅಂಬೇಡ್ಕರರದ್ದಾಗಿತ್ತು. ಶ್ರೀಮಂತ ವರ್ಗದ ಮಹಿಳೆಯರು ಮಾತ್ರ ಆದ್ಯತೆ ಪಡೆದುಕೊಳ್ಳುವುದು ಅವರಿಗೆ ಸಮ್ಮತವಿರಲಿಲ್ಲ. ಆದರದನ್ನು ಅಂಬೇಡ್ಕರ್ ಅತ್ಯಂತ ಜಾಣ್ಮೆಯಿಂದ ನಿರ್ವಹಿಸುತ್ತಾರೆ. ಆದ್ಯತೆಯನ್ನು ಗುರುತಿಸುವ ವಿಧಾನದ ಚರ್ಚೆಯನ್ನು ಮಾಡುತ್ತ, ಹಾಗಿದ್ದರೆ ಭಾರತದ ಒಂದು ವರ್ಗದ ಮಹಿಳೆಯರನ್ನು ಮಾತ್ರ ಒಳಗೊಳ್ಳಬೇಕೇ? ಎಂದು ಪ್ರಶ್ನಿಸುತ್ತಾರೆ.

ಸಾಮಾನ್ಯವಾಗಿ, ಮಹಿಳಾ ವಿಷಯವನ್ನು ಚರ್ಚೆ ಮಾಡುವಾಗ – ಸ್ವಾತಂತ್ರ್ಯ ಹೋರಾಟಕ್ಕೆ ಮಹಿಳೆಯರನ್ನು ಒಳಗೊಂಡ ಮಹಾತ್ಮ ಗಾಂಧೀಜಿಯನ್ನು ನೆನೆಯುತ್ತೇವೆ. ಸರಿಸುಮಾರು ಅದೇ ಅವಧಿಯಲ್ಲಿ – ಭಾರತೀಯ ಮಹಿಳೆಯರಿಗೆ ಸಾಂವಿಧಾನಿಕ ಅಧಿಕಾರವನ್ನು ದೊರಕಿಸಿಕೊಡಲೇಬೇಕು ಎಂಬ ಜನತಂತ್ರ ಹೋರಾಟದಲ್ಲಿ ಅಂಬೇಡ್ಕರ್ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು.

**ಮೂಲಭೂತ ಹಕ್ಕುಗಳ ಕುರಿತ ಚರ್ಚೆ**

ಮೂಲಭೂತ ಹಕ್ಕುಗಳನ್ನು ಸಂವಿಧಾನವು ಕೊಟ್ಟಿದ್ದು ವ್ಯಕ್ತಿ ಸಮಾನತೆಯ ನೆಲೆಯಲ್ಲಿ. ಯಾವುದೇ ವ್ಯಕ್ತಿಗೆ ಕಾನೂನಿನ ಮುಂದೆ ಸಮಾನತೆ ಅಥವಾ ಕಾನೂನುಗಳಿಂದ ಸಮಾನ ಸಂರಕ್ಷಣೆಯನ್ನು ಒದಗಿಸುವ ಹಿನ್ನೆಲೆಯಲ್ಲಿ ಮೂಲಭೂತ ಹಕ್ಕುಗಳ ಪ್ರಸ್ತಾಪವಿದೆ. ರಾಜ್ಯವು ನಾಗರಿಕರ ವಿರುದ್ಧ ಧರ್ಮ, ಮೂಲವಂಶ, ಜಾತಿ,

ಲಿಂಗ, ಜನ್ಮಸ್ಥಳ ಅಥವಾ ಯಾವುದೇ ಆಧಾರದ ಮೇಲೆ ತಾರತಮ್ಯ ಮಾಡತಕ್ಕದ್ದಲ್ಲ ಎಂಬ ನಿರ್ದೇಶನವಿದೆ. ಈ ಅನುಚ್ಛೇದಕ್ಕೆ ಸಂವಿಧಾನವು, ಹೆಂಗಸರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧಗಳನ್ನು ಮಾಡದಂತೆ ರಾಜ್ಯವನ್ನು ಪ್ರತಿಬಂಧಿಸತಕ್ಕದ್ದಲ್ಲ – ಎಂಬ ಸೂಚನೆಯನ್ನು ಸೇರಿಸುತ್ತದೆ. ಹಾಗೆಯೇ ಸ್ವಾತಂತ್ರ್ಯದ ಹಕ್ಕನ್ನು ವಿವರಿಸುವ ಅನುಚ್ಛೇದದಲ್ಲಿ – ಪ್ರತಿಯೊಬ್ಬ ಭಾರತೀಯ ಪ್ರಜೆಗೂ ವಾಕ್, ಅಭಿವ್ಯಕ್ತಿ, ಸಂಘಟನೆ, ಸಂಚಾರ, ವ್ಯಾಪಾರ, ವಾಸಗಳ ಸ್ವಾತಂತ್ರ್ಯವನ್ನು ನೀಡುತ್ತದೆ. ಈ ಅನುಚ್ಛೇದಕ್ಕೆ ಕೊಟ್ಟ ಸೂಚನೆಯಲ್ಲಿ – ಹೆಂಗಸರು, ಶಿಶು ಮತ್ತು ಬುಡಕಟ್ಟು ಜನರ ಹಿತಕ್ಕೆ ಇದರಿಂದ ಅಡ್ಡಿಯಾಗಬಾರದು ಎಂದಿದೆ. ಇಲ್ಲಿ ಗಮನಿಸಬೇಕಾದ ವಿಷಯವಿದೆ. ಭಾರತೀಯ ಸಮಾಜ ಪಿತೃತ್ವ ದಾಳಿಕೆಯಲ್ಲಿ ಹೂತು ಹೋಗಿರುವಂಥದು. ಯಾವುದೇ ಅಭಿಪ್ರಾಯವು ಸಾಮಾಜಿಕವಾಗಿ ಹೆಣ್ಣನ್ನು ಒಳಗೊಂಡು ಅರ್ಥ ವಾಗಲಾರದು. ಯಾವ ಹೆಣ್ಣುಮಕ್ಕಳಿಗೆ ತಮ್ಮ ಮನೆಯಲ್ಲಿಯೇ ಸಮಾನತೆಯ ಸ್ಪರ್ಶವಿರಲಿಲ್ಲವೋ, ಯಾವ ಹೆಣ್ಣುಮಕ್ಕಳಿಗೆ ಮಾತು ಅಪರಾಧವಾಗಿತ್ತೋ, ಸ್ವತಂತ್ರವಾಗಿ ಯೋಚಿಸುವ ಕಲ್ಪನೆಯೇ ಇರಲಿಲ್ಲವೋ ಅವರುಗಳನ್ನು ಸ್ವ ಅಸ್ಮಿತೆಯ ವ್ಯಕ್ತಿಗಳಾಗಿ ನಿರ್ವಚಿಸಿದ್ದೊಂದು ಕ್ರಾಂತಿಕಾರಕ ಮುನ್ನುಡಿಯೇ ಆಗಿತ್ತು. ಮೂಲಭೂತ ಹಕ್ಕುಗಳ ಅನುಚ್ಛೇದದಲ್ಲಿ ಮತ್ತು ಸ್ವಾತಂತ್ರ್ಯದ ಅನುಚ್ಛೇದದಲ್ಲಿ ಸೇರ್ಪಡೆ ಮಾಡಿರುವ ವಿಸ್ತರಣೆಗಳನ್ನು ಗಮನಿಸಿದರೆ, ಅವು ಮಹಿಳಾ ದೃಷ್ಟಿಯಿಂದ ಮರುಪರಿಶೀಲನೆಗೆ ಒಳಪಡಿಸಿದಂತೆ ಕಾಣುತ್ತವೆ. ಇಂತಹದೊಂದು ಸೂಕ್ಷ್ಮತೆಯೇ ಮುಂದಿನ ಮಹಿಳಾಪರ ಚಿಂತನೆಗೆ ಹಾದಿ ತೋರಿದಂತಾಯಿತು.

ರಾಜ್ಯನೀತಿ ನಿರ್ದೇಶಕ ತತ್ತ್ವಗಳ ಸಂದರ್ಭದಲ್ಲಿಯೂ ಈ ಲಿಂಗಸೂಕ್ಷ್ಮ ನಡೆ ಢಾಳಾಗಿ ಕಾಣುತ್ತದೆ. ಪ್ರಭುತ್ವದ ಹಿತಕ್ಕಾಗಿ ರಾಜ್ಯವನ್ನೂ ಜನತೆಯನ್ನೂ ಬಳಸಿಕೊಳ್ಳುವ ಕಾಲದಿಂದ, ಜನತೆಯ ಹಿತಕ್ಕಾಗಿ ರಾಜ್ಯ ಮತ್ತು ಪ್ರಭುತ್ವಗಳು ಕೆಲಸವನ್ನು ಮಾಡಬೇಕು ಎನ್ನುವ ನಿರ್ದೇಶಕ ತತ್ತ್ವಗಳ ಹಂತವಿದು. ಇಲ್ಲಿಯ ಪ್ರತಿಯೊಂದು ಮಾರ್ಗನಿರ್ದೇಶಕ ತತ್ತ್ವಗಳಿಗೂ ಮಹಿಳಾ ಸಂವೇದನೆಯ ವಿವರಣೆಯನ್ನು ಒದಗಿಸಿರುವುದು ಅಚ್ಚರಿಯ ಸಂಗತಿಯಾಗಿದೆ. ಉದಾಹರಣೆಗೆ, (೧) ನಾಗರಿಕರು, ಪುರುಷರೇ ಆಗಿರಲಿ... ಸ್ತ್ರೀಯರೇ ಆಗಿರಲಿ... ಆಸ್ತಿಯನ್ನು ಪಡೆವ ಅಧಿಕಾರ... ವಚನಕಾರರು ವೈದಿಕ ರಚನೆಗಳನ್ನು ನಿರಚನೆ ಮಾಡುವಾಗ ಕೊಡುವ ವಿವರಣೆಯ ರೀತಿ ಯಂತಿದೆ. ಭಾಷೆಯೊಂದರಲ್ಲಿ ಬೇರೂರಿರುವ ಪಿತೃತ್ವ ರಚನೆ ಯನ್ನು ಒಡೆಯುವಾಗ ಈ ವಿವರಣಾ ಭಾಷೆಯ ಜರೂರತ್ತಿರುತ್ತದೆ. ಇಷ್ಟು ತೀವ್ರವಾದ ಲಿಂಗ ಸೂಕ್ಷ್ಮತೆಯು ಬೆರಕೆಯಾಗಿರದಿದ್ದರೆ, ಇಂದಿಗೂ ಮಹಿಳಾ ಪರವಾಗಿ ಸಮಾಜವನ್ನು ಪುನಃಶ್ಚೇತನಗೊಳಿಸುವುದು ಎಂದರೇನು ಎಂದೇ ಅರ್ಥವಾಗುತ್ತಿರಲಿಲ್ಲ.

**ಮಸೂದೆಗಳಾಗುವ ಸಂಗತಿಗಳ ಚರ್ಚೆ ಮತ್ತು ಫಲಿತಗಳು**

ಸಂವಿಧಾನವು ಯಾವೆಲ್ಲ ಆದರ್ಶಗಳನ್ನು ತನ್ನ ಮುಂದಿಟ್ಟುಕೊಂಡಿದೆಯೋ ಅವು ಮಸೂದೆಗಳಾಗುವ ಸನ್ನಿವೇಶದಲ್ಲಿ ನಡೆದ ಬಹಳಷ್ಟು ಚರ್ಚೆಗಳು ಅಂಬೇಡ್ಕರರ ಸ್ತ್ರೀಪರ ಸ್ಪಷ್ಟ ನಿಲುವಿಗೆ ಪುರಾವೆಗಳಾಗಿವೆ. ಹಿಂದೂ ಕೋಡ್ ಬಿಲ್ ಕುರಿತ ಚರ್ಚೆ ಇದಕ್ಕೊಂದು ಪ್ರಬಲ ನಿದರ್ಶನ. ವಿಚ್ಛೇದನದ ಅವಕಾಶವನ್ನು ಹಿಂದೂ ಕೋಡ್‌ಬಿಲ್ ಪ್ರತಿಪಾದಿಸಿತು. ಅದಕ್ಕೆ ವಿರೋಧ ಬಂದಾಗ, ೧೦%ರಷ್ಟಿರುವ ಹಿಂದೂಗಳ ಅಭಿಪ್ರಾಯವನ್ನು ೯೦%ರಷ್ಟು ಜನರ ಮೇಲೆ ಹೇರುವುದು ಸರಿಯೇ ಎಂದು ವಾದಿಸುತ್ತಾರೆ. ಹಿಂದೂ ಕೋಡ್ ಬಿಲ್‌ನ ಹೊಸ ಪರಿಷ್ಕರಣದ ಬಗ್ಗೆ ಅಂಬೇಡ್ಕರರಿಗೆ ತೀವ್ರವಾದ ಆಸಕ್ತಿಯಿತ್ತು. ಯಾಕೆಂದರೆ ಲಗ್ನ ಮತ್ತು ದತ್ತು ಸ್ವೀಕಾರದ ನಿಯಮಗಳನ್ನಿಲ್ಲಿ ಬದಲಿಸಲಾಗಿತ್ತು. ಹಳೆಯ ಹಿಂದೂ ಕೋಡ್ ಪ್ರಕಾರ ಲಗ್ನ ಮತ್ತು ದತ್ತು ಸ್ವೀಕಾರವನ್ನು ಬೇರೆ ಜಾತಿಯವರೊಂದಿಗೆ ನಡೆಯಿಸಿದರೆ, ಹಳೆಯ ಸಂಬಂಧಗಳಲ್ಲಿ ಯಾವುದೇ ಅಧಿಕಾರ ಉಳಿಯುತ್ತಿರಲಿಲ್ಲ. ಆದರೆ, ಹೊಸ ಹಿಂದೂ ಕೋಡ್ ಈ ಜಾತಿಯ ಕಟ್ಟುಪಾಡುಗಳನ್ನು ಸಡಿಲಿಸುತ್ತಿತ್ತು. ಜೊತೆಗೆ ಬಹುಪತ್ನಿತ್ವದ ವಿರೋಧ, ಸ್ತ್ರೀಧನವನ್ನು ಹೊರತುಪಡಿಸಿಯೂ ಮಹಿಳೆಯರಿಗೆ ಆಸ್ತಿಯ ಹಕ್ಕು ಹೀಗೆ ತೀರಾ ಸ್ಪಷ್ಟವಾದ ಲಿಂಗರಾಜಕಾರಣದ ನಿಲುವುಗಳು ಈ ಬಿಲ್‌ನಲ್ಲಿ ಇದ್ದವು. ಸತತ ನಾಲ್ಕು ವರ್ಷಗಳ ಕಾಲ ಈ ಬಿಲ್ ಅನ್ನು ಚರ್ಚೆಗೆ ತೆಗೆದುಕೊಂಡರೂ ಕೂಡ ಅದನ್ನು ಜಾರಿಗೆ ತರಲು ಸಂಸತ್ತು ಒಪ್ಪಿಗೆ ನೀಡಲಿಲ್ಲ. (ಇಲ್ಲಿಯ ಹಲವು ವಿಷಯಗಳು ಆ ನಂತರದ ಕಾಲದಲ್ಲಿ ಮಸೂದೆಗಳಾಗಿ ಅನ್ವಯಿತಗೊಂಡವು. ಭಾರತದ ಮಹಿಳೆಯರೀಗ ಈ ಮಸೂದೆಗಳ ಫಲಾನುಭವಿ ವರ್ಗಗಳಾಗಿದ್ದಾರೆ. ಆದರೆ ಇಂತಹ ಮಹಿಳಾಪರ ಮಸೂದೆಗಳ ಹಿಂದೆ ಅಂಬೇಡ್ಕರರ ಚಿಂತನಾಧಾರೆ ಇತ್ತು ಎನ್ನುವುದನ್ನು ಮರೆಯಬಾರದು) ಅಂಬೇಡ್ಕರ್ ಹೊಸ ಹಿಂದೂ ಕೋಡ್ ಬಿಲ್‌ಅನ್ನು ಜಾರಿಗೆ ತರಲು ಯಶಸ್ವಿಯಾಗದೇ ಇದ್ದಾಗ, ನನ್ನ ದೇಶದ ಮಹಿಳೆಯರು ತಮ್ಮ ಮನೋದೌರ್ಬಲ್ಯವನ್ನು ಬಿಟ್ಟುಬರಬೇಕೆಂದು ಕರೆ ಕೊಡುತ್ತಾರೆ. ೧೯೫೨ರಲ್ಲಿ ಅವರು ಇಂತಹ ಮಾತುಗಳನ್ನಾಡಿದ್ದರ ದಾಖಲೆಯಿದೆ. ಹೊಸ ಹಿಂದೂ ಕೋಡ್ ಬಿಲ್ ಇದು ಹಿಂದೂ ಧರ್ಮದ ವೈಯಕ್ತಿಕ ಸ್ವಾತಂತ್ರ್ಯದೊಳಕ್ಕೆ ಹಸ್ತಕ್ಷೇಪ ಮಾಡುತ್ತದೆಯಾದ್ದರಿಂದ ಅದನ್ನು ಕೈಬಿಡಬೇಕು ಎಂಬ ಮನವಿಯನ್ನು ಒಂದು ಮಹಿಳಾ ಸದಸ್ಯೆಯರ ನಿಯೋಗವು ಅಂಬೇಡ್ಕರರಿಗೆ ಅಪೀಲು ಸಲ್ಲಿಸಿತು. 'ಆ ಬಿಲ್ಲಿನ ಕರಡು ಪ್ರತಿಯನ್ನು ಓದಿದ್ದೀರಾ?' ಎಂದು ಅಂಬೇಡ್ಕರ್ ಪ್ರಶ್ನಿಸುತ್ತಾರೆ. ನಿಯೋಗದ ಮುಖ್ಯಸ್ಥೆ ಕೊಟ್ಟ ಉತ್ತರ ಅಂಬೇಡ್ಕರ್ ಅವರನ್ನು ಬೆಚ್ಚಿ ಬೀಳಿಸಿತ್ತು. ಅವರ ಗಂಡ, ಹೀಗೆ ಪ್ರತಿರೋಧ ಸಲ್ಲಿಸದಿದ್ದರೆ ಇನ್ನೊಂದು ಮದುವೆ ಮಾಡಿಕೊಳ್ಳುವುದಾಗಿ ಹೆದರಿಸಿದ್ದನಂತೆ. ಈ ಘಟನೆಯನ್ನು ಉಲ್ಲೇಖಿಸಿ, ಅಂಬೇಡ್ಕರ್ "ಸ್ತ್ರೀಯರು ತಮ್ಮ ಹಕ್ಕುಗಳ ರಕ್ಷಣೆಗಾಗಿ ಮನೋದೌರ್ಬಲ್ಯವನ್ನು ಬಿಟ್ಟು ಹೊರಬರಬೇಕಿದೆ" ಎನ್ನುತ್ತಾರೆ.




ಮಹಿಳಾ ಮಸೂದೆಗಳ ವಿಷಯದಲ್ಲಿ ಅಂಬೇಡ್ಕರ್ ಎಂದೂ ತನ್ನದೇ ಸರಿಯೆಂಬ ಹಠವಾದಿಯಾಗಿ ವರ್ತಿಸಲಿಲ್ಲ. ಸಾಮಾಜಿಕ ಬದುಕಿಗೆ ಮಹಿಳೆಯನ್ನು ಕರೆತರುವುದು ಹೊಸ ಪ್ರಯೋಗ ಮತ್ತು ಈ ಪ್ರಕ್ರಿಯೆಯನ್ನು ನಿರಂತರ ಚಲನಶೀಲವಾಗಿ ಇಡಬೇಕು ಎಂಬ ನಿಲುವು ಅವರದಾಗಿತ್ತು. ಇದಕ್ಕೆ ಉತ್ತಮ ಉದಾಹರಣೆ ಎಂದರೆ, ಗಣಿಗಾರಿಕೆಯಲ್ಲಿ ಮಹಿಳೆ ತೊಡಗಿಕೊಳ್ಳುವಿಕೆಯ ಕುರಿತು ಮಸೂದೆ ಮತ್ತು ಅದರ ತಿದ್ದುಪಡಿಗಳು. ಗಣಿಗಾರಿಕೆಯಲ್ಲಿ ಮಹಿಳೆಯರಿಗೂ ಅವಕಾಶ ನೀಡಬೇಕು ಎಂದು ಅಂಬೇಡ್ಕರ್ ಒತ್ತಾಯಿಸುವಾಗ ಅವರೆದುರು ಇದ್ದ ಕನಸು–ಸಮಾನ ದುಡಿಮೆ ಮತ್ತು ಸಮಾನ ವೇತನದ್ದು. ಆ ಸಂದರ್ಭದಲ್ಲಿ ಐದೂವರೆ ಅಡಿಗಿಂತ ಕಡಿಮೆ ವಿಸ್ತೀರ್ಣದ ಜಾಗದಲ್ಲಿ ಮಹಿಳೆಯರನ್ನು ಆಳ ಗಣಿಗಾರಿಕೆಗೆ ಇಳಿಸಬಾರದು ಮತ್ತು ಹೆಣ್ಣುಮಕ್ಕಳಿಗೆ ವಾರಕ್ಕೆ ಎಂಟಾಣೆ ಕೂಲಿಯಲ್ಲಿ ಎಂಟು ವಾರಗಳ ಹೆರಿಗೆ ರಜೆಯನ್ನು ನೀಡುವ ಸಹನಿಯಮಗಳನ್ನೂ ಮಾಡಲಾಯಿತು. ಆದರೆ ಕೆಲವೇ ಕಾಲದಲ್ಲಿ ಗಣಿಗಾರಿಕೆಯಲ್ಲಿ ಮಹಿಳೆಯರು ವಿಪರೀತ ಶ್ರಮವಹಿಸಬೇಕಾಗುತ್ತದೆ ಎಂದು ತಿಳಿದು, ಆಳಗಣಿಗಾರಿಕೆಯಿಂದ ಮಹಿಳೆಯರನ್ನು ಹೊರಗಿಡುವ ಮಸೂದೆಯನ್ನು ಪಾಸುಮಾಡಲಾಯಿತು. ಇಂತಹ ನಿರಂತರ ಪ್ರಯತ್ನಶೀಲತೆಯಲ್ಲಿಯೇ ಅಂಬೇಡ್ಕರ್ ಅವರ ಮಹಿಳಾ ಸಂವೇದನೆಯ ಎಚ್ಚರದ ಎಳೆಗಳಿವೆ.

**ನಾನು ನನ್ನ ಕುರುಡು ಜನತೆಯ ಕೋಲು :** ಆ ಕಾಲದ ಭಾರತ ದಲಿತ ಬದುಕಿನ ಭಯಾನಕತೆಯ ಅಲಗು ಹೊಕ್ಕಾಡುವ ದುರಂತದಲ್ಲಿತ್ತು. ಮನುಷ್ಯರಾಗಿರುವುದೇ ಕಠಿಣ ಎನ್ನಿಸಿದ ಆ ಜನಗಳಿಗೆ ಬದುಕಿನ ಹಕ್ಕನ್ನು ಒದಗಿಸುವ ತೀವ್ರ ಒತ್ತಡದಲ್ಲಿದ್ದರು ಅಂಬೇಡ್ಕರ್. ನಾನು ನನ್ನ ಕುರುಡು ಜನತೆಯ ಕೋಲು ಎಂದವರು ಹೇಳಿಕೊಳ್ಳುತ್ತಿದ್ದರು. ಸಮುದ್ರದ

ಅಲೆಗಳ ರಭಸದಲ್ಲೂ ತಲೆಯೆತ್ತಿ ನಿಂತಿರುವ ಬಂಡೆಗಲ್ಲಿನಂತೆ ನಾನು ಎನ್ನುತ್ತಿದ್ದರು. ಅವರ ಕಾಲ ಕೆಳಗಿನ ಬೆಂಕಿ, ಮಹಿಳಾ ವಿಷಯವನ್ನು ಹೆಚ್ಚು ವ್ಯವಧಾನದಿಂದ ಪರಿಶೀಲಿಸುವ ಸಮಯವನ್ನು ಕೊಡಲಿಲ್ಲ. ಆದರೆ ಅಂತಹ ಕ್ವಚಿತ್ ಸಂದರ್ಭಗಳಲ್ಲಿ ಅಂಬೇಡ್ಕರ್ ಸ್ಪಂದಿಸುವ ವಿಧಾನ ವಿಶಿಷ್ಟವಾಗಿತ್ತು. ಅವರ ಪ್ರಾಮಾಣಿಕ ಕಳಕಳಿಗೆ ದ್ಯೋತಕವಾಗಿತ್ತು. ಮಹಾಡ್‌ನಲ್ಲಿ ದಲಿತರ ಸಭೆ ನಡೆದ ಒಂದು ಘಟನೆಯದು. ೧೯೨೮ರ ಇಸವಿ. ದಲಿತ ಮಹಿಳೆಯರೂ ಸಾವಿರಾರು ಸಂಖ್ಯೆಯಲ್ಲಿದ್ದರು. ಮಹಿಳೆಯರನ್ನು ಉದ್ದೇಶಿಸಿ ಮಾತನಾಡುವ ಪೂರ್ವಸಿದ್ಧತೆ ಏನೂ ಇರಲಿಲ್ಲ. ಆದರೆ ಅಲ್ಲಿ ಸೇರಿದ್ದ ಮಹಿಳೆಯರು ತಮ್ಮ ಬಗ್ಗೆ ಹೊಂದಿದ್ದ ಆರ್ದ್ರಗೌರವ ಅವರ ಕಣ್ಣುಗಳಲ್ಲಿ ಫಲಿಸುತ್ತಿತ್ತು. ಅಂಬೇಡ್ಕರ್ ಅವರನ್ನು ಮಧ್ಯಾಹ್ನದ ನಂತರ ಮಾತನಾಡೋಣವೇ ಎಂದು ಕೇಳುತ್ತಾರೆ. ಮುಗಿಯಬೇಕಿದ್ದ ಸಭೆ ಮುಂದುವರಿಯುತ್ತದೆ. ಅಂಬೇಡ್ಕರ್ ಮಹಿಳೆಯರೊಂದಿಗೆ ಮಾತನಾಡುತ್ತಾರೆ. ನೀವು ಹೆತ್ತಮಕ್ಕಳ ದುರಂತ ಕಂಡು ಮನಸ್ಸು ಮರುಗುತ್ತಿದೆಯೇ? ಎನ್ನುತ್ತಾ ನೀವು ಹೀಗಿರಬೇಡಿ. ನಿಮ್ಮ ಸೀರೆಯುಡುವ ವಿಧಾನ ಬದಲಿಸಿ, ತಾಮ್ರದ ಆಭರಣಗಳನ್ನು ಬಳಸಬೇಡಿರಿ. ಒಂದೆರಡು ಒಳ್ಳೆಯ ಬಟ್ಟೆ ತೆಗೆದುಕೊಳ್ಳಲು ಸಾಧ್ಯವಾದರೆ ತೆಗೆದುಕೊಳ್ಳಿ ಎನ್ನುತ್ತಾರೆ. ಸಭೆ ಮುಗಿಸಿ ಆ ಮಹಿಳೆಯರು ಬೇರೆ ರೀತಿ ಸೀರೆಯುಟ್ಟು ಹೋಗುತ್ತಾರೆ. ಇನ್ನೊಂದು ೧೯೩೬ರ ಕಾರ್ಮಾಪುರದ ಸಭೆ. ಇದು ಅತ್ಯಂತ ಶ್ರೇಷ್ಠ ಸಭೆ. ಯಾಕೆಂದರೆ ಅತ್ಯಂತ ಹೀನವೃತ್ತಿಯ ಜನರೊಂದಿಗೆ ನಾನಿದ್ದೇನೆ ಎಂದಿದ್ದರು. ಬೌದ್ಧಧರ್ಮಕ್ಕೆ ಮತಾಂತರಗೊಳ್ಳಲು ಸಿದ್ಧರಾಗಿದ್ದ ಅವರಿಗೆ, ನೀವು ನಿಮ್ಮ ವೃತ್ತಿಯನ್ನು ಬಿಟ್ಟು, ಬದಲಿ ವ್ಯವಸ್ಥೆ ಇಲ್ಲದ, ಹೆಚ್ಚು ಶ್ರಮಪಡಲು ಸಿದ್ಧರಾಗಿ ಬರಬೇಕು ಎಂದು ನಿರ್ಬಂಧಿಸುತ್ತಾರೆ. ಈ ತಳಮಟ್ಟದ ಅನುಭವಗಳು ಸಂವಿಧಾನವನ್ನು ಸಿದ್ಧಪಡಿಸುವ ಹಿಂದಿನ ಎಚ್ಚರವಾಗಿ ಅವರನ್ನು ಕಾಡಿದೆ.

ಸಂವಿಧಾನದ ಶ್ರೇಷ್ಠತೆ ಅಥವಾ ಕನಿಷ್ಠತೆಯು ನಿರ್ಧಾರವಾಗುವುದು, ಅದು ಹೇಗೆ ಅನ್ವಯಗೊಳ್ಳುತ್ತದೆ ಎಂಬ ವಿಧಾನದ ಮೂಲಕ. ಯಾವುದೇ ಸಂವಿಧಾನವು ತನ್ನಿಂದ ತಾನೇ ದುರ್ಬಲವೋ-ಸಬಲವೋ ಆಗಿರುವುದಿಲ್ಲ ಎನ್ನುವುದು ಅಂಬೇಡ್ಕರರ ಮಾತು. ಆದರೆ ನಮ್ಮ ಸಂವಿಧಾನವಿಂದು ಮೂಲಭೂತವಾದಿಗಳ ಕೆಂಗಣ್ಣಿಗೆ ಗುರಿಯಾಗಿ, ಅದರ ಸತ್ವವನ್ನು ನಿಷ್ಕ್ರಿಯಗೊಳಿಸಬೇಕು ಎಂಬ ಹುನ್ನಾರ ನಡೆದಿರುವಾಗ – ಈ ಮರು ಅಧ್ಯಯನದಿಂದ ಸಂವಿಧಾನದ ನಿಜಸತ್ವವು ಅರಿವಿಗೆ ಬಂದು ಹೆಮ್ಮೆಯೆನಿಸುತ್ತದೆ. ಮೊದಲು ಪ್ರಜಾಸತ್ತೀಯ ವ್ಯವಸ್ಥೆಯ ಮೇಲೆ ಹಲ್ಲೆ ನಡೆದು ಅದನ್ನು ದುರ್ಬಲಗೊಳಿಸಲಾಗುತ್ತದೆ. ನಂತರ ಸರ್ವಾಧಿಕಾರಿಯ ಲಕ್ಷಣಗಳು ಗೋಚರಿಸುತ್ತವೆ. ಮುಂದಿನ ಹಂತವೇ ಪ್ರಜಾಸತ್ತೀಯ ಮೌಲ್ಯಗಳನ್ನು ಎತ್ತಿಹಿಡಿಯುವ ಸಂವಿಧಾನವನ್ನು ಅಪ್ರಸ್ತುತಗೊಳಿಸುವ ಪ್ರಯತ್ನ. ಈ ಕೆಡುಕಿನ ಹಾದಿ ತೆರೆದಿದೆಯೇ ಎಂಬ ದಿಗಿಲಿನ ಕಾಲದಲ್ಲಿ, ಮಹಿಳೆಯ ವ್ಯಕ್ತಿತ್ವಗೌರವದ ಚಹರೆ ಮೂಡಿಸಿದ ಸಂವಿಧಾನವನ್ನು ರಕ್ಷಿಸಿಕೊಳ್ಳಬೇಕಿರುವ ಜವಾಬ್ದಾರಿ ಇಂದಿನ ಜನಾಂಗದ ಮೇಲಿದೆ.


**ಡಾ|| ವಿನಯಾ ಒಕ್ಕುಂದ**

'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩


# ಅವಳು ಹೇಳಲೇ ಇಲ್ಲ !



ಅವನು ಹೇಳುತ್ತಿದ್ದ
ಇವಳು ಕೇಳುತ್ತಿದ್ದಳು
ಹೇಳುವ ಮತ್ತು ಕೇಳುವ
ಈ ಆಟ ನಡೆದೇ ಇತ್ತು.

ಆಟದಲ್ಲಿತ್ತು ಎರಡು ಚೀಟಿ
ಒಂದರಲ್ಲಿತ್ತು 'ಹೇಳು'
ಇನ್ನೊಂದರಲ್ಲಿತ್ತು 'ಕೇಳು'

ಈಗದು ಅವಳ ಅದೃಷ್ಟವೇ ಆಗಿಬಿಟ್ಟಿತ್ತು
ಅಥವಾ ಕೇವಲ ಯೋಗಾಯೋಗವೋ
ಅವಳಿಗೆ ಸಿಗುವ ಚೀಟಿಯಲ್ಲಿ
ಬರೆದಿರುತ್ತಿತ್ತು ಯಾವತ್ತೂ 'ಕೇಳು'

ಅವಳು ಕೇಳುತ್ತಲೇ ಇದ್ದಳು
ಅವಳು ಕೇಳಿದ್ದು ಕೇವಲ ಅಪ್ಪಣೆ
ಅವಳು ಕೇಳಿದ್ದು ಕೇವಲ ಉಪದೇಶ
ಬಂಧನ ಅವಳ ಪಾಲಿಗಷ್ಟೇ ಇತ್ತು
ಅವಳಿಗಾಗಿಯೇ ಇದ್ದವು ನಿರ್ಬಂಧಗಳು

ಅವಳಿಗೂ ಗೊತ್ತಾಗುತ್ತಿತ್ತು
ಹೇಳುವುದು–ಕೇಳುವುದು
ಕೇವಲ ಕ್ರಿಯಾಪದಗಳಷ್ಟೇ ಅಲ್ಲ

ರಾಜ ಹೇಳಿದ–'ವಿಷ ಕುಡಿ'
ಅವಳು ಮೀರಾ ಆದಳು
ಋಷಿ ಹೇಳಿದ–'ಕಲ್ಲಾಗು'
ಅವಳು ಅಹಲ್ಯೆಯಾದಳು
ಪ್ರಭು ಶ್ರೀರಾಮ ಹೇಳಿದ–'ಹೊರಟುಬಿಡು'
ಅವಳು ಸೀತೆಯಾದಳು
ಚಿತೆಯಿಂದ ಆರ್ತನಾದ ಹೊರಬಿತ್ತು
ಯಾರ ಕಿವಿಗೂ ಬಡಿಯಲಿಲ್ಲ
ಅವಳು ಸತಿಯಾದಳು
ಮೂರು ಬಾರಿ 'ತಲಾಕ್' ಹೇಳಿದರು
ಅವಳು ಪರಿತ್ಯಕ್ತೆಯಾದಳು

ಅವಳ ಮೊರೆಗೆ ಉಸಿರುಗಟ್ಟಿತ್ತು
ಶಬ್ದ ಸಿಕ್ಕಿಕೊಂಡಿತ್ತು
ತುಟಿ ಹೊಲಿದುಕೊಂಡಿತ್ತು
ಗಂಟಲು ಕಟ್ಟಿಬಂದಿತ್ತು.

ಅವಳ ಕೈಗೆ ಎಂದೆಂದೂ ಸಿಗಲಿಲ್ಲ
'ಹೇಳು'ಎಂದು ಬರೆದಿಟ್ಟ ಚೀಟಿ.


ಮೂಲ ಹಿಂದಿ : **ಅಮೃತಾ ಪ್ರೀತಂ**

ಅನುವಾದ : **ಡಾ|| ಮಾಧವಿ ಎಸ್. ಭಂಡಾರಿ**

'ಮಂದಾರ', ಪದ್ಮನಾಭನಗರ

ಡಯಾನ ಥಿಯೇಟರ್ ರಸ್ತೆ ಹಿಂಭಾಗ, ಉಡುಪಿ – ೫೭೬ ೧೦೧

# ಎ. ಕೆ. ರಾಮಾನುಜನ್ ನೋಟಕ್ರಮದ ವಿಶಿಷ್ಟತೆ

**ತಮಿಳು ಹಿನ್ನೆಲೆಯಿಂದ ಬಂದ ರಾಮಾನುಜನ್ ದಕ್ಷಿಣಭಾರತದ ಪಠ್ಯಗಳನ್ನು ದ್ರಾವಿಡ ಸಂಸ್ಕೃತಿಯ ಭಾಗವಾಗಿ ನೋಡಬಲ್ಲವರಾಗಿದ್ದರು. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಂಸ್ಕೃತ ಪರಂಪರೆಯನ್ನು ಅದರ ಯಜಮಾನಿಕೆ ಪ್ರಜ್ಞೆಯ ಸಮೇತ ತೀನಂಶ್ರೀಯವರು ಕನ್ನಡಕ್ಕೆ ಕಟ್ಟಿಕೊಡುತ್ತಾರೆ; ಮತ್ತೆ ಕೆಲವು ವಿದ್ವಾಂಸರು ಪಶ್ಚಿಮದ ಸಾಹಿತ್ಯ ಚಿಂತಕರನ್ನು ಕನ್ನಡ ಪಠ್ಯಗಳ ಚರ್ಚೆಯಲ್ಲಿ ಯಾಂತ್ರಿಕವಾಗಿ ನುಗ್ಗಿಸುತ್ತಾರೆ. ಈ ಮಾದರಿಗಳಿಗೂ ರಾಮಾನುಜನ್ ತಮಿಳಿನ ಅಗಂ ಪುರಂ ಪರಿಕಲ್ಪನೆಗಳನ್ನು ಕನ್ನಡ ಪಠ್ಯಗಳ ಚರ್ಚೆಯಲ್ಲಿ ತರುವ ಕ್ರಮಕ್ಕೂ ವ್ಯತ್ಯಾಸವಿದೆ. ತೌಲನಿಕ ಸಾಹಿತ್ಯ ವಿಧಾನದಲ್ಲಿ ಆಸಕ್ತಿಯಿದ್ದ ಅವರು (ಇದು ಅವರು ಪ್ರಾಧ್ಯಾಪಕರಾಗಿದ್ದ ಶಿಕಾಗೊ ವಿಶ್ವವಿದ್ಯಾಲಯದ ವಿಭಾಗದ ಆಶಯ ಕೂಡ), ಪಠ್ಯ ಮತ್ತು ಪರಿಕಲ್ಪನೆಗಳನ್ನು ಕೆಲವೊಮ್ಮೆ ಹೆಚ್ಚು ಎಳೆದಾಡುತ್ತಾರೆ ಅನಿಸುವುದುಂಟು. ಆದರೆ ದ್ರಾವಿಡ ಅಸ್ಮಿತೆಯ ಚೌಕಟ್ಟನ್ನು ರೂಪಿಸಿಕೊಂಡು ಅವರು ಪಠ್ಯಗಳನ್ನು ಒಳಗೆ ತರುವ ಕ್ರಮವು, ಸಾಂಸ್ಕೃತಿಕವಾಗಿ ಮಹತ್ವದ್ದಾಗಿದೆ.**

**ಡಾ॥ ರಹಮತ್ ತರೀಕೆರೆ**

**ಒ**ಮ್ಮೆ ಪಿ. ಲಂಕೇಶ್, ಜಾನಪದವನ್ನು ಹಚ್ಚಿಕೊಂಡಿದ್ದ ಎ. ಕೆ. ರಾಮಾನುಜನ್‌ಗೆ 'ಸರಳವೂ ಏಕಮುಖವೂ ಆದ ಈ ಸಾಹಿತ್ಯದ ಬಗ್ಗೆ ಇಷ್ಟೆಲ್ಲ ಯಾಕೆ ತಲೆಕೆಡಿಸಿಕೊಳ್ತೀರಿ?' ಎಂದು ಪ್ರಶ್ನಿಸುತ್ತಾರೆ. ಇದಕ್ಕೆ ರಾಮಾನುಜನ್ "ಭಾರತದ ಸಂಸ್ಕೃತಿಯನ್ನು ಅಭ್ಯಾಸ ಮಾಡುವವರು ಲಿಖಿತ ಅಭಿಜಾತ ಸಾಹಿತ್ಯ ಕೃತಿಗಳನ್ನು ಮಾತ್ರ ಅಭ್ಯಾಸ ಮಾಡದೆ, ಆ ಸಂಸ್ಕೃತಿಯಲ್ಲಿರುವ ಮೌಖಿಕ ಪರಂಪರೆಯನ್ನು ಆ ಪರಂಪರೆಯ ಮುಖ್ಯ ಅಂಗವಾದ ಜಾನಪದವನ್ನೂ ಅಧ್ಯಯನ ಮಾಡಬೇಕು" ಎಂದು ಉತ್ತರಿಸುತ್ತಾರೆ. ಕನ್ನಡದ ಇಬ್ಬರು ಪ್ರತಿಭಾವಂತ ಲೇಖಕರ ಈ ಪ್ರಶ್ನೋತ್ತರವು, ಜಾನಪದ ಕುರಿತಂತೆ ಮಾತ್ರವಲ್ಲ, ಸಮುದಾಯ ಸೃಷ್ಟಿಸುವ ಸಾಂಸ್ಕೃತಿಕ ಲೋಕಗಳನ್ನು ಕುರಿತು ಎರಡು ಪ್ರಾತಿನಿಧಿಕ ದೃಷ್ಟಿಕೋನಗಳೂ ಆಗಿವೆ.

ಭಾರತದ ಸಂಸ್ಕೃತಿಯನ್ನು ಶಿಷ್ಟ ಮತ್ತು ಪರಿಶಿಷ್ಟ ಎಂಬ ಎರಡು ಹೋಳುಗಳಲ್ಲಿ ನೋಡುವುದು ಸರಳೀಕರಣವೇ ಸರಿ. ಇದರ ಅರಿವಿದ್ದೂ ಹೇಳುವುದಾದರೆ, ರಾಮಾನುಜನ್‌ಗೆ ಅಖಿಲ ಭಾರತೀಯವೂ ಸಂಸ್ಕೃತಮೂಲದ್ದೂ ಆದ ಬ್ರಾಹ್ಮಣ ಕೇಂದ್ರಿತ ಪರಂಪರೆಗಳ ಎದುರು, ದೇಶೀಯವೂ ಜಾನಪದೀಯವೂ ಸ್ಥಳೀಯವೂ ಅಬ್ರಾಹ್ಮಣೀಯವೂ ಆದ ಗ್ರಾಮೀಣ ವರ್ಗಗಳು ಸೃಷ್ಟಿಮಾಡಿದ ಭಾರತದಲ್ಲಿ ಹೆಚ್ಚು ಕುತೂಹಲವಿತ್ತು ಎನ್ನಬಹುದು. ಅವರು ಭಾರತದ ಜನಪದ ಕತೆಗಳ ಪ್ರಸ್ತಾವನೆಯಲ್ಲಿ ಉಲ್ಲೇಖಿಸುವ ಮೇಕೆಯ ಕತೆಯನ್ನು ಗಮನಿಸಬೇಕು. ಇದರಲ್ಲಿ ರಾಣಿಯೊಬ್ಬಳು ಋಷಿಕೊಟ್ಟ ಸಂತಾನಫಲದ ತಿರುಳನ್ನು ತಿಂದು ಓಟೆಯನ್ನು ಉಡಾಫೆಯಿಂದ ಬಿಸಾಡುತ್ತಾಳೆ. ಓಟೆಯನ್ನು ನುಂಗಿದ ಮೇಕೆ ರಾಜಕುಮಾರನನ್ನು ಹಡೆಯುತ್ತದೆ. ಜನಪದ ಸಾಹಿತ್ಯವು ಶಿಷ್ಟಸಾಹಿತ್ಯಕ್ಕೆ ಕಡಿಮೆಯಾದುದಲ್ಲ. ಅದಕ್ಕೆ ಸಮಾನವಾದುದು. ಅದನ್ನೂ ಪರಿಗಣಿಸಿ ಎಂದು ಪ್ರತಿಪಾದಿಸುವ ಚಿಂತನೆ, ಕನ್ನಡದಲ್ಲಿ ಗರತಿಯ ಹಾಡಿನಿಂದ ಆರಂಭವಾಯಿತು. ಅದು ವಿಶ್ವವಿದ್ಯಾಲಯಗಳಲ್ಲಿ ಒಂದು ಅಧ್ಯಯನ ವಿಷಯವಾಗಿ ಕಲಿಸುವಲ್ಲಿಗೆ ಒಂದು ಘಟ್ಟಕ್ಕೆ ಮುಟ್ಟಿತು. ಆದರೆ ಅದೇ ಕಾಲಕ್ಕೆ, ರಾಮಾನುಜನ್ ಈ ಬಗೆಯ ಆತ್ಮರಕ್ಷಕ ವಾದಗಳ ಆಚೆಹೋಗಿ, ಜಾನಪದದಲ್ಲಿ ನಮ್ಮ ಸಮಾಜದ ಕೆಲವು ಮೂಲಭೂತ ಚಿಂತನಕ್ರಮಗಳಿವೆ; ಅದರದ್ದೇ ಆದ ಸೌಂದರ್ಯ ಮೀಮಾಂಸೆಯಿದೆ ಎಂದು ಹುಡುಕಲು ಯತ್ನಿಸಿದರು; ಅಲ್ಲಿರುವ ಪ್ರತಿಸಂಸ್ಕೃತಿಗಳನ್ನು ಶೋಧಿಸಿದರು. ಭಾರತದ ವೈದಿಕ ಕರ್ಮಸಿದ್ಧಾಂತಗಳಿಗಿಂತ ಭಿನ್ನವಾದ ಆಲೋಚನ ಕ್ರಮಗಳಿವೆ ಎಂದು ಹೇಳಲು ಯತ್ನಿಸಿದರು. ಅಧೋಜಗತ್ತುಗಳ ಸೃಜನಶೀಲತೆಯೇ ಭಾರತದ ಸಂಸ್ಕೃತಿಯನ್ನು ವರ್ಣರಂಜಿತವಾಗಿ ರೂಪಿಸಿದೆ ಎಂಬುದು ಅವರ ನಂಬಿಕೆ. ಅವರ 'ಹೂಮರ' 'ದೀಪದಮಲ್ಲಿ' 'ಹಾವಿನಗಂಡ' ಮುಂತಾದ ಜನಪದ ಕತೆಗಳ ವಿಶ್ಲೇಷಣೆಯನ್ನು ಗಮನಿಸಬೇಕು. ಈ ಕತೆಗಳನ್ನು ಒಳಗೊಂಡಂತೆ ಒಟ್ಟಾರೆ ರಾಮಾನುಜನ್ ವಿಶ್ಲೇಷಣ ಬರೆಹಗಳಲ್ಲಿ ಸ್ತ್ರೀಚೈತನ್ಯದ ಹುಡುಕಾಟವಿದೆ. ಇದನ್ನು ಜಾನಪದೀಯ ಸ್ತ್ರೀವಾದ ಎಂದೂ ಕರೆಯಬಹುದು. ಆಳದಲ್ಲಿ ಅವರೊಬ್ಬ

ಸ್ತ್ರೀಸಂವೇದನೆಯ ಬರೆಹಗಾರ. ಅವರ ಈ ಸಂವೇದನೆ ರೂಪುಗೊಳ್ಳಲು ಅವರ ಅಮ್ಮನ ವ್ಯಕ್ತಿತ್ವವೂ ಕಾರಣ. ಅಮ್ಮನನ್ನು ಕುರಿತು ಅವರು ರಚಿಸಿರುವ ಕವನಕ್ಕೂ ಅವರು ಸಂಕಲಿಸಿ ವಿಶ್ಲೇಷಿಸಿರುವ ಸ್ತ್ರೀಕೇಂದ್ರಿತ ಕಥೆಗಳಿಗೂ ಸಂಬಂಧವಿದೆ. ಫಲವಂತಿಕೆ–ಪೋಷಣೆ–ಸಾಕುವಿಕೆ ಇವು ದೊಡ್ಡ ಮೌಲ್ಯಗಳಾಗಿ ಅವರ ವಿಶ್ಲೇಷಣೆಯಲ್ಲಿ ಬರುತ್ತವೆ. ಅವರು ಅನುವಾದಕ್ಕಾಗಿ ಮಾಡಿಕೊಳ್ಳುವ ಆಯ್ಕೆಗಳಲ್ಲೂ ಈ ಸ್ತ್ರೀತನವಿದೆ. ಅವರು ಲಂಕೇಶರ ರೊಟ್ಟಿ ಮತ್ತು ಅವ್ವ ಕತೆಗಳನ್ನು ಇಂಗ್ಲಿಷಿಗೆ ಅನುವಾದಿಸಿದರು. ಶರಣರ ವಚನಗಳನ್ನು ಹಾಗೂ ಸ್ತ್ರೀಕೇಂದ್ರಿತ ಜನಪದ ಕತೆಗಳನ್ನು ಅನುವಾದಿಸಿದರು. ಅವರ ಕವಿತೆ, ಕತೆ, ಕಾದಂಬರಿಗಳಲ್ಲೂ ತಾಯನ್ನು ಕುರಿತ ಸೆಳೆತಗಳಿವೆ. ಅವರ ಕಥೆಗಳ ನಾಯಕರು ಪಿತೃಹತ್ಯೆಯ ಗುಣವುಳ್ಳವರು. ನವ್ಯದಲ್ಲಿ ಹೆಣ್ಣನ್ನು ದೇಹಕೇಂದ್ರಿತವಾಗಿ ನೋಡುವ ಪ್ರವೃತ್ತಿ ಢಾಳಾಗಿದೆ. ತಾಯನ್ನು ಆರಾಧಿಸುವ ನವ್ಯರ ಯತ್ನದಲ್ಲಿಯೂ ತಾಯಲ್ಲದ ಹೆಣ್ಣನ್ನು ಜೀವನ ಸಂಗಾತಿಯಾಗಿ ಪರಿಭಾವಿಸಿರುವ ನಿದರ್ಶನಗಳು ವಿರಳ. ಈ ಹಿನ್ನೆಲೆಯಲ್ಲಿ ರಾಮಾನುಜನ್ ಚಿಂತನೆಯಲ್ಲಿರುವ ಸ್ತ್ರೀತನದ ಹುಡುಕಾಟದಲ್ಲಿರುವ ಸಮಾನತೆಯ ಪ್ರಜ್ಞೆಯನ್ನು ಪರಿಭಾವಿಸಬೇಕಿದೆ.

ಈ ಪರಿಯ ಚಿಂತನಾಕ್ರಮಕ್ಕೆ ರಾಮಾನುಜನ್ ಅವರ ವೈಯಕ್ತಿಕ ಜೀವನದಲ್ಲೂ ಪ್ರೇರಣೆ ಇದ್ದಂತಿದೆ. ಅವರ ಆತ್ಮಕಥನಾತ್ಮಕ ಬರೆಹಗಳಲ್ಲಿ ಕಾಣುವ ಕುಟುಂಬದ ಚಿತ್ರಗಳಲ್ಲಿ ಎರಡು ಲೋಕಗಳಿವೆ. ಒಂದು – ಅಪ್ಪನ ಸಾರ್ವಜನಿಕ ಬದುಕಿನ ಲೋಕ; ಮತ್ತೊಂದು ಅಮ್ಮನ ಮನೆ ಕೇಂದ್ರಿತ ಲೋಕ. ಅಟ್ಟದ ಅಥವಾ ಜಗುಲಿಯ ಮೇಲೆ ಕೂರುವ ಅಪ್ಪನ ಲೋಕದಲ್ಲಿ ಇಂಗ್ಲಿಷ್, ಸಂಸ್ಕೃತ ಯೂರೋಪುಗಳಿವೆ. ಅಲ್ಲಿ ರಾಜಕೀಯ ಚರ್ಚೆಗಳಿವೆ. ಕೆಳಗೆ ಅಮ್ಮ ತಮಿಳು ಮತ್ತು ಕನ್ನಡಗಳಲ್ಲಿ ಮಾತಾಡುತ್ತ ಹಿತ್ತಲನ್ನೂ ಅಡುಗೆಮನೆಯನ್ನೂ ತನ್ನ ನೆಲೆಯಾಗಿಟ್ಟುಕೊಂಡು ಸಂವೇದನೆಯನ್ನು ಕಟ್ಟಿಕೊಂಡಿದ್ದಾಳೆ. ರಾಮಾನುಜನ್ ಬರೆಹಗಳಲ್ಲಿ ಇವೆರಡೂ ಜಗತ್ತುಗಳ ಮುಖಾಮುಖಿ ಮಾಡುತ್ತಾರೆ. ಅವರು ತಂದೆಯ ಲೋಕದ ನೋಟಕ್ರಮವನ್ನು ಸರಳವಾಗಿ ನಿರಾಕರಿಸುವುದಿಲ್ಲ; ಬದಲಿಗೆ ಆಪ್ತವಾದ ಮಾನವೀಯ ತುಡಿತಗಳು ತಾಯಲೋಕದಲ್ಲಿ ಹೆಚ್ಚಿರುವುದನ್ನು ಕಾಣಿಸುತ್ತ ಹೋಗುತ್ತಾರೆ. ಇದುವೇ ಅವರ ಜನಪದ ಸಾಹಿತ್ಯದ ವಿಶ್ಲೇಷಣೆಯಲ್ಲಿ ದೊಡ್ಡ ಹುಡುಕಾಟವಾಗಿ ಪರಿಣಮಿಸುತ್ತದೆ.

ಬರೆಹರೂಪದ ಹಾಗೂ ಮೌಖಿಕ ಸಾಹಿತ್ಯ ಪರಂಪರೆಗಳನ್ನು ಸೀಮಿತ ಚೌಕಟ್ಟಿನಾಚೆ ಒಯ್ದು, ಸಮುದಾಯಗಳ ಆಲೋಚನ ಕ್ರಮದ ಭಾಗವಾಗಿ ವಿಶ್ಲೇಷಿಸುವುದನ್ನು, ರಾಮಾನುಜನ್ ಕನ್ನಡದಲ್ಲಿ ಸಂಸ್ಕೃತಿ ಚಿಂತನೆ ಎಂಬ ರೂಪವು ಜನಪ್ರಿಯವಾಗುವ ಮೊದಲೇ ಆರಂಭಿಸಿದರು. ಅವರ ಚಿಂತನೆಯ ವಿಶಿಷ್ಟತೆ ಎಂದರೆ ಸಾಹಿತ್ಯ ಕೃತಿಗಳನ್ನು ಕಲಾಕೃತಿಗಳಾಗಿ ಪರಿಭಾವಿಸಿ ಸೂಕ್ಷ್ಮವಾಗಿ ಓದುವುದು; ನವ್ಯದ ಆಕೃತಿನಿಷ್ಠೆ ಹಾಗೂ ದಲಿತ ಬಂಡಾಯದ ಆಶಯನಿಷ್ಠೆಗಳ ಎರಡು ಅತಿರೇಕಗಳಲ್ಲಿ ಸಿಲುಕಿಕೊಳ್ಳದೆ, ಅವೆರಡೂ ವಿಧಾನಗಳು ಅರ್ಥಪೂರ್ಣ ಬೆರೆಯುವಂತೆ ಅನುಸಂಧಾನ ಮಾಡುವುದು. ಇದು ಪಂಪನ ದೇಶಿ ಮತ್ತು ಮಾರ್ಗಗಳನ್ನು ತಗುಳ್ಚಿ ನೋಡುವ ಕ್ರಮವನ್ನು ಸಹ ನೆನಪಿಸುತ್ತದೆ. ಅವರು ಜಾನಪದ ಮತ್ತು ಶಿಷ್ಟಗಳನ್ನು ಬೆರೆಸಿ ನೋಡುವಾಗ ಅಲ್ಲಿರುವ ವ್ಯತ್ಯಾಸಗಳನ್ನು ಮರೆಯುವುದಿಲ್ಲ; ಅವನ್ನು ಮೇಲುಕೀಳಿಲ್ಲದ ಸಮಾನ ಪಾತಳಿಯಲ್ಲಿಟ್ಟು ನೋಡುತ್ತಾರೆ. ಭಾರತದ ವಿಶಿಷ್ಟ ಚಿಂತನಾಕ್ರಮಗಳು ವಿಶಿಷ್ಟ ವ್ಯಕ್ತಿಗಳಲ್ಲಿ ಮಾತ್ರವಲ್ಲ ಸಮುದಾಯಗಳಲ್ಲಿಯೂ ಇವೆಯೆಂದು ತೋರಿಸುತ್ತಾರೆ. ನವ್ಯವು ವ್ಯಕ್ತಿವಿಶಿಷ್ಟ ವಾದವನ್ನು ತತ್ವವಾಗಿ ಬೆಳೆಸಿದ ಒಂದು ಸಾಹಿತ್ಯ ಪಂಥ. ಅದಕ್ಕೆ ಸಮೂಹ ಸೃಷ್ಟಿಯಾದ ಜಾನಪದ ಸರಿಯಾಗಿ ಅರ್ಥವಾಗಲಿಲ್ಲ. ರಾಮಾನುಜನ್ ಜಾನಪದವನ್ನು ನವೋದಯದ ರಮ್ಯವಾದಿ ಮತ್ತು ನವ್ಯದ ಉಪೇಕ್ಷವಾದಿ ನೆಲೆಗಿಂತ ಭಿನ್ನವಾದ ನೆಲೆಯಲ್ಲಿ ಗ್ರಹಿಸಿದರು. ಇದಕ್ಕೆ ಅವರ ಕಾಗಕ್ಕ–ಗುಬ್ಬಕ್ಕ ಕತೆಯ ವಿಶ್ಲೇಷಣೆ ಒಳ್ಳೆಯ ನಿದರ್ಶನ.

ತಮಿಳು ಹಿನ್ನೆಲೆಯಿಂದ ಬಂದ ರಾಮಾನುಜನ್ ದಕ್ಷಿಣಭಾರತದ ಪಠ್ಯಗಳನ್ನು ದ್ರಾವಿಡ ಸಂಸ್ಕೃತಿಯ ಭಾಗವಾಗಿ ನೋಡಬಲ್ಲವರಾಗಿದ್ದರು. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಂಸ್ಕೃತ ಪರಂಪರೆಯನ್ನು ಅದರ ಯಜಮಾನಿಕೆ ಪ್ರಜ್ಞೆಯ ಸಮೇತ ತೀನಂಶ್ರೀಯವರು ಕನ್ನಡಕ್ಕೆ ಕಟ್ಟಿಕೊಡುತ್ತಾರೆ; ಮತ್ತೆ ಕೆಲವು ವಿದ್ವಾಂಸರು ಪಶ್ಚಿಮದ ಸಾಹಿತ್ಯ ಚಿಂತಕರನ್ನು ಕನ್ನಡ ಪಠ್ಯಗಳ ಚರ್ಚೆಯಲ್ಲಿ ಯಾಂತ್ರಿಕವಾಗಿ ನುಗ್ಗಿಸುತ್ತಾರೆ. ಈ ಮಾದರಿಗಳಿಗೂ ರಾಮಾನುಜನ್ ತಮಿಳಿನ ಅಗಂ ಪುರಂ ಪರಿಕಲ್ಪನೆಗಳನ್ನು ಕನ್ನಡ ಪಠ್ಯಗಳ ಚರ್ಚೆಯಲ್ಲಿ ತರುವ ಕ್ರಮಕ್ಕೂ ವ್ಯತ್ಯಾಸವಿದೆ. ತೌಲನಿಕ ಸಾಹಿತ್ಯ ವಿಧಾನದಲ್ಲಿ ಆಸಕ್ತಿಯಿದ್ದ ಅವರು (ಇದು ಅವರು ಪ್ರಾಧ್ಯಾಪಕರಾಗಿದ್ದ ಶಿಕಾಗೋ ವಿಶ್ವವಿದ್ಯಾಲಯದ ವಿಭಾಗದ ಆಶಯ ಕೂಡ), ಪಠ್ಯ ಮತ್ತು ಪರಿಕಲ್ಪನೆಗಳನ್ನು ಕೆಲವೊಮ್ಮೆ ಹೆಚ್ಚು ಎಳೆದಾಡುತ್ತಾರೆ ಅನಿಸುವುದುಂಟು. ಆದರೆ ದ್ರಾವಿಡ ಅಸ್ಮಿತೆಯ ಚೌಕಟ್ಟನ್ನು ರೂಪಿಸಿಕೊಂಡು ಅವರು ಪಠ್ಯಗಳನ್ನು ಒಳಗೆ ತರುವ ಕ್ರಮವು, ಸಾಂಸ್ಕೃತಿಕವಾಗಿ ಮಹತ್ವದ್ದಾಗಿದೆ. ಈ ಮೂಲಕ ಭಾರತೀಯ ಸಂಸ್ಕೃತಿಯಲ್ಲಿರುವ ಪರ್ಯಾಯ ಧಾರೆಗಳನ್ನು ಅವರು ಹುಡುಕುತ್ತಾರೆ. ಇದನ್ನು ಭಾರತೀಯ ಸಂಸ್ಕೃತಿಯ ಬಹುತ್ವದ ಹುಡುಕಾಟ ಎಂದು ಕರೆಯಬಹುದು.

**ಕಾವಲು**

ಮೂರನೆಯ
'ಮಾರಣ' (ಮಹಾರಣ)ದ
ಹೊಸ್ತಿಲ ಮೇಲೆ
ನಿಂತಿದೆ ಜಗತ್ತು;
ಸುತ್ತ ಮು(ಮೆ)ತ್ತಿದೆ
ಬುದ್ಧನಾಗಲಿ ಕಾವಲು!!

ಸಿ.ಪಿ.ಕೆ
ಮೈಸೂರು

ರಾಮಾನುಜನ್ ಅವರಿಗೆ ಈ ಬಹುತ್ವವನ್ನು ಭಾರತೀಯರಿಗಿಂತ ಮಿಗಿಲಾಗಿ, ಭಾರತವನ್ನು ಏಕರೂಪಿಯಾಗಿ ಗ್ರಹಿಸುವ ಪಶ್ಚಿಮ ದೇಶಗಳಿಗೂ ಕಾಣಿಸುವ ಉದ್ದೇಶವಿತ್ತು. ಅವರ ಅಧ್ಯಯನ ವಿಧಾನದಲ್ಲೇ ಬಹುತ್ವ ಕಾಣಿಸುವ ಹಾದಿಗಳು ಒಡಮೂಡುತ್ತವೆ. ಪ್ರಾಚೀನ ಸಂಸ್ಕೃತ ಪರಂಪರೆ ಮತ್ತು ಮೇಲ್ಜಾತಿಗಳ ಮೂಲಕ ಭಾರತವನ್ನು ನೋಡುವ ಸಾಂಪ್ರದಾಯಿಕ ಪ್ರವೃತ್ತಿಯನ್ನು ರಾಮಾನುಜನ್ ವಿಶ್ಲೇಷಣೆ ಮತ್ತು ಅನುವಾದಗಳು ತಿದ್ದುಪಡಿ ಮಾಡುತ್ತವೆ. ಭಾರತದ ಕೆಳಸ್ತರದ ಸಮಾಜಗಳಿಗೆ ಸೇರಿದ ಜನರನ್ನು ಕೇವಲ ಮಾನವಶಾಸ್ತ್ರದ ಅಧ್ಯಯನಕ್ಕೆ ಆಕರಗಳಾಗಿ ಮಾಡಿಕೊಂಡಿದ್ದ ಪಶ್ಚಿಮಕ್ಕೆ, ಆ ಸ್ತರದ ಜನರ ಜೀವನದೃಷ್ಟಿ ಮತ್ತು ಸೌಂದರ್ಯತತ್ವವನ್ನು ಒಳಗೊಂಡಿರುವ ಆಕರಗಳನ್ನು ಅವರು ಅನುವಾದಿಸಿ ತೋರಿಸಿದರು. ಇವುಗಳಲ್ಲಿ ವಚನಸಾಹಿತ್ಯ, ತಮಿಳಿನ ಜಾವಳಿ ಸಾಹಿತ್ಯ ಹಾಗೂ ಭಾರತದ ವಿವಿಧ ಭಾಷೆಗಳಲ್ಲಿರುವ ಜನಪದ ಕತೆಗಳು ಮುಖ್ಯವಾಗಿವೆ. ಅವರು ಅನುವಾದಕ್ಕಾಗಿ ಆರಿಸುವ ಜನಪದ ಕತೆಗಳಲ್ಲಿ ಪ್ರಾದೇಶಿಕ ಭಾಷಿಕ ಪ್ರಾತಿನಿಧ್ಯದ ಜತೆಗೆ ಹಲವು ಭಾರತಗಳೂ ಇವೆ. ಭಾರತದ ಮತೀಯವಾದ ಮಂಡಿಸುತ್ತಿರುವ ಏಕರೂಪಿ ಭಾರತದ ಪರಿಕಲ್ಪನೆಯನ್ನು ಮುಖಾಮುಖಿ ಮಾಡಲು ಅಗತ್ಯವಾದ ಬಹುರೂಪಿ ಭಾರತದ ಕಲ್ಪನೆಯಿದು. ಮುನ್ನೂರು ರಾಮಾಯಣವು ಈ ಬಹುರೂಪಿ ಭಾರತವನ್ನು ಶೋಧಿಸುವ ಬಹಳ ಮುಖ್ಯ ಯತ್ನವಾಗಿದೆ. ಈ ಬಹುತ್ವದಲ್ಲಿ ಮುಖ್ಯವಾಗಿ ದಲಿತರ ಶೂದ್ರರ ದ್ರಾವಿಡರ ಮಹಿಳೆಯರ ಬುಡಕಟ್ಟಿನವರ ಸೃಜನಶೀಲತೆಯಿದೆ. ಅವರ 'ಭಾರತೀಯ ಚಿಂತನಾಕ್ರಮ ಒಂದು ಇದೆಯೆ?' ಎಂಬ ಲೇಖನ ಕೂಡ ಇದೇ ಜಿಜ್ಞಾಸೆಯದು. ರಾಮಾನುಜನ್ ಬರೆಹಗಳು ಭಾರತದ ಬಹುತ್ವದ ಸಂಸ್ಕೃತಿಗೆ ಧಾರ್ಮಿಕ ಮೂಲಭೂತವಾದದಿಂದ ಅಪಾಯವಿದೆ ಎಂಬುದನ್ನು ಮೊದಲೇ ಗ್ರಹಿಸಿದಂತೆ ರೂಪುಗೊಂಡಿವೆ. ಯಾವುದೇ ರಾಜಕೀಯ ಘೋಷಿತ ಪೀಠಿಕೆಯಿಲ್ಲದೆ ಅವರು ಸಾಹಿತ್ಯಕ ವಿಶ್ಲೇಷಣೆಗಳ ಮೂಲಕ ಮತೀಯವಾದವು ಮುಂದಿಡುತ್ತಿರುವ ಭಾರತದ ಕಲ್ಪನೆಯನ್ನು ಪ್ರಶ್ನಿಸುತ್ತಾರೆ. ಅವರ ಬರೆಹಗಳ ತಾತ್ವಿಕ ಪರಿಣಾಮವನ್ನು ಮತೀಯವಾದಿಗಳು ಅರಿತಿದ್ದರು. ಎಂತಲೇ ಅವರು ದೆಹಲಿ ವಿಶ್ವವಿದ್ಯಾಲಯದ ಪಠ್ಯಕ್ರಮದಿಂದ ರಾಮಾನುಜನ್‌ರ 'ಮುನ್ನೂರು ರಾಮಾಯಣ'ವನ್ನು ತೆಗೆಸಿಹಾಕಿದರು. ಹಿಂದುತ್ವವಾದವು ಪರಿಭಾವಿಸಿರುವುದಕ್ಕೆ ವಿರುದ್ಧವಾಗಿ ಭಾರತವು ಹಲವು ಧಾರೆಗಳ ಸಂಕರವೆಂದು ರಾಮಾನುಜನ್ ಬರೆಹಗಳು ಪರೋಕ್ಷವಾಗಿ ಧ್ವನಿಸುತ್ತವೆ. ಅಪ್ಪನ ಬ್ರಾಹ್ಮಣಿಕೆ, ಅವನಲ್ಲಿದ್ದ ಯೂರೋಪಿನ ಸೆಳೆತ ಮತ್ತು ಜ್ಯೋತಿಷದ ಆಸಕ್ತಿ, ಪಂಚೆಯ ಮೇಲುಡುತ್ತಿದ್ದ ಕೋಟುಟೈಗಳ ದಿರಿಸುಗಳ ನಡುವಣ ವೈರುಧ್ಯಗಳನ್ನು ಅವರು ಚಿತ್ರಿಸುತ್ತಾರೆ. ಈ ಚಿತ್ರಣದಲ್ಲಿ ಭಾರತವು ಹೊರಗಿನ ಪ್ರಭಾವ ಪ್ರೇರಣೆಗಳನ್ನು ತನ್ನದೇ ಒಳಅಗತ್ಯದಲ್ಲಿ ಜೀರ್ಣಿಸಿಕೊಳ್ಳುವ ವಿಶಿಷ್ಟ ಕ್ರಮವನ್ನು ಕಾಣಿಸುತ್ತಾರೆ. ಮತೀಯವಾದವು ಫ್ಯಾಸಿಸಂ ಆಗಿ



ರೂಪಾಂತರಗೊಂಡಿರುವ ಕಾಲದಲ್ಲಿ ರಾಮಾನುಜನ್ ವಿಶ್ಲೇಷಣೆಗಳು ಬೌದ್ಧಿಕವಾಗಿ ನಮ್ಮ ಗ್ರಹಿಕೆಯನ್ನು ಸೂಕ್ಷ್ಮವಾಗಿ ಕಟ್ಟುವ ಬಗೆ ಅಪೂರ್ವವಾಗಿದೆ.

ದಕ್ಷಿಣ ಭಾರತದ ಸಾಹಿತ್ಯ ಪರಂಪರೆಯು ಹೇಗೆ ಉತ್ತರದ ಮಾರ್ಗ ಮತ್ತು ಸಂಸ್ಕೃತ ಸಾಹಿತ್ಯ ಪರಂಪರೆಗಿಂತ ಭಿನ್ನ ಮತ್ತು ವಿಶಿಷ್ಟ ಎಂಬುದರ ಬಗ್ಗೆ ರಾಮಾನುಜನ್ ಅವರಿಗೆ ಆಸಕ್ತಿ. ಎರಡೂ ಪರಂಪರೆಗಳಲ್ಲಿ ಸಮಾನ ಸಂಗತಿಗಳೂ ವೈರುಧ್ಯಗಳೂ ಇರುವುದರಿಂದ, ಇವುಗಳ ನಡುವೆ ಮುಖಾಮುಖಿ ಮತ್ತು ತೌಲನಿಕ ಅಧ್ಯಯನ ಸಾಧ್ಯ. ಸಾಹಿತ್ಯದಲ್ಲಿರುವ ವಿಶ್ವಾತ್ಮಕ ಗುಣಗಳ ಜತೆಗೆ ಪ್ರತಿ ಪ್ರಾಂತ್ಯಕ್ಕೂ ಇರುವ ಪ್ರಾದೇಶಿಕ ವಿಶಿಷ್ಟತೆ ಗುರುತಿಸುವುದು ಬಹಳ ಅಗತ್ಯ ಎಂದು ಅವರು ಭಾವಿಸುತ್ತಾರೆ. ವಿಶೇಷವೆಂದರೆ, ಭಾರತದ ಪ್ರಾದೇಶಿಕ ಅಸ್ಮಿತೆಗಳನ್ನು ವಿಶ್ಲೇಷಿಸಲು ಅವರು ಪಶ್ಚಿಮದ ಚಿಂತಕರ ಪರಿಕಲ್ಪನೆಗಳನ್ನು, ಮುಖ್ಯವಾಗಿ ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ರೂಪುಗೊಂಡ ವಿಶ್ವಾತ್ಮಕ ಮಾದರಿಗಳನ್ನು ವೈರುಧ್ಯ ಏರ್ಪಡದಂತೆ ಉಪಕರಣಗಳಾಗಿ ಬಳಸುವುದು.

ರಾಮಾನುಜನ್ ತಮ್ಮ ಚಿಂತನೆಯಲ್ಲಿ ಕನ್ನಡವನ್ನೂ ಒಳಗೊಂಡಂತೆ ದಕ್ಷಿಣ ಭಾರತದ ದ್ರಾವಿಡ ಭಿತ್ತಿ, ಉತ್ತರಭಾರತ ಕೇಂದ್ರಿತ ಸಂಸ್ಕೃತದ ಭಿತ್ತಿ ಹಾಗೂ ವಿಶ್ವದ ಭಿತ್ತಿ – ಈ ಮೂರರಲ್ಲಿರುವ ಸಮಾನ ಮತ್ತು ವಿಶಿಷ್ಟ ಅಂಶಗಳನ್ನು ತೌಲನಿಕ ಅಧ್ಯಯನ ಮಾಡುವರು. ಅವರ ಚಿಂತನೆಯಲ್ಲಿ ಶೂದ್ರ–ಬ್ರಾಹ್ಮಣ, ಇಂಗ್ಲಿಷ್–ಕನ್ನಡ, ಪೂರ್ವ–ಪಶ್ಚಿಮ, ಅಕ್ಷರ–ಮೌಖಿಕ, ಸಾಮೂಹಿಕ–ವೈಯಕ್ತಿಕ, ಅಭಿಜಾತ–ಜಾನಪದ, ಕಿರಿಯ–ವಿರಾಟ್, ದೇಶಿ–ಮಾರ್ಗ ಮುಂತಾದ ದ್ವಂದ್ವ ವಿರೋಧಗಳ ಚೌಕಟ್ಟುಗಳು ಬಳಕೆಯಾಗುತ್ತವೆ. ಇವುಗಳ ಒಳಗೆ ನಡೆದಿರುವ ಅನುಸಂಧಾನವನ್ನೂ ಬಲ್ಲವರಾದ್ದರಿಂದ, ಇವನ್ನು ಅವರು ಎಚ್ಚರದಲ್ಲಿ ಬಳಸುತ್ತಾರೆ. ಕಿರು ಪರಂಪರೆ ಹಿರಿ ಪರಂಪರೆಗೆ ಕೊಡುವುದು ಮಾತ್ರವಲ್ಲ, ಅದರಿಂದ ಸ್ವೀಕರಿಸುತ್ತದೆ. ವಿರಾಟ್ ಚೌಕಟ್ಟು ಕಿರುವಿನಿಂದ ಸತ್ವವನ್ನು ಪಡೆಯುವುದರ ಜತೆ, ಕಿರುಪರಂಪರೆಗಳ ಮೂಲಕ ಪ್ರಸರಣಗೊಳ್ಳುತ್ತದೆ – ಕುಮಾರವ್ಯಾಸ ಪಂಪನ ಮೂಲಕ ವ್ಯಾಸ ಮರುಹುಟ್ಟು ಪಡೆಯುವಂತೆ. ಈ ಆದಾನ ಪ್ರದಾನಗಳನ್ನು ಪರಿಶೀಲಿಸುವಾಗ, ರಾಮಾನುಜನ್ ದೇಶಿ, ಜಾನಪದ ಹಾಗೂ ಮೌಖಿಕಗಳನ್ನು ಕೇವಲ ಸ್ವೀಕರಿಸುವ ಅವಸ್ಥೆಯಲ್ಲಿಟ್ಟು ನೋಡುವುದಿಲ್ಲ ಎನ್ನುವುದು ಮುಖ್ಯ.

ತೌಲನಿಕ ವಿಧಾನವು ರಾಮಾನುಜನ್ ಸಾಹಿತ್ಯ ಸಂಸ್ಕೃತಿ ಚಿಂತನೆಯ ಪ್ರಧಾನ ಉಪಕರಣವಾಗಿದೆ. ಅವರ ಬರೆಹಗಳು ಇಂಗ್ಲಿಷ್ ಮತ್ತು ಸಂಸ್ಕೃತ ಸಾಹಿತ್ಯ ಬಲ್ಲ ದೇಶೀ ವಿದ್ವತ್ತೊಂದು ಹೇಗೆ ಉಪಯುಕ್ತವಾಗಿರಬಲ್ಲುದು ಎಂಬುದಕ್ಕೆ ಸಾಕ್ಷಿಯಾಗಿವೆ. ಅವರು ತಮಿಳಿನ ಅಗಂ–ಪುರಂ ಕಾವ್ಯ ಮತ್ತು ಸಂಸ್ಕೃತಿ ಮೀಮಾಂಸೆಯ ಧಾರೆಗಳನ್ನು ಕನ್ನಡ ಜಾನಪದದೊಳಗಿಟ್ಟು ವಿಶ್ಲೇಷಿಸುವರು; ಕನ್ನಗಿಯ ದುರಂತದ ಚರ್ಚೆಯನ್ನು ಕರ್ನಾಟಕದ ಅಂತರಗಟ್ಟೆಮ್ಮೆ ಗಂಡನನ್ನು ಕೊಂದು ತಾನು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಕರಣದಲ್ಲಿಟ್ಟು ; ಜನಪದ ಕತೆಗಳನ್ನು ದಾಸ್ತೊವಸ್ಕಿಯ ಪಕ್ಕವಿಟ್ಟು ; ಹಸೆಯ ಹಾಡುಗಳನ್ನು ಶೇಕ್ಸ್‌ಪಿಯರನ ಜತೆಗಿಟ್ಟು ನೋಡಬಲ್ಲರು. ಗಾಂಧಿ, ಟಾಗೂರ್ ಸುಬ್ರಹ್ಮಣ್ಯ ಭಾರತಿಯವರನ್ನು; ಅಲ್ಲಮ ಕಬೀರ್ ಲಾಲುನ್ ಫಕೀರ್ ಹಾಗೂ ತಮಿಳಿನ ಸಿದ್ಧರನ್ನು ಒಟ್ಟಿಗೆ ಇಟ್ಟು ಚರ್ಚಿಸಬಲ್ಲರು; ಶರಣರ ಕ್ರಾಂತಿಯನ್ನು ಕ್ರೈಸ್ತರ ಪ್ರಾಟೆಸ್ಟಂಟ್ ಚಳುವಳಿಯೊಂದಿಗೆ ಹೋಲಿಸಬಲ್ಲರು. ಹೀಗೆ ಹೋಲಿಸುವಾಗ ಯಾವುದೋ ಒಂದರ ಶ್ರೇಷ್ಠತೆಯನ್ನು ಅವರು ಒಪ್ಪುವುದಿಲ್ಲ. ಕನ್ನಡದಲ್ಲಿ ಪ್ರಾದೇಶಿಕ ಸಾಹಿತ್ಯ ಸಂಸ್ಕೃತಿಗಳನ್ನು ಅಡಿಟಿಪ್ಪಣಿಯಲ್ಲಿಟ್ಟು ರೂಪುಗೊಳ್ಳುವ ತೀನಂಶ್ರೀಯವರ 'ಭಾರತೀಯ ಕಾವ್ಯಮೀಮಾಂಸೆ'ಯ ಅಧಿಕಾರಸ್ಥ ನಿಲುವಿನ ಮಾದರಿಗಳಿವೆ; ತಮಿಳರು ತಮ್ಮನ್ನು ಉತ್ತರದ ಕಾವ್ಯಪರಂಪರೆಯಿಂದ ಭಿನ್ನವಾಗಿ ಗುರುತಿಸಿಕೊಳ್ಳುತ್ತ ಬೆಳೆಸಿಕೊಂಡಿರುವ ದುರಭಿಮಾನದ ಮಾದರಿಗಳಿವೆ; ದಕ್ಷಿಣವನ್ನು ಕುರಿತು ಉತ್ತರದವರು ಇರಿಸಿಕೊಂಡಿರುವ ಶ್ರೇಣೀಕೃತ ದೃಷ್ಟಿಯ ಮಾದರಿಗಳು ಇವೆ. ಇವಕ್ಕೆ ಹೋಲಿಸಿದರೆ, ರಾಮಾನುಜನ್ ಅಖಂಡ ಭಾರತವನ್ನು ಒಂದು ಪರಿಪ್ರೇಕ್ಷ್ಯದಲ್ಲಿ ಗ್ರಹಿಸಿ ಅದರೊಳಗೆ ನಡೆದಿರುವ ಕೊಡುಕೊಳುಗಳನ್ನು ಗ್ರಹಿಸುವ ಮಾದರಿ ಹೆಚ್ಚು ಉಪಯುಕ್ತವಾದುದು. ಅವರಂತೆ ಭಾರತದ ವೈವಿಧ್ಯವನ್ನು ಭಿನ್ನವಾಗಿಯೂ ಸಮನ್ವಯ ಚೌಕಟ್ಟಿನಲ್ಲೂ ನೋಡಿದ ವಿದ್ವಾಂಸರು ಬಹಳ ಕಡಿಮೆ.

ರಾಮಾನುಜನ್ ಚಿಂತನೆಯು ನವ್ಯ ಕಾಲಘಟ್ಟದ ಅನೇಕ ಲೇಖಕರ ಬರೆವಣಿಗೆ ಪ್ರೇರಣೆ ಒದಗಿಸಿದ ಸಂಗತಿಯನ್ನು ಇಲ್ಲಿಯೇ ಚರ್ಚಿಸಬಹುದು. ಕಂಬಾರರ ಹಾಗೂ ಕಾರ್ನಾಡರ ನಾಟಕಗಳ ಹಿಂದೆ ಅವರ ಸೃಜನಶೀಲ ಪ್ರಚೋದನೆಯಿತ್ತು. ಈ ನಾಟಕಕಾರರು ಪಂಪನ 'ದೇಸಿಯೊಳ್ ಪೊಗುವುದು; ಪೊಕ್ಕು ಮಾರ್ಗದೊಳ್ ತಳ್ವುದು' ನಿಲುಮೆಯಂತೆ, ರಾಮಾನುಜನ್ ಪ್ರೇರಣೆಯಲ್ಲಿ ನಾಟಕ ರಚಿಸಿದರು. ಒಂದೆಡೆ ಉತ್ತರ ಕರ್ನಾಟಕದ ಹಳ್ಳಿಯಿಂದ ಬಂದ, ಶೂದ್ರ ಹಿನ್ನೆಲೆಯ, ಕನ್ನಡ ಸಾಹಿತ್ಯ ಮತ್ತು ಜನಪದದ ಕಂಬಾರರಿದ್ದರು; ಇನ್ನೊಂದೆಡೆ ಮೇಲ್ಜಾತಿಯಿಂದಲೂ ದಕ್ಷಿಣ ಕರ್ನಾಟಕದಿಂದಲೂ ಬಂದಿದ್ದ ಸಂಸ್ಕೃತ, ಆಂಗ್ಲ, ತಮಿಳು ಸಾಹಿತ್ಯ ಪರಂಪರೆಗಳ ಹಿನ್ನೆಲೆಯಿದ್ದ, ನಗರಗಳಲ್ಲಿ ಹುಟ್ಟಿಬೆಳೆದ ರಾಮಾನುಜನ್ ಇದ್ದರು. ಜನಪದದ ವ್ಯಾಖ್ಯಾನ ಪ್ರತಿಭೆಯೊಂದು ಬರೆಹದ ವಸ್ತುವನ್ನು ಅದರ ವಿಶಿಷ್ಟತೆಯಲ್ಲಿ ಗುರುತಿಸುತ್ತದೆ; ಜನಪದ ಸೃಷ್ಟಿಶೀಲ ಪ್ರತಿಭೆಯೊಂದು ಅದನ್ನು ಹೊಸ ದರ್ಶನದಲ್ಲಿ ಮರುಸೃಷ್ಟಿಸುತ್ತದೆ. ಕಂಬಾರರು ಸಮೂಹಪ್ರಜ್ಞೆಯ ಸಡಿಲರಚನೆಯಾದ ಜಾನಪದದಿಂದ ವ್ಯಕ್ತಿಪ್ರಜ್ಞೆಯ ನವ್ಯಕ್ಕೆ ಈ ವಸ್ತುವನ್ನು ಪಳಗಿಸಿದರು; ವ್ಯಕ್ತಿಪ್ರಜ್ಞೆಯ ನವ್ಯಲೇಖಕರಾದ ರಾಮಾನುಜನ್ ಸಮೂಹ ಸೃಷ್ಟಿಯಾದ ಜಾನಪದ ಅಧ್ಯಯನಕ್ಕೆ ತೆರಳಿದರು. ಕನ್ನಡ ಸಾಹಿತ್ಯಲೋಕದಲ್ಲಿ ಇದೊಂದು ಅಪೂರ್ವ ಪ್ರಯೋಗದಂತಿದೆ. ಯಾವುದೇ ಪಂಥವನ್ನು ಏಕರೂಪಿಯಾಗಿ ಗ್ರಹಿಸುವುದು ತಪ್ಪಾಗುತ್ತದೆ ಎಂಬ ದಿಟವನ್ನು ಈ ಇಬ್ಬರು ಲೇಖಕರ ವಿಶ್ಲೇಷಣ ಮತ್ತು ಸಂಶ್ಲೇಷಣ ಪ್ರತಿಭೆಗಳ ಕೊಡುಕೊಳೆ ಸೂಚಿಸುತ್ತದೆ. ಇಂತಹ ಜಟಿಲ ಮುಖಾಮುಖಿಯಿಲ್ಲದ ಕಾರಣದಿಂದಲೇ ಜಾನಪದದಲ್ಲಿ ಆಳವಾಗಿ ಬೇರುಬಿಟ್ಟಿದ್ದರೂ ಚೆನ್ನಣ್ಣ ವಾಲೀಕಾರ, ಬೆಟಗೇರಿ ಕೃಷ್ಣಶರ್ಮ, ಸಿಂಪಿಲಿಂಗಣ್ಣ ಅವರ ಸಾಹಿತ್ಯವು ದೊಡ್ಡದನ್ನು ಸೃಷ್ಟಿಸಲು ಸಾಧ್ಯವಾಗಲಿಲ್ಲ; ಜಾನಪದ ಲೋಕಗಳ ಜತೆ ಆಪ್ತ ಒಡನಾಟವಿಲ್ಲದ ಜಿ. ಎಚ್. ನಾಯಕ, ಎಂ. ಜಿ. ಕೃಷ್ಣಮೂರ್ತಿ ಮುಂತಾದವರ ಸಾಹಿತ್ಯ ಪರಂಪರೆಯ ವಿಶ್ಲೇಷಣೆಗಳು ಯಾವುದೊ ಸಾಂಸ್ಕೃತಿಕ ಪರಿಪ್ರೇಕ್ಷ್ಯದ ಕೊರತೆಯಿದೆ ಅನಿಸುತ್ತದೆ. ಕಸಿತನ ಹಾಗೂ ಸಂಕರದ ಸಂಘರ್ಷಾತ್ಮಕ ಅನುಸಂಧಾನದಲ್ಲಿ ಕ್ರಿಯೇಟಿವಿಟಿ ಇದೆಯೆಂದು ರಾಮಾನುಜನ್ ಸದಾ ನಂಬಿದ್ದರು. ಈ ಅರ್ಥದಲ್ಲಿ ಅವರು ಪೂರ್ವ–ಪಶ್ಚಿಮಗಳ ಕೊಂಡಿ ಮಾತ್ರವಲ್ಲ. ತದ್ವಿರುದ್ಧ ಸ್ವಭಾವವುಳ್ಳವರಾಗಿದ್ದ ಅಪ್ಪ ಅಮ್ಮಂದಿರ ನಡುವಿನ, ಜಾನಪದ–ಶಿಷ್ಟಗಳ ನಡುವಿನ, ಉತ್ತರ ಮತ್ತು ದಕ್ಷಿಣ ಕರ್ನಾಟಕಗಳ ಮಧ್ಯದ ಅರ್ಥಪೂರ್ಣ ಸೇತು ಕೂಡ. ಒಟ್ಟಿಗೆ ಇರುವ ವೈರುಧ್ಯಗಳನ್ನು ಗಮನಿಸುವ ಮತ್ತು ಅವುಗಳ ನಡುವಣ ಸಂಘರ್ಷಗಳನ್ನು ಅರ್ಥೈಸುವ ಕಷ್ಟದಲ್ಲಿ ಅವರ ಚಿಂತನೆಯ ವೈಧಾನಿಕತೆ ರೂಪುಗೊಂಡಿತು.

ರಾಮಾನುಜನ್ ತಳಲೋಕದಲ್ಲಿರುವ ಬಹುತ್ವವನ್ನು ಶೋಧಿಸುವಾಗ, ಬಹುತ್ವಕ್ಕೂ ಸಂಕರಕ್ಕೂ ಇರುವ ಒಳನಂಟನ್ನು ಎಂದೂ ಮರೆಯುವುದಿಲ್ಲ. ಸಂಕರ ಲೋಕಗಳಲ್ಲಿರುವ ಕಸುವನ್ನು ಶೈಕ್ಷಣಿಕವಾಗಿ ವಿಶ್ಲೇಷಿಸುತ್ತಲೇ ಅವುಗಳ ರಾಜಕೀಯವಾಗಿ ಸಾಂಸ್ಕೃತಿಕ ಮಹತ್ವವನ್ನು ಸೂಕ್ಷ್ಮವಾಗಿ ಅವರು ಕಾಣಿಸುತ್ತಾರೆ. ಇದಕ್ಕೆ ಒಂದು ಕಾರಣ, ಅವರು ವಿಶ್ಲೇಷಣೆಗೆ ಆಯ್ಕೆ ಮಾಡಿಕೊಳ್ಳುವ ಆಕರಗಳು ಹಾಗೂ ಅವುಗಳ ವಿಶ್ಲೇಷಣೆಗೆ ಅನುಸರಿಸುವ ಆಕೃತಿನಿಷ್ಠ ವಿಧಾನ. ಹೂ ಬಿಡುವ

ಮರ ಮತ್ತು ದೀಪದ ಮಲ್ಲಿ ಕತೆಗಳ ಮೇಲಿನ ವಿಶ್ಲೇಷಣೆಗಳು ರಾಮಾನುಜನ್ನರ ಬೌದ್ಧಿಕ ಪ್ರತಿಭೆಗೆ ಸಾಂಸ್ಕೃತಿಕ ಸೂಕ್ಷ್ಮತೆಗೂ ಅತ್ಯುತ್ತಮ ಸಾಕ್ಷಿಯಾಗಿವೆ. ಭಾರತದ ಭಕ್ತಿ ಕವಿಗಳನ್ನು ಅದರಲ್ಲೂ ಸಂತ ಸ್ತ್ರೀಯರನ್ನು ಕುರಿತ ಅವರ ವಿಶ್ಲೇಷಣೆ ಅತ್ಯಂತ ಉಜ್ವಲವಾಗಿದೆ. ಅವರ ಲೇಖನಗಳಲ್ಲಿ ಅತಿವಿಶ್ಲೇಷಣೆಯ ಮಿತಿಗಳಿವೆ; ಅರ್ಥ ಸಾಧ್ಯತೆ ಹುಡುಕುವ ನಮ್ರತೆಯಲ್ಲಿ ಖಚಿತ ನಿಲುವಿಗೆ ಬರಲಾಗದ ಹಿಂಜರಿಕೆ ಗಳಿವೆ. ಜಗತ್ತಿನ ಎಲ್ಲ ಕೃತಿಗಳಲ್ಲಿ ಸಮಾನವಾಗಿರುವ ತುಡಿತಗಳನ್ನು ಹುಡುಕುವ ಸಾರ್ವತ್ರೀಕರಣದ ಸಮಸ್ಯೆಯಿದೆ. ಆದರೆ ಮಾನವಶಾಸ್ತ್ರೀಯ ತರಬೇತಿ ಪಡೆದ ವಿದ್ವಾಂಸರಲ್ಲಿ ಸಾಮಾನ್ಯವಾಗಿ ಕಾಣಸಿಗದ ಸಾಹಿತ್ಯದ ಸೆನ್ಸಿಬಿಲಿಟಿಯೂ ಇದೆ. ಜಾನಪದವನ್ನು ನವ್ಯದ ಕೆಲವು ವಿಮರ್ಶಕರ ಹಾಗೆ ಕೇವಲ ಸಾಹಿತ್ಯಕ ಚೌಕಟ್ಟಿನಲ್ಲಿಟ್ಟು ನೋಡದೆ, ಅವರು ಅದು ಸಾಂಸ್ಕೃತಿಕ ವಿಸ್ತರಣೆ ಪಡೆಯುವಂತೆ ಚರ್ಚಿಸುವರು. ಆ ಚರ್ಚೆ ಸಮುದಾಯದ ಚಿಂತನಾಕ್ರಮದ ಸಾವಯವ ಭಾಗವಾಗಿ ಬೆಳೆಯುವಂತೆ ನೋಡಿಕೊಳ್ಳುವರು. ಅವರ ಜಾನಪದ ಲೇಖನಗಳನ್ನು ನೋಡುವಾಗ, ಮಂಟೆಸ್ವಾಮಿ, ಮಾದೇಶ್ವರ ಕಾವ್ಯಗಳು, ಹರದೇಶಿ–ನಾಗೇಶಿ ತರಹದ ವಿಶಿಷ್ಟ ಹಾಡುಪರಂಪರೆಗಳು ಅವರ ವಿಶ್ಲೇಷಣೆಯಿಂದ ವಂಚಿತವಾದವೇನೊ ಎಂದು ಹಳಹಳಿಕೆ ಹುಟ್ಟುತ್ತದೆ. ಅವರ ವಿಶ್ಲೇಷಣೆಯಲ್ಲಿ ಅರ್ಥಶೋಧದ ಅಬ್ಬರವಿಲ್ಲ. ಸಾಹಿತ್ಯಕ ಸಂವೇದನೆ, ವಿಶ್ಲೇಷಣ ಪ್ರತಿಭೆ ಹಾಗೂ ಬಹುಭಾಷಿಕ ಪಾಂಡಿತ್ಯ ಅವರ ವಿದ್ವತ್ತಿನ ಗುಣಗಳು. ರೂಪನಿಷ್ಠ ಬರೆಹದ ಬಗೆಗಿರುವ ಸೆಳೆತಕ್ಕೆ ತಕ್ಕಂತೆ ಅವರು ಸಂಕ್ಷಿಪ್ತವೂ ಧ್ವನಿಪೂರ್ಣವೂ ಆದ ಗಾದೆಗಳನ್ನು ಅಧ್ಯಯನಕ್ಕೆ ಆರಿಸಿಕೊಂಡರು. ತಮ್ಮ ಸಾಹಿತ್ಯದ ವಿಶ್ಲೇಷಣೆಗಳಲ್ಲಿ ಭಾಷಾವಿಜ್ಞಾನ ಹಾಗೂ ಮಾನವವಿಜ್ಞಾನದ ತಿಳಿವನ್ನು ಅವರು ಸೃಜನಶೀಲವಾಗಿ ಬಳಸಿದರು. ಸಾಹಿತ್ಯದ ಅಧ್ಯಾಪಕನಾಗಿ ಮತ್ತು ಸ್ವತಃ ಕವಿಯಾಗಿ ಸಾಹಿತ್ಯಕ ಸಂವೇದನೆಯನ್ನು ಅವರು ಕಡೆಗಣಿಸುವುದಿಲ್ಲ. ಅವರ ಬರೆಹಗಳಲ್ಲಿ ಕ್ಷೇತ್ರಕಾರ್ಯದ ಹಾಗೂ ಆತ್ಮಕಥನದ ಎಳೆಗಳೂ ಅರ್ಥಪೂರ್ಣವಾಗಿ ಹಾದು ಬಂದು ಸೇರಿಕೊಳ್ಳುತ್ತವೆ. ಅವರ ಇಡೀ ವಿದ್ವತ್ತೇ ಅವರ ಸೃಜನಶೀಲತೆಯ ವಿಸ್ತರಣೆಯಂತಿದೆ. ಸಾಹಿತ್ಯ ಕೃತಿಯನ್ನು ರಾಮಾನುಜನ್ ಬಹು ಆಕರಗಳಲ್ಲಿ ಮತ್ತು ಬಹುಥೀಮುಗಳಲ್ಲಿ ಪ್ರವೇಶಿಸಿ ನೋಡುವುದಕ್ಕೆ ಕೋಪಿಷ್ಟ ದೇವತೆ ಕತೆಯ ವಿಶ್ಲೇಷಣೆ ಉತ್ತಮ ಪುರಾವೆಯಂತಿದೆ. ಅವರ ವಿಶ್ಲೇಷಣೆಗಳಲ್ಲಿ ಸಾಮಾಜಿಕ ತರತಮಗಳನ್ನು ಖಂಡಿಸುವ ಮೌಲ್ಯಪ್ರಜ್ಞೆಯ ಎಚ್ಚರವಿದೆ. ಬಂಡುಕೋರ ಪ್ರತಿಸಂಸ್ಕೃತಿ ಹುಡುಕುವ ಕಾಳಜಿಯಿದೆ. ಸ್ವರ್ಗದಲ್ಲಿ ಮಾದಿಗರಿಲ್ಲ ಎನ್ನುವುದು ಜೀವವಿರೋಧಿ ಜನಪದ ಎಂದು ಅವರು ನಿಷ್ಠುರವಾಗಿ ಹೇಳಬಲ್ಲರು. ಆದರೂ ಜಾನಪದದಲ್ಲಿರುವ ಪ್ರತಿಗಾಮಿ ಅಂಶಗಳನ್ನು ಅವರು ಹೆಚ್ಚು ತೋರಿಸಲು ಹೋಗುವುದಿಲ್ಲ ಎನ್ನಬಹುದು.

ಅಲ್ಲಮನನ್ನು ಕುರಿತು ಬರೆಯುತ್ತ, ಆತ ತಾನೊಮ್ಮೆ ಕಂಬಳಿ ಹುಳುವಾಗಿದ್ದೆ ಅನ್ನುವುದನ್ನೇ ಮರೆತಿರುವ ಚಿಟ್ಟೆಯಂತೆ ಎಂದು ರಾಮಾನುಜನ್ ಹೇಳುವುದುಂಟು. ಆದರೆ ಸಂಸ್ಕೃತಿ ತತ್ವಶಾಸ್ತ್ರ ಭಾಷಾಶಾಸ್ತ್ರದ ಚರ್ಚೆಗೆ ಪ್ರವೇಶಿಸುವಾಗ ತಾನು ಸಾಹಿತ್ಯ ವಿದ್ಯಾರ್ಥಿಯಾಗಿದ್ದನ್ನು ಮರೆಯುವುದಿಲ್ಲ. ಅವಸ್ಥೆಗಳನ್ನು ದಾಟುವ ಕ್ರಮದಲ್ಲಿರುವ ಈ ರೂಪಾಂತರವು ಅವರ ಇಡೀ ಬರೆಹವನ್ನು ವ್ಯಾಪಿಸಿಕೊಂಡಿದೆ. ಅವರ ವಿದ್ವತ್ತು ಸಂಸ್ಕೃತ ಇಂಗ್ಲಿಷ್‌ಗಳ ಅಧಿಕಾರಸ್ಥ ಭಾಷೆಗಳ ನೆಲೆಯಿಂದ ತಮಿಳು ಕನ್ನಡದಂತಹ ಜನಭಾಷೆಗಳತ್ತ ಚಲಿಸುತ್ತದೆ; ಅದರ ತುಡಿತ ಅಪ್ಪನ ನೆಲೆಯಿಂದ ಅಮ್ಮನ ನೆಲೆಗೆ ಸರಿಯುತ್ತದೆ; ಗಾದೆ ಕುರಿತ ಕಿರುಪುಸ್ತಕದಿಂದ (೧೯೫೬) ಆರಂಭಗೊಂಡು ಮುನ್ನೂರು ರಾಮಾಯಣಗಳ ತನಕ ಬೆಳೆಯುತ್ತದೆ; ಬೌದ್ಧಿಕ ಪಯಣವು ಲಿಂಗರಾಜ ಕಾಲೇಜಿನಲ್ಲಿದ್ದಾಗ ಉತ್ತರ ಕರ್ನಾಟಕದ ಜಾನಪದ ಅಧ್ಯಯನದಿಂದ ಶುರುವಾಯಿತು; ಕಡೆಗದು ಶಿಕಾಗೊ ವಿಶ್ವವಿದ್ಯಾಲಯದಲ್ಲಿ ಕೊನೆಮುಟ್ಟಿತು. ಈ ನಡುವೆ ಅವರು ಭಾರತಕ್ಕೂ ಕರ್ನಾಟಕಕ್ಕೂ ಬಂದುಹೋಗಲು ಮಾಡಿದ ಪಯಣಗಳು ಅವರ ಬರೆಹದ ವಸ್ತು ಮತ್ತು ವೈಧಾನಿಕತೆಯನ್ನೂ ನಿರ್ಧರಿಸಿದವು. ಅವರ ಬರೆಹವು ಅವರ ವಿಶ್ವಾತ್ಮಕ ತಿರುಗಾಟ ಹಾಗೂ ನೋಟಕ್ರಮದ ಫಲವಾಗಿದೆ.

ರಾಮಾನುಜನ್ ಮೂಲತಃ ಆಂಗ್ಲಭಾಷೆಯಲ್ಲಿ ಪಶ್ಚಿಮದ ಓದುಗರಿಗಾಗಿಯೇ ತಮ್ಮ ಸಾಹಿತ್ಯಕ ವಿಶ್ಲೇಷಣೆಗಳನ್ನು ಮಾಡಿದವರು. ಅವರ ಸಾಮಾಜಿಕ ಭಾಷಿಕ ಹಿನ್ನೆಲೆಗಳು ಮಾತ್ರವಲ್ಲ, ಅವರ ಉದ್ದೇಶಿತ ಓದುಗರು, ಬರೆಹಕ್ಕೆ ಆರಿಸಿಕೊಂಡ ಭಾಷಿಕ ಮಾಧ್ಯಮ, ಸಾಂಸ್ಥಿಕ ಒತ್ತಡ ಹಾಗೂ ಬರೆಯುವ ಚಾರಿತ್ರಿಕ ಸಂದರ್ಭಗಳು ಕೂಡ ಬರೆಹದ ತಾತ್ವಿಕತೆಯನ್ನು ನಿರ್ಧರಿಸಿದವು. ಸಮಸ್ಯೆಯೆಂದರೆ, ಭಾರತೀಯ ವಿದ್ವಾಂಸರು ಪಶ್ಚಿಮಕ್ಕೆ ಭಾರತವನ್ನು ಅರ್ಥಮಾಡಿಸುವ ಉದ್ದೇಶದಲ್ಲಿ ಬರೆಯುವಾಗ ವಿಮರ್ಶಾತ್ಮಕ ಗುಣ ಕ್ಷೀಣವಾಗುತ್ತದೆ; ಪ್ರಾದೇಶಿಕ ಭಾಷೆಗಳಲ್ಲಿ ಸ್ಥಳೀಯ ವಾಚಕರಿಗೆ ಬರೆಯುವಾಗ ಸ್ವವಿಮರ್ಶೆಯ ಆಯಾಮ ಹೆಚ್ಚಿರುತ್ತದೆ. ಈ ದೃಷ್ಟಿಯಿಂದ ರಾಮಾನುಜನ್‌ರ ಕನ್ನಡ ಮತ್ತು ಇಂಗ್ಲಿಷ್ ಬರೆಹಗಳ ನಡುವಿನ ವ್ಯತ್ಯಾಸಗಳು ಕುತೂಹಲಕರವಾಗಿವೆ. ಅವರು ಬರೆಯುತ್ತಿದ್ದ ಕಾಲದಲ್ಲಿ ಜ್ಞಾನ ಮತ್ತು ಅಧಿಕಾರದ ಸಂಬಂಧಗಳನ್ನು ಜಗತ್ತಿನ ಮಿಲಿಟರಿ ಶಕ್ತಿಯಾಗಿದ್ದ ಅಮೆರಿಕವು ನಿರ್ವಚಿಸುತ್ತಿತ್ತು. ಈ ಸನ್ನಿವೇಶವೂ ಅವರ ಬರೆಹದ ದೃಷ್ಟಿಕೋನವನ್ನು ಪ್ರಭಾವಿಸಿರಬಹುದು. ಈ ಎಲ್ಲ ಒತ್ತಡಗಳ ಒಳಗೆ ಅವರ ಚಿಂತನೆಯಲ್ಲಿ ಯೂರೋಪಿನ ಅಧಿಕಾರಸ್ಥ ಜ್ಞಾನಕ್ಕೆ ಉತ್ತರಿಸುವ ಗುಣವೊಂದು ಸುಪ್ತವಾಗಿದೆ. ಸ್ವದೇಶದ ಗತವೈಭವವಾದಿಗಳು ಹಾಗೂ ಕೆಲವು ವಿದೇಶದ ಇಂಡಾಲಜಿಸ್ಟರು ಭಾರತದ ಉಚ್ಚಜಾತಿಯ ಸಂಸ್ಕೃತಿಯ ಪರಿಕರಗಳನ್ನೆ ಭಾರತವೆಂದು ವಿಶ್ವದೆದುರು ಮಂಡಿಸಿದ, ಈಗಲೂ ಮಂಡಿಸುತ್ತಿರುವ ನೂರಾರು ಮಾದರಿಗಳಿವೆ. ಆ ಮಾದರಿಗಳಿಗೆ ಹೋಲಿಸಿದರೆ, ಭಾರತವನ್ನು ಅದರ ತಳಲೋಕದ, ಸಂಕರದ, ಬಹುತ್ವಗಳ ಮೂಲಕ ರಾಮಾನುಜನ್ ಕಾಣಿಸುವುದು ಸಾಂಸ್ಕೃತಿಕವಾಗಿ ವ್ಯತ್ಯಾಸವುಳ್ಳದ್ದು ಮತ್ತು ಮಹತ್ವದ್ದು. ಭಾರತವನ್ನು ರಾಜಕೀಯವಾಗಿ ಸಾಂಸ್ಕೃತಿಕವಾಗಿ ಫ್ಯಾಸಿಸಂ ಆವರಿಸಿಕೊಳ್ಳುತ್ತಿರುವ ದಿನಗಳಲ್ಲಿ, ಅದನ್ನು ಮುಖಾಮುಖಿ ಮಾಡಲು ಯತ್ನಿಸಿದ ಚಿಂತಕರು ವಿದ್ವಾಂಸರು ಕೊಲೆಗೀಡಾಗುತ್ತಿರುವ ಸಂದರ್ಭದಲ್ಲಿ ರಾಮಾನುಜನ್ ಅವರ ಓದು ಬಹಳ ಅಗತ್ಯವಾಗಿದೆ.

ಡಾ॥ ರಹಮತ್ ತರೀಕೆರೆ
ಎಂ. ಪಿ. ಪ್ರಕಾಶ ನಗರ, ಹೊಸಪೇಟೆ – ೫೮೩ ೨೦೧, ಬಳ್ಳಾರಿ ಜಿಲ್ಲೆ



ನನ್ನ ಮಗ

ಎಂಥಾ ಕಾಲವೆಂದರೆ
[illegible]
[illegible]
[illegible]
ಯುದ್ಧವನು ಮಾಡಿ
[illegible]

# ಜಾಗತೀಕರಣದಿಂದಾಗಿ ಕೃಷಿಕರ ಸಮಸ್ಯೆಗಳು: ಅವಲೋಕನ

**ಶಂಕರ ಆರ್.**
**ಡಾ|| ಬಿ. ಆರ್. ವಿಜಯೇಂದ್ರ**

ಕೃಷಿಯು ನಮ್ಮ ಜನಪದರಿಗೆ ಸಂಸ್ಕೃತಿಯಾಗಿತ್ತು. ಅದು ಮನುಷ್ಯನ ಬದುಕಿಗೆ ಮಾತ್ರ ಸೀಮಿತವಾಗಿದ್ದ ಕಸುಬಾಗಿರಲಿಲ್ಲ. ನಿಸರ್ಗದ ಧರ್ಮವನ್ನು ಆಧರಿಸಿ ನಡೆದುಕೊಂಡು ಬಂದ ಕಾಯಕವಾಗಿತ್ತು. ಆದ್ದರಿಂದಲೇ ಸಾವಿರಾರು ವರ್ಷಗಳಿಂದ ಕೃಷಿಯನ್ನು ಜೀವನ ಧರ್ಮವಾಗಿಸಿಕೊಂಡ ನಮ್ಮ ಜನರಿಗೆ ಕೃಷಿಯು ನೆಲ, ಜಲ ಮೂಲದ ವಿಜ್ಞಾನವಾಗಿತ್ತು. ಆದರೆ ಜಾಗತೀಕರಣವು ಭಾರತದ ಆರ್ಥಿಕತೆಗೆ ೧೯೯೧ರಲ್ಲಿ ಕಾಲಿಟ್ಟ ನಂತರದ ದಿನಗಳಲ್ಲಿ ಕೃಷಿಯ ಕ್ಷೇತ್ರವನ್ನು ಪಸರಿಸಿದೆ. ಜಾಗತೀಕರಣ ಎಂದರೆ 'ವಿಶ್ವವೇ ಒಂದು ಗ್ರಾಮವಾಗಿ ನೋಡುವುದು ಮತ್ತು ಗಡಿ ಮುಕ್ತವಾಗಿ ಬಹುರಾಷ್ಟ್ರೀಯ ಕಂಪನಿಗಳಿಗೆ ವ್ಯಾಪಾರ ವಹಿವಾಟಿಗೆ ಅನುಮತಿ ನೀಡುವುದು' ಆಗಿರುತ್ತದೆ.

ಆರ್. ಎಸ್. ಬಾಗ್ಸ್‌ರವರ ಪ್ರಕಾರ "ಸಂಘಟಿತ ಕಾರ್ಮಿಕ ವರ್ಗವನ್ನು ಸಮಾಪ್ತಿಗೊಳಿಸಲು ಹೂಡಿರುವ ಹುನ್ನಾರವೇ ಜಾಗತೀಕರಣ."

ಫಿಡೆಲ್ ಕ್ಯಾಸ್ಟ್ರೋ ಅವರು ಜಾಗತೀಕರಣದ ಪರಿಣಾಮದ ಬಗ್ಗೆ, "ಮನುಕುಲದ ಮೇಲೆ ಎರಡನೇ ಮಹಾಯುದ್ಧ ಎಸಗಿದ ಹಿಂಸೆಗಿಂತಲೂ ಕ್ರೂರವಾದುದಾಗಿದೆ ಈ ಬಂಡವಾಳಶಾಹಿಯ ಹಿಂಸೆಯ ಸ್ವರೂಪ" ಎಂದು ಇದರ ಕರಾಳ ಮುಖವನ್ನು ಚಿತ್ರಿಸಿದ್ದಾರೆ.

ಜಾಗತೀಕರಣವು ಹೇಗೆ ಕಟ್ಟಕಡೆಯ ಗ್ರಾಮವನ್ನೂ ತಲುಪಿದೆ ಎಂಬುದನ್ನು ತಿಳಿಯಲು ಕೊಳ್ಳೇಗಾಲ ತಾಲೂಕಿನ ಶಾಗ್ಯ ಮತ್ತು ಒಡೆಯರಪಾಳ್ಯ ಎಂಬ ಎರಡು ಗ್ರಾಮಗಳನ್ನು ನಮ್ಮ ಅಧ್ಯಯನಕ್ಕೆ ಒಳಪಡಿಸಿರುತ್ತೇನೆ. ಈ ಎರಡು ಗ್ರಾಮಗಳಲ್ಲಿಯೂ ವಲಸೆ ಪ್ರಧಾನವಾಗಿದೆ. ಅಲ್ಲದೆ, ಎರಡೂ ಗ್ರಾಮಗಳು ಮಲೆನಾಡು ಪ್ರದೇಶವಾಗಿದ್ದರೂ, ಹವಾಮಾನ, ನೀರಾವರಿ ವ್ಯವಸ್ಥೆ, ಬೆಳೆಗಳು ಇತ್ಯಾದಿಗಳಲ್ಲಿ ಭಿನ್ನತೆ ಕಂಡುಬರುತ್ತದೆ. ಇವು ಕೊಳ್ಳೇಗಾಲ ತಾಲೂಕಿನ ಆಗ್ನೇಯ ಮತ್ತು ಈಶಾನ್ಯ ದಿಕ್ಕಿನ ಗ್ರಾಮಗಳಾಗಿದ್ದು, ಇಲ್ಲಿ ಜಾಗತೀಕರಣವು ಹೇಗೆ ಕೃಷಿಯಲ್ಲಿ ಸಮಸ್ಯೆಗಳನ್ನು ತಂದೊಡ್ಡಿದೆ ಎಂಬುದನ್ನು ಕೆಳಗಿನ ಅಂಶಗಳ ಅಧ್ಯಯನದಿಂದ ತಿಳಿಯಬಹುದಾಗಿದೆ:

**ನೀರಾವರಿ ಸೌಲಭ್ಯಗಳ ಕೊರತೆ**

ಭಾರತದಲ್ಲಿ ಹಲವಾರು ನದಿಗಳು ಹರಿದರೂ ಸಹ ಇನ್ನೂ ಸಂಪೂರ್ಣವಾಗಿ ನದಿ ನೀರನ್ನು ವ್ಯವಸಾಯಕ್ಕೆ ಯೋಗ್ಯ ರೀತಿಯಲ್ಲಿ ಬಳಸಲಾಗಿಲ್ಲ. ಇಂದಿಗೂ ಸುಮಾರು ಶೇಕಡ ೫೦ರಷ್ಟು ಸಾಗುವಳಿ ಜಮೀನು ನೀರಿಗಾಗಿ ಮಳೆಯನ್ನೇ ಆಶ್ರಯಿಸಿದೆ. ಕೇವಲ ಶೇಕಡ ೪೫ರಷ್ಟು ಜಮೀನುಗಳಿಗೆ ಮಾತ್ರ ಕೃತಕ ನೀರಾವರಿ ಸೌಲಭ್ಯಗಳು ದೊರೆತಿವೆ. ಅಧಿಕ ಪ್ರಮಾಣದ ಜನರು ಮಳೆಯಾಶ್ರಿತ ಭೂ ಮಾದರಿಯನ್ನು ಹೊಂದಿರುವುದರಿಂದ ಮಳೆಯ ಅಭಾವ ಉಂಟಾದಾಗ ಇಳುವರಿ ಮತ್ತು ಬೆಳೆಯ ಪ್ರಮಾಣದಲ್ಲಿ ಅಗಾಧ ವ್ಯತ್ಯಾಸ ಉಂಟಾಗಿ ರೈತ ಸಂಕಷ್ಟದ ಹಾದಿ ತಲುಪುತ್ತಾನೆ. ಅತಿವೃಷ್ಟಿಯಾದಾಗ ಬೆಳೆದ ಬೆಳೆಯನ್ನು ನದಿ, ಹಳ್ಳ-ಕೊಳ್ಳಗಳ ನೀರು ಕೊಚ್ಚಿಕೊಂಡು ಹೋಗಿರುವುದನ್ನು ಇಲ್ಲಿ ಸ್ಮರಿಸಬಹುದು. ಭೀಮಾ ನದಿಯ ಸುತ್ತಮುತ್ತಲ ಪ್ರದೇಶಗಳಲ್ಲಿ ಅತಿವೃಷ್ಟಿಯಾದಾಗ ಉತ್ತರ ಕರ್ನಾಟಕ ಭಾಗಕ್ಕೆ ಭೀಮಾ ನದಿಯ ನೀರು ನುಗ್ಗಿ ಬೆಳೆ ಕೊಚ್ಚಿಹೋಗಿರುವುದು ತಿಳಿದ ವಿಷಯವಾಗಿದೆ.

ಕರ್ನಾಟಕವು ೨೦೧೭ರಲ್ಲಿ ಬರ ಎದುರಿಸಿದರೆ ಶಾಗ್ಯ ಗ್ರಾಮವು ೨೦೧೪ ಮತ್ತು ೨೦೧೭ರಲ್ಲಿ ಬರ ಎದುರಿಸಿದೆ. ೨೦೧೪ರ ಇಸವಿಯಲ್ಲಿ ಅನಿಶ್ಚಿತ ಮಳೆಯಿಂದಾಗಿ, ಗ್ರಾಮದಲ್ಲಿನ ಬಹುತೇಕ ತೆಂಗಿನ ಮರಗಳು ಒಣಗಿ ನಿಂತವು. ಇದಲ್ಲದೆ, ಬಾವಿ ನೀರಾವರಿಯನ್ನು ಆಶ್ರಯಿಸಿದ್ದ ತೋಟಗಾರರು ದಿಗ್ಭ್ರಾಂತರಾದರು. ಕಾರಣ ಎಂದೂ ಬತ್ತದ ಬಾವಿಗಳು ೨೦೧೪ರಲ್ಲಿ ಪ್ರಥಮ ಬಾರಿಗೆ ಬತ್ತಿಹೋದವು. ಇಂತಹ ಸಂದರ್ಭದಲ್ಲಿ ತಾಳ್ಮೆಯಿಂದಿರದ ರೈತ ನೀರಿನ ಆಸೆಗಾಗಿ ಕೊಳವೆಬಾವಿ ಕೊರೆಸಿ ಕೈ ಸುಟ್ಟುಕೊಂಡ. ಕೊಳವೆಬಾವಿ ಕೊರೆಸಿದ ಕಾರಣದಿಂದಾಗಿ ಬಾವಿಗಳಲ್ಲಿ ಸಂಪೂರ್ಣ ಜಲ ಬತ್ತಿಹೋಯಿತು. ಇದು ಭಾರತದ 'ಕೃಷಿಯು ಮಳೆಯೊಡನೆ ಆಡುವ ಜೂಜಾಟ' ಎಂಬ ಉಕ್ತಿಯನ್ನು ಸುಸಂಗತವಾಗಿಸಿದೆ.

ಒಡೆಯರಪಾಳ್ಯದಲ್ಲಿ ತೋಟಗಾರಿಕೆ ಮಾಡುತ್ತಿರುವವರು ಹಳ್ಳದ ನೀರು, ಕೊಳವೆಬಾವಿಗಳನ್ನು ಉಪಯೋಗಿಸುತ್ತಾರೆ. ಹಿಂದೆ

ಕೊಳವೆಬಾವಿಗಳಿಲ್ಲದ ಸಮಯದಲ್ಲಿ ವರ್ಷಪೂರ್ತಿ ತುಂಬಿ ಹರಿಯುತ್ತಿದ್ದ ಹಳ್ಳ, ಇಂದು ಬತ್ತಿಹೋಗಿದೆ. ಬತ್ತಿದ ಹಳ್ಳದ ಒಳಗೆ ಬಾವಿ ತೋಡಿಸಿದ, ನಂತರ ಹೊಲದ ದಡದಲ್ಲಿ ಬಾವಿ ತೋಡಿಸಿದ. ಮಳೆಯ ಕಣ್ಣಾಮುಚ್ಚಾಲೆ ಮತ್ತು ಅಧಿಕ ಲಾಭಕೋರತನಕ್ಕಾಗಿ, ವಾಣಿಜ್ಯ ಬೆಳೆ ಹಾಕಿದ ಪರಿಣಾಮ ಅದಕ್ಕೆ ನೀರುಣಿಸಲು ಕೊಳವೆಬಾವಿ ಕೊರೆಸಿ, ಸಿಕ್ಕ ಅಲ್ಪ ಜಲಕ್ಕೆ ಸಂತಸಪಟ್ಟ, ಆ ಸಂತಸ ಪಕ್ಕದ ಜಮೀನಿನವನು ಇವನಿಗಿಂತ ಐವತ್ತರಿಂದ ನೂರು ಅಡಿ ಅಧಿಕ ಆಳದ ಕೊಳವೆಬಾವಿ ಕೊರೆಸುವವರೆಗೆ ಮಾತ್ರ ಉಳಿದಿತ್ತು. ಇದು ಕೇವಲ ಐದಾರು ತಿಂಗಳುಗಳಲ್ಲಿ ನಡೆದು ಹೋಯಿತು. ಇದರಿಂದ ಬೆಳೆ ನಷ್ಟವಾಯಿತು. ರೈತನಿಗೆ ಸಾಲದ ಹೊರೆ ಅಧಿಕವಾಯಿತು. ಪರಿಣಾಮವಾಗಿ ಖಾಸಗಿ ಲೇವಾದೇವಿಗಾರರಿಂದ ಅಧಿಕ ಬಡ್ಡಿಗೆ ಸಾಲ ಪಡೆದು, ಕೃಷಿ ಮತ್ತು ಕೃಷಿಯೇತರ ಖರ್ಚುಗಳಿಗೆ ವ್ಯಯಿಸಿದ ಪರಿಣಾಮ ಬ್ಯಾಂಕು ಮತ್ತು ಖಾಸಗಿಯವರ ಕಡೆಯಿಂದ ಸಾಲ ತೀರಿಸುವಂತೆ ಒತ್ತಡ ಬಿದ್ದಾಗ ದಿಕ್ಕು ತೋಚದಂತಾಗಿ ಆತ್ಮಹತ್ಯೆಯ ಹಾದಿಯನ್ನು ರೈತ ತುಳಿಯುತ್ತಿದ್ದಾನೆ.

**ಕೃಷಿ ಕಾರ್ಮಿಕರ ಸಮಸ್ಯೆ**

ಪ್ರಸ್ತುತದ ನಗರೀಕರಣ ಮತ್ತು ಕೈಗಾರಿಕೀಕರಣ ವ್ಯಾಪಕವಾಗಿ ಬೆಳವಣಿಗೆಯಾದಂತೆ, ಗ್ರಾಮೀಣ ಪ್ರದೇಶದ ಜನರು ಹಣದ ಪ್ರಾಮುಖ್ಯತೆಯನ್ನು ಅರಿತ ನಂತರ ನಗರ ಪ್ರದೇಶಗಳಿಗೆ ವಲಸೆ ಹೋಗಲಾರಂಭಿಸಿದ್ದಾರೆ. ವಿವಿಧ ಕೃಷಿ ಆಚರಣೆಗಳಲ್ಲಿ ನಿರತರಾಗಿರುವ ಮೂಲಕ ವೇತನ ಗಳಿಸಿ ಜೀವನ ಸಾಗಿಸುವ ಜನತೆಯನ್ನು ಕೃಷಿ ಕಾರ್ಮಿಕರು ಎಂದು ಪರಿಗಣಿಸಲಾಗಿದೆ. ಅಂದರೆ ಬೇರೆಯವರ ಹೊಲಗದ್ದೆಗಳಲ್ಲಿ ಕೂಲಿಗಾಗಿ ದುಡಿಯುವ ಕಾರ್ಮಿಕರು. ಇವರಲ್ಲಿ ಬಹುಸಂಖ್ಯೆಯ ಜನರು ಭೂ ರಹಿತರಾಗಿರುತ್ತಾರೆ. ಬೇರೆಯವರ ಜಮೀನಿನಲ್ಲಿ ಕೆಲಸ ಮಾಡುವ ಮೂಲಕ ದೊರೆಯುವ ವೇತನವೇ ಇವರ ಜೀವನಾಧಾರವಾಗಿರುತ್ತದೆ. ಕೆಲವರು ಚಿಕ್ಕ ಹಿಡುವಳಿಗಳನ್ನು ಹೊಂದಿರುವವರು, ಅದರಿಂದ ಬರುವ ಆದಾಯವು ಸಾಲದಿರುವುದರಿಂದ, ಪೂರಕ ಆದಾಯವನ್ನು ಗಳಿಸಲು ಇವರೂ ಸಹ ಬಹುತೇಕ ಸಮಯ ಇತರರ ಹೊಲಗದ್ದೆಗಳಲ್ಲಿ ಉದ್ಯೋಗನಿರತರಾಗಿರುವುದು ಅನಿವಾರ್ಯವಾಗಿದೆ. ೨೦೧೧ರ ಜನಗಣತಿಯ ಮೇರೆಗೆ ಒಟ್ಟು ಕಾರ್ಮಿಕರಲ್ಲಿ ಶೇಕಡ ೫೬.೬ರಷ್ಟು ಜನರು ಕೃಷಿ ಸಂಬಂಧಿತ ಕಾರ್ಮಿಕರಾಗಿದ್ದಾರೆ.

ಮೇಲೆ ಸೂಚಿಸಿದಂತೆ ಸಣ್ಣ ಹಿಡುವಳಿದಾರರು ಮಾತ್ರವಲ್ಲದೆ ಸಮಾಜದಲ್ಲಿ ಇತರರ ಭೂ ಹಿಡುವಳಿಯನ್ನು ಗುತ್ತಿಗೆ ಅಥವಾ ಗೇಣಿಯ ಆಧಾರದ ಮೇಲೆ ಕೃಷಿ ಮಾಡುವ ಭೂ ರಹಿತರೂ ಸಹ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ೭೮ ಲಕ್ಷ ಕೃಷಿಕರ ಕುಟುಂಬಗಳಿವೆ. ೬೨ಲಕ್ಷ ಕೃಷಿ ಕಾರ್ಮಿಕರಿದ್ದಾರೆ. ರಾಜ್ಯದ ೧೫೧ ತಾಲೂಕುಗಳನ್ನು ಇತ್ತೀಚೆಗೆ ಬರಪೀಡಿತ ಪ್ರದೇಶ ಎಂದು ಘೋಷಿಸಲಾಗಿದೆ.

ಕೃಷಿ ಕಾರ್ಮಿಕನು ಇಂದು ಯಾವುದೇ ಉತ್ತಮ ಜೀವನ ಸನ್ನಿವೇಶವನ್ನು ಹೊಂದಿಲ್ಲ. ಕಾರಣ ಕಾರ್ಮಿಕನ ಉತ್ಪಾದನಾ ಶಕ್ತಿ ಕಡಿಮೆ ಇರುವುದರಿಂದ ಕಡಿಮೆ ವೇತನವನ್ನು ನೀಡಲಾಗುತ್ತಿದೆ. ಪ್ರಸ್ತುತ ಕೈಗಾರಿಕೆಗಳಲ್ಲಿ ಆಕರ್ಷಕ ಸಂಬಳ ನೀಡುತ್ತಿರುವುದರಿಂದ ಕೃಷಿ ಕಾರ್ಮಿಕರು ಹಳ್ಳಿಯಿಂದ ಪಟ್ಟಣಗಳತ್ತ ವಾಲುತ್ತಿದ್ದಾರೆ. ಕಂಪನಿಗಳು, ಕಾರ್ಖಾನೆಗಳು, ಶಾಲೆಗಳು, ಶಾಪಿಂಗ್ ಮಾಲ್‌ಗಳು ಇತ್ಯಾದಿಗಳಲ್ಲಿ ಸೆಕ್ಯೂರಿಟಿ, ವಾಟರ್‌ಮನ್ ಕೆಲಸಗಳನ್ನು ಅನಕ್ಷರಸ್ಥ ಪುರುಷರು ನಿಭಾಯಿಸಿದರೆ, ಮಹಿಳೆಯರು ಗುಡಿಸುವ, ತೊಳೆಯುವ, ಶುದ್ಧೀಕರಿಸುವ ಕಾರ್ಯಗಳಿಗೆ ಬಂದು ಸೇರುತ್ತಾರೆ.

ವಿದ್ಯಾವಂತರಾದ ರೈತರ ಮಕ್ಕಳು ಮತ್ತು ಕೃಷಿ ಕಾರ್ಮಿಕರ ಮಕ್ಕಳು ಸರ್ಕಾರದ ನೌಕರಿಗೆ ಸೇರ ಬಯಸುತ್ತಾರೆ. ಅದು ಸಾಧ್ಯವಾಗದ ಪಕ್ಷದಲ್ಲಿ ವಿವಿಧ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಕಂಪ್ಯೂಟರ್ ಆಪರೇಟರ್, ಸೇಲ್ಸ್‌ಮ್ಯಾನ್, ಪಿಗ್ಮಿ ಕಲೆಕ್ಟರ್‌ಗಳಾಗಿ ಕೆಲಸಕ್ಕೆ ಸೇರುತ್ತಾರೆ. ಇವರಿಗೆ ಇದು ಕೃಷಿ ಕಾರ್ಯದಷ್ಟು ದೈಹಿಕ ಆಯಾಸ ನೀಡುವುದಿಲ್ಲ ಮತ್ತು ಕೃಷಿ ಕಾರ್ಯದ ವೇತನಕ್ಕಿಂತ ಅಧಿಕ ಮೊತ್ತ ಮಾಸಿಕವಾಗಿ ಬಂದು ಕೈಸೇರುತ್ತದೆ.

೧೯೪೮ರಲ್ಲಿ ಕನಿಷ್ಠ ವೇತನ ಕಾಯ್ದೆಯನ್ನು ಜಾರಿ ಮಾಡಿದರೂ ಸಹ ಅದನ್ನು ರೈತರು ಪಾಲಿಸಲು ಅಸಾಧ್ಯ. ಕೃಷಿಯು ಪ್ರಕೃತಿಯ ಸಮತೋಲನದ ಮೇಲೆ ಅವಲಂಬಿತವಾಗಿದೆ. ಪ್ರಸ್ತುತ ಕರ್ನಾಟಕದಲ್ಲಿ ೨೩೬ ರೂಪಾಯಿ ಕನಿಷ್ಠ ಕೂಲಿಯನ್ನು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಲ್ಲಿ ಜಾರಿಗೆ ತರಲಾಗಿದೆ. ಆದರೂ ಕೃಷಿ ಕಾರ್ಯಗಳಲ್ಲಿ ಒಡೆಯರಪಾಳ್ಯದಲ್ಲಿ ಮಹಿಳೆಯರಿಗೆ ೧೨೦, ಶಾಗ್ಯ ಗ್ರಾಮದಲ್ಲಿ ೧೩೦ ರೂಪಾಯಿಗಳನ್ನು ನೀಡಿದರೆ, ಒಡೆಯರಪಾಳ್ಯದಲ್ಲಿ ಪುರುಷರಿಗೆ ೨೫೦ ಆದರೆ ಶಾಗ್ಯದಲ್ಲಿ ೨೭೦ ರೂಪಾಯಿಗಳನ್ನು ನೀಡಲಾಗುತ್ತಿದೆ. ಸ್ವಲ್ಪ ಆಯಾಸಭರಿತ ಗಾರೆ ಕೆಲಸದಲ್ಲಿ ಮುಖ್ಯ ವ್ಯಕ್ತಿಗೆ ೫೦೦ ರೂಪಾಯಿಗಳನ್ನು ನೀಡಿದರೆ ಅವನ ಕೈಕೆಳಗಿನ ಕಾರ್ಮಿಕನಿಗೆ ೩೦೦ ರೂಪಾಯಿಗಳನ್ನು ನೀಡಲಾಗುತ್ತಿದೆ.

ಕೃಷಿ ಕಾರ್ಮಿಕರುಗಳ ವಲಸೆಯು ಶಾಗ್ಯ ಮತ್ತು ಒಡೆಯರಪಾಳ್ಯ ಗ್ರಾಮಗಳಲ್ಲಿ ವಿಭಿನ್ನವಾಗಿದೆ. ಶಾಗ್ಯ ಗ್ರಾಮದಲ್ಲಿನ ಅಧಿಕ ಪ್ರಮಾಣದ ಲಿಂಗಾಯಿತ ಸಮುದಾಯದವರು ಕಂಪನಿಗಳ ಕೆಲಸಕ್ಕೆ ಸೇರಿದರೆ, ಪರಿಶಿಷ್ಟ ಜಾತಿಯವರು ಹೋಟೆಲ್‌ಗಳು, ಕಿರಾಣಿ ಅಂಗಡಿಗಳಲ್ಲಿ ಕೆಲಸಕ್ಕೆ ಹೋಗುತ್ತಾರೆ. ಒಡೆಯರಪಾಳ್ಯ ಮತ್ತು ಸುತ್ತಮುತ್ತಲ ಗ್ರಾಮದವರು ಅಕ್ಟೋಬರ್ ಮಾಸದಿಂದ ಮಾರ್ಚ್-ಏಪ್ರಿಲ್‌ನ ತನಕ ಟಿಬೆಟಿಯನ್ನರ ಜೊತೆಯಲ್ಲಿ ಸ್ವೆಟರ್, ಜರ್ಕಿನ್, ಬೆಡ್‌ಶೀಟ್ ಇತ್ಯಾದಿಗಳನ್ನು ಮಾರಾಟ ಮಾಡಲು ಬ್ರೋಚ್, ಸೂರತ್, ಮುಂಬಯಿ, ಡೆಲ್ಲಿ, ಹೈದರಾಬಾದ್, ಸಿಕಂದರಾಬಾದ್ ಇತ್ಯಾದಿ ಸ್ಥಳಗಳಲ್ಲದೆ ಕೆಲವು ವೇಳೆ ಶ್ರೀಲಂಕಾಗೂ ಹೋಗಿಬರುವುದುಂಟು. ಟಿಬೆಟಿಯನ್ನರ ಜೊತೆ ಅಧಿಕವಾಗಿ ಪರಿಶಿಷ್ಟರು ದೂರದ ಊರುಗಳಿಗೆ ವಲಸೆ ಹೋಗುತ್ತಾರೆ. ವಲಸೆ ಹೋಗುವ




ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘ, ಕಲಬುರಗಿ ಇವರು ಆಯೋಜಿಸಿದ್ದ 'ಯಶಸ್ಸು' ಸಮಾಲೋಚನೆ ಕೇಂದ್ರದ ಕಾರ್ಯಾರಂಭ ಹಾಗೂ ವಿಶೇಷ ಉಪನ್ಯಾಸ ಕಾರ್ಯಕ್ರಮದ ಸಂದರ್ಭದಲ್ಲಿ ಖ್ಯಾತ ಮನೋವೈದ್ಯ ಹಾಗೂ ಲೇಖಕ ಡಾ॥ ಸಿ. ಆರ್. ಚಂದ್ರಶೇಖರ್ ಅವರು ರಚಿಸಿ, ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಮೂರು ಕೃತಿಗಳನ್ನು ಲೋಕಾರ್ಪಣೆ ಮಾಡಲಾಯಿತು. ಕಾರ್ಯಕ್ರಮದಲ್ಲಿ ಡಾ॥ ಸಿ. ಆರ್. ಚಂದ್ರಶೇಖರ್, ಶ್ರೀ ದೇವರ ಕಲ್ (ಉಪಕುಲಪತಿಗಳು, ಶರಣ ಬಸವೇಶ್ವರ ವಿಶ್ವವಿದ್ಯಾಲಯ, ಕಲಬುರಗಿ), ಶ್ರೀಮತಿ ಕಿರಣ ಕುಮಾರಿ, ಶ್ರೀ ಎಸ್. ಎಸ್. ಹಿರೇಮಠ, ಶ್ರೀ ಎ. ಶ್ರೀನಿವಾಸಮೂರ್ತಿ, ಪ್ರೊ॥ ಪ್ರಸಾದ್ ಹಾಗೂ ನವಕರ್ನಾಟಕ ಪ್ರಕಾಶನದ ಶ್ರೀ ಚಿತ್ರಕಾಂತ ಹೆಬ್ಬಾಳ ಮುಂತಾದವರು ಉಪಸ್ಥಿತರಿದ್ದರು.

ಸಮಯವು ಕೃಷಿ ಚಟುವಟಿಕೆಯ ಸಮಯವಾಗಿರುವುದರಿಂದ ಕೃಷಿ ಕಾರ್ಮಿಕರ ಸಮಸ್ಯೆಯು ಏರ್ಪಡುತ್ತದೆ. ಕ್ರಮೇಣ ರೈತ ಕಳೆ ಕೀಳಲು, ಬೆಳೆ ಕೊಯ್ಲುಮಾಡಲು ಅಧಿಕ ಮೊತ್ತದ ಹಣ ತೆರಬೇಕಾಗುತ್ತದೆ. ವಲಸೆಯು ರೈತ ಮತ್ತು ಕೃಷಿಕಾರ್ಯ ಎರಡಕ್ಕೂ ಮಾರಕವಾಗಿ ಪರಿಣಮಿಸಿದೆ.

**ರೋಗ ಮತ್ತು ಕೀಟಗಳ ಸಮಸ್ಯೆ**

ಬೆಳೆ ಸಂರಕ್ಷಣೆಯ ಸಂದರ್ಭದಲ್ಲಿ ರೈತನಿಗೆ ತೊಡಕಾಗುವ ಮೊದಲ ಅಂಶ ಮಳೆಯಾದರೆ, ಎರಡನೆಯ ಸ್ಥಾನದಲ್ಲಿ ಕೀಟಗಳು ಮತ್ತು ಅದರಿಂದ ಉಂಟಾಗುವ ರೋಗಗಳು. ನಮ್ಮ ಪ್ರಕೃತಿಯಲ್ಲಿ ಒಂದನ್ನು ಅವಲಂಬಿಸಿ ಮತ್ತೊಂದು ಬದುಕುತ್ತಿದೆ. ಫುಕುವೊಕಾ ಎಂಬ ಜಪಾನಿನ ಸಾವಯವ ಕೃಷಿ ತಜ್ಞನ ಮಾತಿನಲ್ಲಿ ಹೇಳುವುದಾದರೆ "ಸಸ್ಯಗಳಿಗೆ ಬಂದ ರೋಗವನ್ನು ನಿವಾರಣೆ ಮಾಡಲು ಹೋಗಿ, ಕೃಷಿಗೆ ಸಹಾಯಕವಾಗುವ ಕೀಟಗಳನ್ನು ಸಂಹಾರ ಮಾಡಲಾಗುತ್ತಿದೆ. ಆದ್ದರಿಂದ ಯಾವುದೇ ರಾಸಾಯನಿಕವನ್ನು ಸಿಂಪಡಿಸದೆ ಬೆಳೆಯನ್ನು ಬೆಳೆಯಬೇಕು.

ಮೂವತ್ತು ವರ್ಷಗಳ ಹಿಂದೆ ಕೀಟ ಬಾಧೆ ಇಷ್ಟೊಂದು ಇರಲಿಲ್ಲ. ಯಾವುದೇ ಔಷಧಿಯನ್ನು ಸಿಂಪಡಿಸದೆಯೇ ತೊಗರಿ, ಅವರೆ ಬೆಳೆಯುತ್ತಿದ್ದವು. ಆದರೆ ಇಂದು ಕಾಳು ಕೈಗೆ ಸೇರಬೇಕಾದರೆ ವಿಷ ಭಾಂಡಗಳನ್ನು ಸಾಂದ್ರ ಸ್ಥಿತಿಯಲ್ಲಿ ಸಿಂಪಡಿಸಬೇಕಾಗುತ್ತದೆ. ಆಧುನಿಕ ಸಂಪನ್ಮೂಲಗಳು ದೊರೆತ ಹಾಗೆಲ್ಲ ಯಾವ ರೀತಿ ಮನುಷ್ಯನಿಗೆ ಹೊಸ ಕಾಯಿಲೆಗಳು ತಲೆದೋರಿವೆಯೋ, ಅದೇ ತೆರನಾಗಿ ಕೃಷಿಯಲ್ಲಿ ಹೆಚ್ಚು ಇಳುವರಿ ಕೊಡುವಂತಹ ತಳಿಗಳ ಉತ್ಪಾದನೆ ಮಾಡಿದ ಹಾಗೆಲ್ಲಾ ಅವಕ್ಕೆ ಬರುವ ರೋಗ ಮತ್ತು ಕೀಟಗಳ ಬಾಧೆ ಹೆಚ್ಚುತ್ತಿದೆ. ನಮ್ಮ ದೇಶದಲ್ಲಿ ಕೃಷಿ ಹಾನಿಕಾರಕ ಜೀವಿಗಳಿಂದ ವರ್ಷಕ್ಕೆ ಸುಮಾರು ೧ ಸಾವಿರ ಕೋಟಿ ಮೌಲ್ಯದ ಬೆಳೆ ಹೊಲಗದ್ದೆಗಳಲ್ಲಿ ಅಥವಾ ದಾಸ್ತಾನಿನಲ್ಲಿ ಹಾಳಾಗುವುದೆಂದು ತಿಳಿದುಬಂದಿದೆ. ಕೀಟ, ಇಲಿ, ಹೆಗ್ಗಣಗಳ ಕಾಟದಿಂದ ಶೇಕಡ ೫ರಿಂದ ೭ ದಶಲಕ್ಷ ಟನ್‌ಗಳಷ್ಟು ಆಹಾರ ಧಾನ್ಯ ನಾಶವಾಗುತ್ತಿದೆ.

ಸಸ್ಯಗಳಿಗೆ ತಗಲುವ ರೋಗಗಳಲ್ಲಿ ಮುಖ್ಯವಾದವುಗಳೆಂದರೆ ಶಿಲೀಂಧ್ರ, ಬ್ಯಾಕ್ಟೀರಿಯಾ, ವೈರಸ್ ಮತ್ತು ಮೈಕೋಪ್ಲಾಸ್ಮ ಮತ್ತು ನಿಮಾಟೊಡ್ ಇವು ಬಹಳ ಉಪದ್ರವಕಾರಿಗಳು. ಇವುಗಳಲ್ಲದೆ ಹಂದಿ, ಮಂಗ, ಇಲಿ, ಆನೆ, ಪಕ್ಷಿಗಳು, ಕಳೆಗಳು ಇತ್ಯಾದಿಗಳು ರೈತ ಬೆಳೆಯುವ ಬೆಳೆಗೆ ಉಪದ್ರವಕಾರಿಯಾಗಿ ಇವುಗಳನ್ನು ಹೋಗಲಾಡಿಸಲು ರೈತ ಅಧಿಕ ಶ್ರಮ ಮತ್ತು ಹಣ ವ್ಯಯ ಮಾಡಬೇಕಾಗುತ್ತದೆ.

ಮನುಷ್ಯ ತನ್ನ ಉಪಯೋಗ ಮತ್ತು ಹಣಗಳಿಸುವ ದುರುದ್ದೇಶದಿಂದ ಸಕಾಲದಲ್ಲಿ ಅಲ್ಲದೆ ಅಕಾಲದಲ್ಲಿಯೂ ಬೆಳೆಯನ್ನು ಬೆಳೆಯುವುದು ಪ್ರಕೃತಿಗೆ ವ್ಯತಿರಿಕ್ತವಾದುದು. ಇದು ಪ್ರಸ್ತುತದಲ್ಲಿ ತೋಟಗಾರಿಕೆಯನ್ನು ಮಾಡಿ ತರಕಾರಿಗಳನ್ನು ಬೆಳೆಯುವವರಿಗೂ ಅನ್ವಯಿಸುತ್ತದೆ. ಹಿಂದೆ ಒಡೆಯರಪಾಳ್ಯದಲ್ಲಿ ಮುಂಗಾರಿನಲ್ಲಿ ಬಿತ್ತನೆ ಮಾಡಿ ಜನವರಿಗೆ ಕೊಯ್ಲು ಮಾಡಿ ಮಾರ್ಚ್–ಏಪ್ರಿಲ್‌ನಲ್ಲಿ ಒಕ್ಕಣೆ ಮಾಡುತ್ತಿದ್ದರು. ಆದರೆ ಇದು ಬದಲಾಗಿ ಕೃತಕ ನೀರಿನ ವ್ಯವಸ್ಥೆಯನ್ನು ಆಯೋಜಿಸಿ ವರ್ಷಪೂರ್ತಿ ಬೆಳೆ ತೆಗೆಯಲು ಪ್ರಯತ್ನಿಸುತ್ತಾರೆ. ಒಂದಿಬ್ಬರು ಪ್ರಯತ್ನಿಸಿ ಯಶಸ್ವಿಯಾದರೆ, ಮರುವರ್ಷದಲ್ಲಿ ಅಕಾಲದ ಕೃಷಿಗೆ ಕೈಹಾಕಿ ಕೈಸುಟ್ಟುಕೊಂಡಿರುವವರೂ ಇದ್ದಾರೆ.

ಕೃಷಿಯಲ್ಲಿನ ಬೆಳೆಗೆ ಕೀಟ ಬಾಧೆ ಉಂಟಾದರೆ ಯಾವುದೇ ತಜ್ಞರ ಸಲಹೆಯನ್ನು ಪಡೆಯದೆ, ಅಷ್ಟೇನೂ ಪರಿಣತಿ ಮತ್ತು ವಿದ್ಯಾಭ್ಯಾಸವನ್ನು ಹೊಂದಿಲ್ಲದ ಫರ್ಟಿಲೈಸರ್ ಅಂಗಡಿಗೆ ಹೋಗಿ, ರೋಗ ಯಾವುದು ಇದ್ದರೂ ಸರಿಯೇ ಆತ ಕೊಟ್ಟ ಔಷಧಿಯನ್ನು ತಂದು ಸಿಂಪಡಿಸುತ್ತಾರೆ. ಕಾರಣ ಈ ಮೊದಲೇ ತಿಳಿಸಿರುವಂತೆ ಭಾರತೀಯ ರೈತ ಅನಕ್ಷರಸ್ಥ. ಕೆಲವೊಮ್ಮೆ ಕ್ರಿಮಿನಾಶಕಗಳ ಏರುಪೇರಿನಿಂದ ಬೆಳೆಗಳೇ ಒಣಗಿಹೋಗಿರುವುದೂ ಉಂಟು.

ಒಡೆಯರಪಾಳ್ಯ ಗ್ರಾಮದಲ್ಲಿ ಮುಖ್ಯವಾಗಿ ಬೆಳ್ಳುಳ್ಳಿ, ಎಲೆಕೋಸು ಮತ್ತು ಆಲೂಗಡ್ಡೆ ಬೆಳೆಗಳಿಗೆ ಔಷಧಿ ಸಿಂಪಡಿಸುತ್ತಾರೆ. ಕೆಲವೊಂದು ಕ್ರಿಮಿನಾಶಕಗಳನ್ನು ಈ ಮೂರು ಬೆಳೆಗಳಿಗೂ ಬಳಸುವುದುಂಟು. ಸಾಮಾನ್ಯ ಹಳ್ಳಿಯ ರೈತ ಬಳಸುವ ಕ್ರಿಮಿನಾಶಕಗಳು ಬಹುತೇಕ ವಿದೇಶಗಳಿಂದ ಜಾಗತೀಕರಣದ ಮುಖಾಂತರ ಆಮದು ಆಗಿರುವವುಗಳು ಮತ್ತು ಭಾರತದಲ್ಲಿ ಬಹುರಾಷ್ಟ್ರೀಯ ಕಂಪನಿಗಳಲ್ಲಿ ತಯಾರಾದವುಗಳಾಗಿವೆ.

**ವಿದ್ಯುತ್ತಿನ ಸಮಸ್ಯೆ**

ಕಳೆದ ೨೦ ವರ್ಷಗಳ ಹಿಂದೆ ವಿದ್ಯುತ್ತಿನ ಸಮಸ್ಯೆ ಇರಲಿಲ್ಲ. ೧೯೯೧ರಲ್ಲಿ ಭಾರತ ಎಲ್.ಪಿ.ಜಿ.ಯನ್ನು ಒಪ್ಪಿಕೊಂಡ ನಂತರ ಭಾರತದ ಕೃಷಿಯಲ್ಲಿ ಮತ್ತು ಕೃಷಿ ಆಧಾರಿತ ಉದ್ದಿಮೆಗಳಲ್ಲಿ ಸಮಸ್ಯೆಗಳ ಸರಮಾಲೆ ಉದಯಿಸತೊಡಗಿತು. ಅದರಲ್ಲಿ ವಿದ್ಯುತ್ತಿನ ಸಮಸ್ಯೆಯು ಸಹ ಒಂದು. ಕರ್ನಾಟಕದಲ್ಲಿ ಜಲ ವಿದ್ಯುತ್, ಅಣು ವಿದ್ಯುತ್, ಪವನಶಕ್ತಿ ವಿದ್ಯುತ್ ಎಂಬ ಮೂರು ವಿಧಗಳಲ್ಲಿ ವಿದ್ಯುತ್ತನ್ನು ತಯಾರಿಸುತ್ತಾರೆ.

ಕರ್ನಾಟಕದಲ್ಲಿ ೧೧೫೪ ಬೃಹತ್ ಮತ್ತು ಮಧ್ಯಮ ಗಾತ್ರದ ತಯಾರಿಕಾ ಕಾರ್ಖಾನೆಗಳಿವೆ. ಅವುಗಳಲ್ಲಿ ಪ್ರಮುಖವಾದವು ಸಿಮೆಂಟ್, ಸ್ಟೀಲ್, ಯಂತ್ರೋಪಕರಣಗಳು ಮತ್ತು ಏರೋಸ್ಪೇಸ್ ಕೈಗಾರಿಕೆಗಳು. ಇದಲ್ಲದೆ ೨೫೦೦ ಮಾಹಿತಿ ತಂತ್ರಜ್ಞಾನದ ಕಂಪನಿಗಳಿವೆ. ಜಾಗತೀಕರಣ ಮತ್ತು ಉದಾರೀಕರಣದ ಪ್ರಭಾವದಿಂದ ೭೦೦ ಬಹುರಾಷ್ಟ್ರೀಯ ಕಂಪನಿಗಳು ಕರ್ನಾಟಕದಲ್ಲಿ ತಲೆಯೆತ್ತಿವೆ. ಕರ್ನಾಟಕದಲ್ಲಿ ೬೦೦ ಬಟ್ಟೆ ಕೈಗಾರಿಕಾ ಕೇಂದ್ರಗಳಿವೆ. ಇವೆಲ್ಲದರ ನಡುವೆಯೂ ಸರ್ಕಾರ ಕಂಪನಿಗಳು ಮತ್ತು ಕೈಗಾರಿಕೆಗಳಿಗೆ ವಿದ್ಯುತ್ತನ್ನು ನೀಡಿ ಆನಂತರ ರೈತರಿಗೂ ನೀಡಬೇಕು. ಮಾನ್ಯ ಇಂಧನ ಸಚಿವ ಡಿ. ಕೆ. ಶಿವಕುಮಾರ್‌ರವರು ತಮ್ಮ ಪತ್ರಿಕಾ ಪ್ರಕಟಣೆಯಲ್ಲಿ ಅತ್ಯಧಿಕ ಯೂನಿಟ್ ವಿದ್ಯುತ್ತನ್ನು ವ್ಯವಸಾಯ ಕ್ಷೇತ್ರಕ್ಕೆ ಮೀಸಲಿಡಲಾಗಿದೆ ಮತ್ತು ಎರಡನೆಯದಾಗಿ ಮನೆಗಳಿಗೆ ಕಲ್ಪಿಸಿರುವ ವಿದ್ಯುತ್ ಸಂಪರ್ಕವು ದ್ವಿತೀಯ ಸ್ಥಾನದಲ್ಲಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕರ್ನಾಟಕವು ೨೦೧೭ರಲ್ಲಿ ಖಾಸಗಿ ಕಂಪನಿಗಳಿಂದ ೬೬೮ ಮೆಗಾವ್ಯಾಟ್ ವಿದ್ಯುತ್ತನ್ನು ಪಡೆಯುತ್ತಿದೆ. ಅಲ್ಲದೆ ಮಹಾರಾಷ್ಟ್ರದಿಂದಲೂ ೧೬೫ ಮೆಗಾವ್ಯಾಟ್ ವಿದ್ಯುತ್ತನ್ನು ಖರೀದಿಸುತ್ತಿದೆ.

ಭಾರತದಲ್ಲಿ ಈ ವರ್ಷ ವಿದ್ಯುತ್ ಉತ್ಪಾದನೆಯಲ್ಲಿ ಗಮನಾರ್ಹ ಪ್ರಗತಿ ಸಾಧಿಸಲಾಗಿದೆ. ಈ ಬಾರಿ ಶೇ. ೯.೫ರಷ್ಟು ಹೆಚ್ಚು ವಿದ್ಯುತ್ತನ್ನು ಉತ್ಪಾದಿಸಲಾಗುತ್ತಿದೆ ಎಂದು ಮಾನ್ಯ ಕೇಂದ್ರ ಇಂಧನ ಸಚಿವರಾದ ಪಿಯೂಷ್ ಗೋಯಲ್‌ರವರು ಹೇಳಿದ್ದಾರೆ.

ನನ್ನ ಅಧ್ಯಯನ ಕ್ಷೇತ್ರವಾದ ಶಾಗ್ಯ ಮತ್ತು ಒಡೆಯರಪಾಳ್ಯ ಗ್ರಾಮಗಳಲ್ಲಿ ವಿದ್ಯುತ್ತಿನ ಸಮಸ್ಯೆ ಎಡೆಬಿಡದೆ ಕಾಡುತ್ತಿದೆ. ಶಾಗ್ಯದಲ್ಲಿ ಜನವರಿ ಮಾಸ ಕಾಲಿಡುತ್ತಿದ್ದಂತೆಯೇ ವಿದ್ಯುತ್ತಿನ ಸಮಸ್ಯೆ ತಲೆದೋರುತ್ತದೆ. ಇಲ್ಲಿ ಮನೆಯ ವಿದ್ಯುತ್ತನ್ನು ಬೆಳಿಗ್ಗೆ ಆರು ಗಂಟೆಗೆ ತೆಗೆದರೆ ಮತ್ತೆ ನೀಡುವುದು ಮಧ್ಯಾಹ್ನ ೨.೩೦ ಗಂಟೆಗೆ. ಇನ್ನೂ ೨೪x೭ ಎಂಬ ಘೋಷವಾಕ್ಯದಡಿ ಪ್ರತ್ಯೇಕ ವಿದ್ಯುತ್ ಸರಬರಾಜು ಮಾರ್ಗವನ್ನು ಎಳೆಯಲಾಗಿದ್ದರೂ ಸಹ ಪೂರ್ಣ ಪ್ರಮಾಣದ ವಿದ್ಯುತ್ತನ್ನು ನೀಡಲಾಗುತ್ತಿಲ್ಲ. ಇಲ್ಲಿನ ಬಹುಪಾಲು ರೈತರು ಕೊಳವೆ ಬಾವಿಯ ಸಹಾಯದಿಂದ ತೋಟಗಾರಿಕೆ ಮಾಡುತ್ತಿದ್ದಾರೆ. ಇವರಿಗೆ ಮಧ್ಯಾಹ್ನ ೩ ಗಂಟೆಗೆ ವಿದ್ಯುತ್ ನೀಡಿದರೆ ಮತ್ತೊಂದು ವಾರದಲ್ಲಿ ಬೆಳಗ್ಗಿನ ೧೧.೩೦ಕ್ಕೆ ನೀಡಲಾಗುತ್ತದೆ. ಅಲ್ಲದೆ, ಮಧ್ಯರಾತ್ರಿ ೧೨.೦೦ ಗಂಟೆಗೂ ಸಹ ವಿದ್ಯುತ್ತನ್ನು ನೀಡುತ್ತಾರೆ. ಇದರಿಂದ ರೈತ ಕರೆಂಟ್ ಬರುವ ಸಮಯಕ್ಕಾಗಿ ಕಾದು ಕುಳಿತಿರಬೇಕಾಗುತ್ತದೆ. ಇದು ಆತನ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ಎಲ್ಲಾ ಪಂಪ್‌ಸೆಟ್‌ಗಳು ಒಮ್ಮೆಲೆ ತಮ್ಮ ಕಾರ್ಯವನ್ನು ಪ್ರಾರಂಭಿಸುವುದರಿಂದ ವೋಲ್ಟೇಜಿನ ಸಮಸ್ಯೆ ಎದುರಾಗುತ್ತದೆ. ಇವೆಲ್ಲದರ ನಡುವೆ ರೈತ ರಾತ್ರಿ ಪಾಳಿಯಲ್ಲಿ ನೀರು ಬಿಡಲು ಹೋಗುವಾಗ ವಿಷಜಂತುಗಳಿಗೆ ಬಲಿಯಾಗಬಹುದಾದ ಸಂಭವವೂ ಇರುತ್ತದೆ. ನಿಯಮಿತವಾಗಿ ವಿದ್ಯುತ್ತನ್ನು ನೀಡದಿರುವುದು ಸಹ ರೈತರಿಗೆ ಸಮಸ್ಯೆಯಾಗಿ ಪರಿಣಮಿಸಿದೆ.

ಇನ್ನು ಒಡೆಯರಪಾಳ್ಯ ಮತ್ತು ಸುತ್ತಮುತ್ತಲಿನ ಗ್ರಾಮಗಳು ಬೆಳಿಗ್ಗೆ ಆರು ಗಂಟೆಗೆ ವಿದ್ಯುತ್ ದೀಪವನ್ನು ನೋಡಿದರೆ ಮತ್ತೆ ನೋಡುವುದು ಸಂಜೆ ಆರುಗಂಟೆಗೆ ಮಾತ್ರ. ಅಂದರೆ ಬರೋಬ್ಬರಿ ೧೨ ಗಂಟೆಗಳ ಕಾಲ ಇಲ್ಲಿ ಲೋಡ್ ಶೆಡ್ಡಿಂಗ್ ಮಾಡಲಾಗುತ್ತದೆ. ಇಲ್ಲಿ ೩ ಫೇಸ್ ವಿದ್ಯುತ್ ಸಹ ಇದೇ ಮಾದರಿಯಲ್ಲಿ ಕಣ್ಣಾಮುಚ್ಚಾಲೆಯಂತೆ ರಾತ್ರಿ ಸಮಯದಲ್ಲಿ ಬಂದು ರಾತ್ರಿಯೇ ಹೋಗುತ್ತದೆ.

**ಆರ್ಥಿಕ ಸಮಸ್ಯೆ**

ಆಧುನಿಕ ಕೃಷಿಯನ್ನು ಕೈಗೊಳ್ಳಬೇಕಾದರೆ ಅಧಿಕ ಬಂಡವಾಳ ಸಂಚಲನವನ್ನು ಬೇಡುತ್ತದೆ. ಅದು ಬೀಜ ಕೊಳ್ಳುವಿಕೆ, ರಸಗೊಬ್ಬರ ಬಳಕೆ, ಕ್ರಿಮಿನಾಶಕ ಸಿಂಪಡಣೆ, ಕಳೆನಿರ್ವಹಣೆ, ಬೆಳೆ ಕಟಾವು,

ಸಂಸ್ಕರಣೆ – ಇತ್ಯಾದಿ ವಿಷಯಗಳಿಗೆ ಹಣವೇ ಪ್ರಧಾನ ವಾಗಿರುತ್ತದೆ. ಪ್ರಸ್ತುತ ಗ್ರಾಮೀಣ ಪ್ರದೇಶದಿಂದ ವಲಸೆ ಪ್ರಮಾಣವು ಅಧಿಕಗೊಳ್ಳುತ್ತಿರುವುದರಿಂದ ಕೃಷಿ ಕಾರ್ಮಿಕರ ಸಮಸ್ಯೆ ಉಲ್ಬಣಿಸಿದೆ. ವಾಣಿಜ್ಯ ಬೆಳೆ ಬೆಳೆದು ರಫ್ತು ಮಾಡುವ ರೈತ, ತನ್ನ ಆಹಾರವನ್ನು ಆಮದು ಮಾಡಿಕೊಳ್ಳುವ ಹಂತಕ್ಕೆ ತಲುಪಿದ್ದಾನೆ. ಗ್ರಾಮೀಣ ಪ್ರದೇಶದಲ್ಲಿ ತಮಗೆ ಬೇಕಾಗುವಷ್ಟು ರಾಗಿ, ಅವರೆಯನ್ನು ಬೆಳೆಯುತ್ತಿದ್ದೇವೆ ಎಂಬ ಹೇಳಿಕೆ ದಿಗ್ಭ್ರಮೆ ಹುಟ್ಟಿಸುವಂತಿದೆ. ಹಿಂದೆ ಎಲ್ಲರೂ ಒಂದೇ ಬೆಳೆ ಬೆಳೆಯುತ್ತಿದ್ದರು. ಯಾವುದೇ ಮಾರುಕಟ್ಟೆಗೆ ಆಹಾರ ಧಾನ್ಯಗಳನ್ನು ಒಯ್ಯುತ್ತಿರಲಿಲ್ಲ. ಆದರೆ ಇಂದು ಕನಿಷ್ಠ ಪ್ರಮಾಣದ ಜನರು ಆಹಾರ ಧಾನ್ಯಗಳನ್ನು ಬೆಳೆಯುತ್ತಿದ್ದಾರೆ. ಆದರೆ ಅವರೂ ಸಹ ಇಂದು ಮಾರುಕಟ್ಟೆಗೆ ತಮ್ಮ ಕೃಷಿ ಉತ್ಪನ್ನಗಳನ್ನು ಸಾಗಿಸುತ್ತಿದ್ದಾರೆ. ಇದರಿಂದಾಗಿ ಅಗತ್ಯ ವಸ್ತುಗಳ ಬೆಲೆ ಹೆಚ್ಚಳವಾದಾಗ, ಕೊಳ್ಳುವವರ ಪ್ರಮಾಣ ಇಳಿಕೆಯಾಗುತ್ತದೆ. ಇದರಿಂದಾಗಿ ಕೃಷಿ ಕೂಲಿ ಕಾರ್ಮಿಕರು ಅಧಿಕ ಕೂಲಿಯ ಬೇಡಿಕೆ ಇಡುತ್ತಾರೆ. ಪರಿಣಾಮವಾಗಿ ರೈತ ಅನಿವಾರ್ಯವಾಗಿ ನೀಡಲೇಬೇಕಾಗುತ್ತದೆ. ಇಲ್ಲಿ ಗ್ರಾಮೀಣ ವಲಸೆಯಿಂದ ಕೃಷಿ ಕಾರ್ಮಿಕರ ಸಮಸ್ಯೆ ಉಂಟಾಗಿರುತ್ತದೆ. ಆದ್ದರಿಂದ ಕೃಷಿ ಕಾರ್ಮಿಕರನ್ನು ಸೆಳೆಯುವಲ್ಲಿ ಪ್ರಬಲ ಸ್ಪರ್ಧೆ ರೈತರಲ್ಲಿಯೇ ಏರ್ಪಟ್ಟಿರುತ್ತದೆ. ಇದು ಒಡೆಯರಪಾಳ್ಯ ಗ್ರಾಮದಲ್ಲಿ ಅಲ್ಪವೆಂಬಂತೆ ಕಂಡು ಬಂದರೂ ಶಾಗ್ಯ ಗ್ರಾಮದಲ್ಲಿ ಒಂದು ದಿನ ಮುಂಚಿತವಾಗಿಯೇ ಕೂಲಿ ನೀಡುವ ಪರಿಪಾಠವಿದೆ. ಇಲ್ಲಿ ದುಡಿದ ಅಂದಿನ ಸಂಜೆಯೇ ಕೂಲಿಯನ್ನು ಪಾವತಿಸಬೇಕಾಗಿರುತ್ತದೆ. ತಪ್ಪಿದ ಪಕ್ಷದಲ್ಲಿ ಮತ್ತೊಮ್ಮೆ ಆತನ ಜಮೀನು / ತೋಟಕ್ಕೆ ಹೋಗಲು ಹಿಂಜರಿಯುತ್ತಾರೆ. ಈ ಹಿಂದೆ ಶಾಗ್ಯದಲ್ಲಿ ಬಲವಂತದ ದುಡಿಮೆ ದುಡಿಸಲಾಗುತ್ತಿತ್ತು. ಆದರೆ ಪರಿಸ್ಥಿತಿ ಈಗ ಬದಲಾಗಿದೆ. ಇಲ್ಲಿನ ಜನರು ಡಿಸೆಂಬರ್–ಜನವರಿಯಿಂದ ಏಪ್ರಿಲ್ ಮಾಸದವರೆಗೆ ಕೊಡಗಿನ ಕಾಫಿ ತೋಟಗಳಿಗೆ ನಿರ್ದಿಷ್ಟಾವಧಿ ವಲಸೆ ಹೋಗುತ್ತಾರೆ. ಇದು ಜನವರಿ ಫೆಬ್ರವರಿಯಲ್ಲಿ ಕೊಯ್ಲಿಗೆ ಬರುವ ಬೆಳೆಯ ಕಟಾವಿಗೆ ಮಾರಕವಾಗಿರುತ್ತದೆ.

ಈ ಮೇಲಿನ ವಲಸೆಯ ಕಾರಣದಿಂದಾಗಿಯೇ ಶಾಗ್ಯ ಗ್ರಾಮದಲ್ಲಿ ರಾಗಿ ಬೆಳೆಯುವುದನ್ನು ಕೈಬಿಟ್ಟಿದ್ದಾರೆ ಎಂಬುದು ನಮ್ಮ ಅರಿವಿಗೆ ಬಂದಿದೆ. ಏಕೆಂದರೆ ರಾಗಿಯನ್ನು ಫೆಬ್ರವರಿ ಮಾಸದಲ್ಲಿ ಕೊಯ್ಲುಮಾಡಿ ಅದನ್ನು ಮೆದೆ ಹಾಕಬೇಕು. ನಂತರ ಅದನ್ನು ಗುಂಡಿನಿಂದ ತುಳಿಸಿ, ತೂರುವ ಕೆಲಸವು ಅಧಿಕ ಮಾನವ ಶ್ರಮವನ್ನು ಬೇಡುತ್ತದೆ. ಇಲ್ಲಿನ ಮಾನವ ಸಂಪನ್ಮೂಲ ಅಧಿಕ ಕೂಲಿಯ ಆಸೆಗಾಗಿ ವಲಸೆ ಹೋಗಿ ಹಣ ಸಂಪಾದಿಸಿ ಬಂದು, ಅಗತ್ಯ ವಸ್ತುಗಳನ್ನು ಕೊಂಡು ತಿನ್ನುತ್ತಾರೆ.

ಒಡೆಯರಪಾಳ್ಯದಲ್ಲಿ ರಾಗಿ, ಅವರೆ, ನವಣೆ, ಸಾಮೆ, ಹುಚ್ಚೆಳ್ಳು ಇತ್ಯಾದಿಗಳ ಬೆಳೆ ಕುಸಿತಕ್ಕೆ/ನಾಶಕ್ಕೆ ಬೇರೆಯದೇ ಕಾರಣವಿದೆ. ಇಲ್ಲಿನ ಜನರ ವಲಸೆಯಿಂದಾಗಿ ಆಹಾರ ಬೆಳೆಗಳು ನಾಶವಾಗಿಲ್ಲ. ಬದಲಾಗಿ, ಹೊರಗಿನಿಂದ ಇಲ್ಲಿಗೆ ವಲಸೆ ಬಂದು ವರ್ಷದ ಅವಧಿ ಭೂಮಿಯನ್ನು ಗುತ್ತಿಗೆ ಪಡೆದ ತಮಿಳುನಾಡಿನ ವೆಳ್ಳಾಳ ಗೌಂಡರುಗಳ ಪಾತ್ರ ಮಹತ್ತರವಾಗಿದೆ. ಹಸಿರು ಕ್ರಾಂತಿ ಜರುಗಿದ ಪಂಜಾಬ್, ಪಶ್ಚಿಮ ಬಂಗಾಳ, ತಮಿಳುನಾಡು ಇವುಗಳಲ್ಲಿ ಬಹಳ ಪ್ರಾಬಲ್ಯ ಪಡೆದು, ಆಹಾರ ಧಾನ್ಯಗಳಾದ ಅಕ್ಕಿ ಮತ್ತು ಗೋಧಿಯನ್ನು ಉತ್ಪಾದಿಸುವತ್ತ ಗಮನ ಹರಿಸಲಾಗಿತ್ತು. ಅಲ್ಲದೆ ಮೂರು ತಿಂಗಳಿನಲ್ಲಿ ಫಲ ಕೊಡುವ ಆಲೂಗಡ್ಡೆ, ಬೆಳ್ಳುಳ್ಳಿ, ಬೀಟ್‌ರೂಟ್, ಕ್ಯಾರೆಟ್ ಇತ್ಯಾದಿಗಳನ್ನು ಬಹುಸಂಖ್ಯೆಯ ಜನರು ಬೆಳೆದು ಆರಂಭದಲ್ಲಿ ಅಧಿಕ ಬೆಲೆಗೆ ಮಾರಿ ಖುಷಿಪಟ್ಟರು. ಇದರ ಕಾರಣದಿಂದಾಗಿಯೇ ವೆಳ್ಳಾಳ ಗೌಂಡರು ಇಲ್ಲಿಗೆ ಬಂದು ವಾಣಿಜ್ಯ ಬೆಳೆಗಳನ್ನು ಬೆಳೆದು ತೋರಿಸಿದರು. ಇದರ ಪರಿಣಾಮವೇ ಇಲ್ಲಿ ವಾಣಿಜ್ಯ ಬೆಳೆಗಳು ತಳವೂರಲು ಸಾಧ್ಯವಾಯಿತು.

**ಕೃಷಿ ಸಾಲ**

ಇಂದಿನ ಕೃಷಿ ಉತ್ಪಾದನೆಯು ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಬಹುವಾಗಿ ಮುಂದುವರೆದಿದ್ದು, ಇತರೆ ಕ್ಷೇತ್ರಗಳಲ್ಲಿಯ ಉತ್ಪಾದಕರಂತೆ ಬಂಡವಾಳದ ಕೊರತೆಯನ್ನು ನೀಗಲು ರೈತರಿಗೆ ಸಾಲದ ಅವಶ್ಯಕತೆ ಬಹಳವಾಗಿದೆ. ಭೂಮಿಯು ನಿಸರ್ಗ ನಿರ್ಮಿತ ವಾದರೆ ಬಂಡವಾಳವು ಮಾನವ ನಿರ್ಮಿತವಾಗಿದೆ. ಜಾಗತೀಕರಣ ಯುಗದಲ್ಲಿ ಆಧುನಿಕ ಕೃಷಿಯನ್ನು ಕೈಗೊಳ್ಳಬೇಕಾದರೆ ಯಂತ್ರೋಪಕರಣಗಳು, ಕಚ್ಚಾಪದಾರ್ಥಗಳು, ನೇಗಿಲು, ಎತ್ತುಗಳು, ಬಿತ್ತನೆ ಬೀಜ, ರಾಸಾಯನಿಕ ಗೊಬ್ಬರಗಳು ಇವೆಲ್ಲವನ್ನು ಪಡೆಯಲು ಬಂಡವಾಳ ಅವಶ್ಯಕವಾಗಿದೆ. ಕೃಷಿ ಸಾಲದ ಪ್ರಧಾನ ಮೂಲವೆಂದರೆ ಹಳ್ಳಿಯ ಸಾಹುಕಾರರು, ಸರಕಾರ, ಸಹಕಾರ ಸಂಘಗಳು, ಲೇವಾದೇವಿಗಾರರು ಮತ್ತು ಮಾರುಕಟ್ಟೆಯ ಮಧ್ಯವರ್ತಿಗಳು.

ಒಡೆಯರಪಾಳ್ಯ ಗ್ರಾಮದಲ್ಲಿ ಒಂದು ಸಹಕಾರ ಸಂಘವಿದೆ. ಇದರ ಪ್ರಯೋಜನವನ್ನು ಹೆಚ್ಚಿನ ಮಂದಿ ಪಡೆದಿಲ್ಲ. ಕಾರಣ ಪಿತ್ರಾರ್ಜಿತವಾಗಿ ಬಂದಿರುವ ಭೂಮಿಯನ್ನು ಹಂಚಿಕೊಂಡಿರುವುದಾದರೂ ಅದರ ಮೂಲ ವಾರಸುದಾರರಿಂದ ತಮ್ಮ ಹೆಸರುಗಳಿಗೆ ನೋಂದಾವಣೆ ಮಾಡಿಸಿಕೊಂಡಿರುವುದಿಲ್ಲ. ಒಡೆಯರಪಾಳ್ಯದಿಂದ ೫ ಕಿ.ಮೀ. ದೂರದಲ್ಲಿರುವ ಪಿ.ಜಿ.ಪಾಳ್ಯದಲ್ಲಿ ಕಾವೇರಿ ಗ್ರಾಮೀಣ ಕಲ್ಪತರು ಬ್ಯಾಂಕು ಇದೆ. ಇದರಲ್ಲಿ ಪ್ರಯೋಜನ ಪಡೆದಿರುವವರು ಇದ್ದಾರೆ. ಆದರೆ ಖುಷ್ಕಿ ಭೂಮಿಗೆ ನೀಡುವ ಸಾಲದ ಪ್ರಮಾಣವು ಕಡಿಮೆ ಇರುವುದರಿಂದ ಅನಿವಾರ್ಯವಾಗಿ ಲೇವಾದೇವಿಗಾರರು ಮತ್ತು ಮಾರುಕಟ್ಟೆಯ ಮಧ್ಯವರ್ತಿಗಳಿಂದ ಸಾಲ ಪಡೆಯಲೇಬೇಕಾಗುತ್ತದೆ.

ಮಾರುಕಟ್ಟೆಯ ಮಧ್ಯವರ್ತಿ ಲೇವಾದೇವಿಗಾರರು ಬಿತ್ತನೆ ಬೀಜಗಳನ್ನು ಕಂಪನಿಗಳಿಂದ ಸಾಲದ ರೂಪದಲ್ಲಿ ಅಥವಾ ಕಡಿಮೆ ಕಂತಿನಲ್ಲಿ ಪಡೆದು, ಆರ್ಥಿಕವಾಗಿ ಸಬಲರಲ್ಲದವರಿಗೆ ಸಾಲದ ರೂಪದಲ್ಲಿ ನೀಡಿ ಬಡ್ಡಿಯನ್ನು ವಿಧಿಸುತ್ತಾರೆ. ಇಲ್ಲಿ ಕೃಷಿ ಒಡೆಯರಪಾಳ್ಯದಲ್ಲಿ ಆಲೂಗಡ್ಡೆ, ಬೆಳ್ಳುಳ್ಳಿ, ಮುಸುಕಿನ ಜೋಳ, ರಾಸಾಯನಿಕ ಗೊಬ್ಬರ ಇತ್ಯಾದಿಗಳು ಇವರುಗಳ ಮೇಲೆ ಅವಲಂಬಿತವಾಗಿರುತ್ತದೆ. ಅಲ್ಲದೆ, ಬಿತ್ತನೆ ಬೀಜ ನೀಡಿದ ಮಾರುಕಟ್ಟೆಯ ಮಧ್ಯವರ್ತಿ ಲೇವಾದೇವಿಗಾರರು ಹೇಳಿದ ಮಾರುಕಟ್ಟೆಗೆ ಕೃಷಿ ಉತ್ಪನ್ನವನ್ನು ಕೊಂಡೊಯ್ಯಬೇಕು. ಅಲ್ಲಿ ಸಾಲವನ್ನು ಮಧ್ಯವರ್ತಿಯ ಪರವಾಗಿ ಪಾವತಿಸಿಕೊಂಡು ಬಾಕಿ ಮೊತ್ತವನ್ನು ನೀಡುತ್ತಾರೆ.

ಆರ್ಥಿಕವಾಗಿ ಸಬಲರಾಗಿಲ್ಲದಿರುವುದು ಸಹ ರೈತರಿಗೆ ಸಮಸ್ಯೆಯಾಗಿ ಪರಿಣಮಿಸಿದೆ. ಇದು ಪೀಳಿಗೆಯಿಂದ ಪೀಳಿಗೆಗೆ ಮುಂದುವರೆದುಕೊಂಡು ಬರುತ್ತಿದೆ.

**ಮಾರುಕಟ್ಟೆಯ ಸಮಸ್ಯೆಗಳು**

ಬೇಸಾಯದಿಂದ ಬರುವ ಉತ್ಪನ್ನಗಳೆಲ್ಲವನ್ನೂ ಕೃಷಿ ಸರಕುಗಳೆಂದು ಹೇಳಬಹುದು. ಕೃಷಿಕರು ಬೆಳೆದ ರಾಗಿ, ಜೋಳ, ಆಲೂಗಡ್ಡೆ, ಮೆಣಸಿನಕಾಯಿ, ಅಕ್ಕಿ, ಮೆಕ್ಕೆಜೋಳ, ತಂಬಾಕು, ಹತ್ತಿ, ಸೆಣಬು ಮುಂತಾದವು ಕೃಷಿ ಸರಕುಗಳಾಗಿವೆ.

ಜಾಗತೀಕರಣದಂತಹ ಸಂದರ್ಭದಲ್ಲಿ ರೈತರಲ್ಲಿ ಸಂಘಟನೆಯ ಅಭಾವವಿದೆ. ಆದರೆ ಕೃಷಿ ಸರಕುಗಳನ್ನು ಖರೀದಿಸುವ ವ್ಯಾಪಾರಸ್ಥರು ಸಂಘಟಿತ ರಾಗಿದ್ದಾರೆ. ರೈತರು ಸುಸಂಘಟಿತರಾಗದ ಕಾರಣ ತಮ್ಮ ಸರಕುಗಳ ಮಾರಾಟದ ಸಮಯದಲ್ಲಿ ಅಧಿಕ ಬೆಲೆಗಾಗಿ ಚೌಕಾಸಿ ಮಾಡಲು ಅಸಮರ್ಥರಾಗಿದ್ದಾರೆ. ಪ್ರಸ್ತುತದ ಸಂದರ್ಭದಲ್ಲಿ ರೈತರು ಇನ್ನೊಬ್ಬ ವ್ಯಾಪಾರಸ್ಥ ನಿರ್ಧರಿಸಿದ ಬೆಲೆಗೆ ಮತ್ತೊಬ್ಬ ವ್ಯಾಪಾರಸ್ಥನಿಗೆ ಉತ್ಪನ್ನಗಳನ್ನು ಮಾರಾಟ ಮಾಡುವಂತಹ ನಿಸ್ಸಹಾಯಕ ಸ್ಥಿತಿಗೆ ತಲುಪಿದ್ದಾನೆ.

ರೈತರ ನಿಸ್ಸಹಾಯಕ ಸ್ಥಿತಿಗೆ ಕಾರಣ ಅಗತ್ಯ ಸಂಗ್ರಹಣಾಗಾರಗಳು ಇಲ್ಲದಿರುವುದು. ಈಗಾಗಲೇ ತಿಳಿಸಿರುವಂತೆ ಭಾರತದ ಬಹುಪಾಲು ರೈತರು ಬಡವರು ಮತ್ತು ಅನಕ್ಷರಸ್ಥರು. ಲೇವಾದೇವಿಗಾರರು ಊರಿನ ಶ್ರೀಮಂತರಿಂದ ಸಾಲ ಪಡೆದುದರ ಪರಿಣಾಮವಾಗಿ ಉತ್ಪನ್ನಗಳು ಕೊಯ್ಲಿಗೆ ಬಂದ ತಕ್ಷಣ ಅವರು ತಿಳಿಸಿದ ಮಂಡಿಗೆ ಸರಕನ್ನು ಹಾಕಬೇಕು. ಬೆಲೆ ಎಷ್ಟೇ ಇದ್ದರೂ ಸಹ ಅದರ ಗೋಜಿಗೆ ಲೇವಾದೇವಿಗಾರರು ಹೋಗುವುದಿಲ್ಲ. ಅವರಿಗೆ ತಮ್ಮ ಹಣ ಮಾತ್ರ ಮುಖ್ಯವಾಗಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ರೈತ ಮಾರುಕಟ್ಟೆಗೆ ತನ್ನ ಕೃಷಿ ಸರಕುಗಳನ್ನು ಒಯ್ದರೆ ಅಲ್ಲಿಯ ನಿಯಮಗಳನ್ನು ನೋಡಿ ಬೇಸ್ತು ಬೀಳುತ್ತಾನೆ. ತಾನು ಕಷ್ಟಪಟ್ಟು ಬೆಳೆದು ಲಾರಿಗೆ ಭರ್ತಿಮಾಡಿದ್ದನ್ನು ಮಾರುಕಟ್ಟೆಗೆ ಬಂದಾಕ್ಷಣ ಇಳಿಸುವಂತಿಲ್ಲ. ಇದಕ್ಕೆ ಹಣ ನೀಡಬೇಕು, ಇದು ಮಧ್ಯವರ್ತಿಗಳು ಹೂಡುವ ತಂತ್ರವಾಗಿರುತ್ತದೆ. ಪ್ರತೀ ಮೂಟೆಯನ್ನು ಇಳಿಸಲು ಮಂಡಿಯಲ್ಲಿ ೭ ರೂ.ಗಳನ್ನು ನಿಗದಿಪಡಿಸಿರುತ್ತಾರೆ. ಇದರಲ್ಲಿ ಕಾರ್ಮಿಕರಿಗೆ ೫ ರೂ. ನೀಡಿದರೆ ಮಂಡಿಯವರಿಗೆ ೨ ರೂ.ಗಳು ಸಂದಾಯವಾಗುತ್ತದೆ.

ಇದು ಮೇಟ್ಟುಪಾಳ್ಯಂ ಮಾರುಕಟ್ಟೆಯಲ್ಲಿ ಸ್ವತಃ ನಾನೇ ಕೃಷಿ ಸರಕುಗಳನ್ನು ಕೊಂಡೊಯ್ದ ಸಂದರ್ಭದಲ್ಲಿ ಅನುಭವಿಸಿದ ಘಟನೆ. ಅಲ್ಲದೆ, ಮಾರುಕಟ್ಟೆಯ ದಲ್ಲಾಳಿಗೆ ೧೦೦ ರೂ.ಗೆ ೧೦ ರೂ.ಗಳಂತೆ ಕಮಿಷನ್ ನೀಡಬೇಕು. ಹೀಗೆ ಹಲವಾರು ರೀತಿಯಲ್ಲಿ ರೈತರನ್ನು ಶೋಷಿಸಲಾಗುತ್ತಿದೆ.

ಜಾಗತೀಕರಣದ ಪ್ರಭಾವದಿಂದಾಗಿ ಕೃಷಿ ಉತ್ಪನ್ನ ಗಳನ್ನು ಅಂತರರಾಷ್ಟ್ರೀಯ ಮಾರುಕಟ್ಟೆಗೆ ಸರಬರಾಜು ಮಾಡುವವರು ಅನುಭವಿಸುವ ಸಮಸ್ಯೆಯು ಬೇರೆಯದೇ ರೀತಿಯಾಗಿರುತ್ತದೆ. ಅಂತರರಾಷ್ಟ್ರೀಯ ಮಾರುಕಟ್ಟೆಗೆ ಸರಬರಾಜಾಗುವ ವಸ್ತುಗಳು ಸಾರಿಗೆ ಸಮಸ್ಯೆಯನ್ನು ಮುಖ್ಯವಾಗಿ ಎದುರಿಸುತ್ತವೆ. ಅಗತ್ಯ ಸಮಯದಲ್ಲಿ ವಸ್ತುಗಳನ್ನು ವಿಮಾನಗಳು, ಹಡಗುಗಳು ಮತ್ತು ಭೂ ಸಾರಿಗೆಯ ಮುಖಾಂತರ ತಲುಪಿಸಬೇಕು. ಹೀಗೆ ಸರಬರಾಜಾಗುವ ವಸ್ತುಗಳು ಹಾಳಾಗದಂತೆ ಜಾಗ್ರತೆ ವಹಿಸಬೇಕು.

೨೦೧೬ರ ಮೇ ಮಾಸದಲ್ಲಿ ಭಾರತದಿಂದ ರಫ್ತಾಗುತ್ತಿದ್ದ ಮಾವಿನ ಹಣ್ಣಿನ ಮೇಲೆ ಬ್ರಿಟನ್ ನಿಷೇಧ ಹೇರಿದ್ದು, ಹಣ್ಣಿನ ಗುಣಮಟ್ಟದ ಕುರಿತಾಗಿರುತ್ತದೆ. ಇದು ಒಂದೆಡೆಯಾದರೆ ಭಾರತದಲ್ಲಿಯೇ ಸಾರ್ವಜನಿಕ ವಿತರಣೆಗೆ ತೊಂದರೆಯಾಗುತ್ತಿರುವುದು ಸಹ ಕೃಷಿಕರು ಮತ್ತು ಕೃಷಿ ಕಾರ್ಮಿಕರನ್ನು ಮತ್ತಷ್ಟು ಸಮಸ್ಯೆಯತ್ತ ಸಿಲುಕಿಸುತ್ತದೆ.

ಭಾರತದ ಈರುಳ್ಳಿ ಬೆಳೆಗಾರರು ೨೦೧೫ರ ಡಿಸೆಂಬರ್ ಮಾಸದಲ್ಲಿ ಅತ್ಯಧಿಕ ಈರುಳ್ಳಿ ರಫ್ತು ಮಾಡಿದ್ದರಿಂದ ದೇಶದಲ್ಲಿ ಹಣದುಬ್ಬರದ ಪರಿಸ್ಥಿತಿ ಉಂಟಾಗಿ ಈರುಳ್ಳಿ ಬೆಲೆ ೧೪೦ ರೂ.ಗಳಿಗೆ ಏರಿತ್ತು. ಅಂತಹ ಸಂದರ್ಭದಲ್ಲಿ ಕೇಂದ್ರ ಸರ್ಕಾರ ನೆರೆಯ ರಾಷ್ಟ್ರ ಪಾಕಿಸ್ತಾನದಿಂದ ಈರುಳ್ಳಿಯನ್ನು ಆಮದು ಮಾಡಿಕೊಂಡಿತು.

ಜಾಗತೀಕರಣವು 'ವಿಶ್ವವೇ ಒಂದು ಹಳ್ಳಿ' ಎಂಬ ಧ್ಯೇಯವಾಕ್ಯ ಹೊಂದಿದ್ದರೂ, ಮುಕ್ತ ಮಾರುಕಟ್ಟೆಯಿಂದ ಬರುವ ಬಟ್ಟೆಗಳು, ಸೌಂದರ್ಯ ಸಾಧನಗಳು, ಮೊಬೈಲುಗಳು ಇತ್ಯಾದಿಗಳನ್ನು ಹೊರತುಪಡಿಸಿದರೆ ಜಾಗತೀಕರಣವು ಭಾರತೀಯ ಹಳ್ಳಿಯ ಮುಗ್ಧ ಜನರಿಗೆ ವಿವಿಧ ಆಕರ್ಷಕ ಆಹಾರದ ಆಮಿಷ ಒಡ್ಡಿ ಬರಬಾರದ ರೋಗಗಳನ್ನು ಉಂಟುಮಾಡುತ್ತಿದೆ.

**ಅಂತರ್ಜಲದ ಸಮಸ್ಯೆ**

ಕೃಷಿಗೆ ನೀರಿನ ಅವಶ್ಯಕತೆ ಬಹಳ ಮುಖ್ಯ. ಆದ ಕಾರಣದಿಂದಲೇ ಕೃಷಿಯು ಮೊದಲಿಗೆ ನದಿ ತಟಗಳಲ್ಲಿ ಉಗಮವಾಗಿ ಅಲ್ಲಿಯೇ ನಾಗರಿಕತೆ ಬೆಳೆಯಲು ಅನುವು ಮಾಡಿಕೊಟ್ಟಿದ್ದು.

ಕೃಷಿ ಪ್ರಮುಖವಾಗಿ ಕಾಲುವೆ ನೀರಾವರಿ, ಬಾವಿ ನೀರಾವರಿ, ಕೊಳವೆ ಬಾವಿ ನೀರಾವರಿ ಮತ್ತು ಕೆರೆ ನೀರಾವರಿ ವ್ಯವಸ್ಥೆಯನ್ನು ಹೊಂದಿರುತ್ತದೆ. ಕಾಲುವೆ ಮತ್ತು ಕೆರೆ ನೀರಾವರಿಯಲ್ಲಿ ನಿರ್ದಿಷ್ಟ ಪಡಿಸಿದ ಸ್ಥಳದಲ್ಲಿ ನೀರನ್ನು ಶೇಖರಿಸಿ ಅದನ್ನು ಕಾಲುವೆಗಳ ಮುಖಾಂತರ ಹರಿಸಿ ವ್ಯವಸಾಯವನ್ನು ಕೈಗೊಳ್ಳಲಾಗುತ್ತದೆ. ಆದರೆ ಬಾವಿ ಮತ್ತು ಕೊಳವೆ ಬಾವಿ ನೀರಾವರಿ ವ್ಯವಸ್ಥೆಯು ಪ್ರಮುಖವಾಗಿ



## ವಧು ಪರೀಕ್ಷೆ ತಯಾರಿ

ಇನ್ನೇನು ಬಂದೇಬಿಟ್ಟರು ಕಣೇ...?
ಅಡಿಗೆ ಮನೆಯಿಂದ
ಕೂಗುತ್ತಿರುವಳು ಎನ್ನಮ್ಮಾ...!
ಕಾತರ ತುಂಬಿದ ಅವಳ ಕಣ್ಣು,
ಚಡಪಡಿಸುವ ಮನಸ್ಸು ,
ಏನಾಗುವುದೋ ಭಗವಂತಾ...!
ಪರಿತಪಿಸುವಾ ಅಮ್ಮನಾ ಈ ಮಂತ್ರ,
ಸದಾ ನನಗೆ ಜೋಗುಳಾ ತರಿಸುವಾ ತಂತ್ರ.

ಈ ಬಾರಿಯಾದರೂ ಒಪ್ಪಿಕೊಂಡು ಬಿಡೇ...!?
ಎನ್ನುವಾಗ ಹುಸಿನಗುವ ನಾ ನಕ್ಕಂತೆ,
ಕಣ್ಣರಳಿಸಿ, ಬಿರು ಕೋಪವ ತರಿಸಿ
ಸ್ಟ್ರಿಕ್ಟಾಗಿ ತಾಕೀತು ಮಾಡಿ
ಕೊಟ್ಟು ಬಿಟ್ಟಳೊಂದು ಬಳುವಳಿ
ಅದೊಂದು ಹನುಮಂತನ ಅಸ್ತಿನ ಹುಳಿ.

ಲಕ್ಷಣವಾಗಿ ಸೀರೆ ಉಡು,
ಹೂಂ... ಆಯ್ತಮ್ಮಾ,
ಕಾಣುವ ಹಾಗೆ ಬಿಂದಿ ಇಡು,
ಹೂಂ... ಆಯ್ತಮ್ಮಾ,
ಇವತ್ತು ನೀ ಜಡೆ ಹೆಣೆಯಲೇಬೇಕು
ಹೂ ಮುಡಿಯಲೇ ಬೇಕು,
ಹೂಂ... ಆಯ್ತಮ್ಮಾ...,

ಮುಖ ಸಿಂಡರಿಸಕೂಡದು,
ಗಹಗಹಿಸಿ ನಗಲಂತೂ ಕೂಡದೇ ಕೂಡದು,
ಹೂಂ... ಆಯ್ತಮ್ಮಾ
ಬಿಡುಬೀಸಾಗಿ ನಡೆದು,
ಗಟ್ಟಿಯಾಗಿ ಮಾತಾಡಿದರೆ
ಈ ಬಾರಿ ನನ್ನ ಸಾವು ಖಚಿತ...!

ಹೋಹೋ...! ಹೌದೇ ಹಾಗಾದ್ರೆ ಆಗಲಮ್ಮಾ...
ಎಂದುಬಿಟ್ಟೆ ,
ಅಯ್ಯೋ...! ತಿಳಿದುಬಿಟ್ಟಿತು ಎನ್ನ ಕಪಿಚೇಷ್ಟೆ
ಈ ದಿನ ಅವಳೆದುರು ಬಿದ್ದುಹೋಯ್ತು ಎನ್ನ ಪ್ರತಿಷ್ಠೆ ...?

ನನ್ನ ಓದಿಸಿದುದು ತಪ್ಪಾಯಿತೆಂಬ ಕಾರಣಕೆ
ಬಿಡಲೊಲ್ಲ ಅವಳು ಕಟ್ಟುವುದ ಹರಕೆ,
ಎಂಥಾ ಮೊಂಡು ಮಗಳ
ನೀಡಿದೆಯೋ ನಿ ಎನ್ನಪ್ಪಾ ...!
ಇವಳೊಪ್ಪಿದರೆ ನೀಡುವೆ ಕಾಣಿಕೆ ತಿಮ್ಮಪ್ಪಾ ...

ಅವರು ಬಂದಾಗ ಮುಖದಲ್ಲಿ ನಗುವ ತೊಟ್ಟು
ಮೆಲ್ಲಗೆ ಹೆಜ್ಜೆ ಇಟ್ಟು ,
ಕೇಳ್ವ ಪ್ರಶ್ನೆಗೆ ಉತ್ತರ ಕೊಟ್ಟು
ಒಳಗೆ ಬಂದುಬಿಡೇ
ತಾಯಿ ನನ್ನವ್ವಾ ...! ಎಂದು
ಕೈಮುಗಿಯುತ್ತಿದ್ದಾಳೆ.

ಅವಳು ನಿಂತ ಆ ಭಂಗಿಯ
ಮಿಸ್ ಮಾಡಿಕೊಳ್ವರುಂಟೇ...?

ಭಕ್ತೇ ಮುಗಿಯಿತೇ ನಿನ್ನ ವರಗಳು
ತಥಾಸ್ತು... ಎದ್ದೇಳು...
ಅದೆಷ್ಟು ಬಾರಿ ನನ್ನ ನೀ ಸಿಂಗಾರ ಮಾಡಿದರು
ನಾನೊಪ್ಪುವುದು ಎನ್ನ ಮನಕೊಪ್ಪಿದವನನ್ನೇ,
ಎಂದುಸುರಿದ ನನ್ನ ನೋಡಿ
ಇನ್ನಷ್ಟು ಕೂಗುತ್ತಾ ಮಾಡುತ್ತಿದ್ದಾಳೆ
ನನ್ನಮ್ಮ
ವಧುಪರೀಕ್ಷೆಗೆ ತಯಾರಿ...!

**ಭವ್ಯಪ್ರಭ**
೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ, ಕಮಲಾನಗರ, ಬೆಂಗಳೂರು – ೫೬೦ ೦೭೯

ಅಂತರ್ಜಲವನ್ನು ನೆಚ್ಚಿಕೊಂಡಂತಹ ಬೇಸಾಯ ಪದ್ಧತಿಯಾಗಿದೆ. ಪ್ರಸ್ತುತ ಜಗತ್ತಿನಾದ್ಯಂತ ೬೬.೩ ಕೋಟಿ ಜನರಿಗೆ ಕುಡಿಯುವ ಶುದ್ಧ ನೀರು ಸಿಗುತ್ತಿಲ್ಲ. ಭಾರತದಲ್ಲಿಯೇ ೬ ಕೋಟಿ ಜನರಿಗೆ ಕುಡಿಯಲು ನೀರು ದೊರಕುತ್ತಿಲ್ಲ.

ಕೊಳ್ಳೇಗಾಲ ತಾಲೂಕಿನಲ್ಲಿ ೧೦ ವೃಷ್ಟಿ ಮಾಪನಗಳು ಕಾರ್ಯ ನಿರ್ವಹಿಸುತ್ತಿವೆ. ಅವುಗಳಲ್ಲಿ ನನ್ನ ಅಧ್ಯಯನ ಕ್ಷೇತ್ರವಾದ ಶಾಗ್ಯ ಗ್ರಾಮ ದಲ್ಲೊಂದಿದೆ. ಕೊಳ್ಳೇಗಾಲ ತಾಲೂಕಿನಲ್ಲಿ ವಾಡಿಕೆ ಮಳೆಯ ಪ್ರಮಾಣ ೮೮೨.೧ ಮಿ.ಮೀ. ಆದರೆ ಮಳೆಯ ಅಭಾವದ ಕಾರಣ ೨೦೦೧ರಲ್ಲಿ ೬೧೯ ಮಿ.ಮೀ. ಮಳೆಯಾಗಿದೆ. (ಚಾ.ನ., ಜಿ.೬೮೮-ಅಂಶ-೨೦೧೫-೧೬) ೨೦೦೧ರ ನಂತರ ಅತಿ ಹೆಚ್ಚು ಮಳೆ ಪಡೆದ ವರ್ಷ ೨೦೦೪ರಲ್ಲಿ ೧೯೦ ಮಿ.ಮೀ.ನಷ್ಟು ಮಳೆ ಸಂಭವಿಸಿದೆ. ೨೦೧೫-೧೬ನೇ ಸಾಲಿನಲ್ಲಿ ತಾಲೂಕಿನಲ್ಲಿ ಬರದ ಪರಿಸ್ಥಿತಿ ಉಂಟಾಗಿ ಮಳೆಯ ಪ್ರಮಾಣವು ೪೧೨ ಮಿ.ಮೀ.ಗಿಂತಲೂ ಕಡಿಮೆ ಎಂದು ಅಂದಾಜಿಸಲಾಗಿದೆ. ಕೊಳ್ಳೇಗಾಲ ತಾಲೂಕಿನ ವಾಡಿಕೆ ಮಳೆಯ ದಿನಗಳು ೫೨ ಇದ್ದವು. ಆದರೆ ೨೦೧೫-೧೬ರಲ್ಲಿ ಅವು ೩೯ ದಿನಗಳಿಗೆ ಇಳಿದಿದೆ. ಮಳೆಯ ಪ್ರಮಾಣವು ಅಂತರ್ಜಲವನ್ನು ಕುಸಿಯುವಂತೆ ಮಾಡಿದೆ. ಅಲ್ಲದೆ, ಆಧುನಿಕ ಕೃಷಿಯನ್ನು ಕೈಗೊಂಡ ರೈತ ಬೆಳೆಗೆ ನೀರೊದಗಿಸಲು ಕೊಳವೆಬಾವಿಯನ್ನು ಕೊರೆಸಿದ ನಂತರದಲ್ಲಿ ಮತ್ತೊಂದು - ಹೀಗೆ ಕೊಳವೆಬಾವಿಗಳ ಸಂಖ್ಯೆ ಅಧಿಕವಾದಂತೆ ಎಲ್ಲಾ ಬೋರ್‌ವೇಲ್ ಗಳಲ್ಲಿಯೂ ನೀರಿನ ಮಟ್ಟ ಕುಸಿಯತೊಡಗಿತು.

ಸುಮಾರು ೧೫ ವರ್ಷಗಳ ಹಿಂದೆ ಶಾಗ್ಯ ಗ್ರಾಮವು ಬಾವಿ ನೀರಾವರಿ ವ್ಯವಸ್ಥೆಯನ್ನು ನೆಚ್ಚಿಕೊಂಡಿತು ಮತ್ತು ಕುಡಿಯುವ ನೀರಿನ ವ್ಯವಸ್ಥೆಯೂ ಸಹ ಬಾವಿ ನೀರಿನಿಂದಲೇ ಸಾಗುತ್ತಿತ್ತು. ಅಂದು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದವರ ಪ್ರಮಾಣ ವಿರಳವಾಗಿತ್ತು. ಅದರಿಂದ ಒಂದೊಂದು ತೋಟದಲ್ಲಿಯೂ ೨-೩ ಬಾವಿಗಳು ಕಾರ್ಯ ನಿರ್ವಹಿಸುತ್ತಿದ್ದವು. ಶಾಗ್ಯ ಗ್ರಾಮದ ಪ್ರತಿಷ್ಠಿತ ಮನೆತನಗಳಾದ ಸಿದ್ದಮಲ್ಲಪ್ಪ ಮತ್ತು ಅಣ್ಣಯ್ಯಪ್ಪನ ಮಕ್ಕಳನ್ನು ಹೊರತುಪಡಿಸಿದಂತೆ ಉಳಿದ ಬಹುತೇಕರು ಸಾಂಪ್ರದಾಯಿಕ ಕೃಷಿಯನ್ನು ಕೈಗೊಂಡು ಮಳೆಯಾಶ್ರಿತ ಬೆಳೆ ಬೆಳೆಯುತ್ತಿದ್ದರು. ಪ್ರಥಮ ಬಾರಿಗೆ ೨೦೦೬ರಲ್ಲಿ ಕೊಳ್ಳೇಗಾಲ ತಾಲೂಕಿನಲ್ಲಿ ೪೧೨ ಮಿ.ಮೀ. ಅತೀ ಕೊರತೆಯ ಮಳೆಯಾದರೂ ಬರದಿಂದ ಸ್ವಲ್ಪ ದೂರವೇ ಉಳಿದಿದ್ದರು. ಆದರೂ ೨೦೦೭ರಲ್ಲಿ ಸ್ವಲ್ಪ ಉತ್ತಮ ಮಳೆಯಾಗಿತ್ತು. ಊರನ್ನು ಆಳಿದ ಗೌಡತನ ಮಾಡಿದ ಮನೆತನಗಳಾದ್ದರಿಂದ ಊರಿಗೆ ಹತ್ತಿರ ಅಥವಾ ಊರ ಮಧ್ಯದ ಸ್ಥಳದಲ್ಲಿ ಇವರ ಜಮೀನುಗಳಿದ್ದವು.

ಸರ್ಕಾರ ಗಂಗಾ ಕಲ್ಯಾಣ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಸಬ್ಸಿಡಿ ಆಧಾರದಲ್ಲಿ ಕೊಳವೆಬಾವಿ ಕೊರೆಸುವ ಯೋಜನೆಯನ್ನು ತಂದಿತು. ಇದು ಸರ್ಕಾರ ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹ ಮತ್ತು ದುರ್ಬಲ ವರ್ಗದವರ ಸಮಲೀಕರಣ ಎಂಬಿತ್ಯಾದಿ ಹೆಸರಿನೊಂದಿಗೆ ಯೋಜನೆಯನ್ನು ಆರಂಭಿಸಿತು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಭೂಮಿಗಳಿಗೆ ಹಂತ ಹಂತವಾಗಿ ಕೊಳವೆ ಬಾವಿ ಕೊರೆಯಲು ಆರಂಭವಾಯಿತು. ಮೊದಲಿಗೆ ತುಂಬಿ ತುಳುಕುತ್ತಿದ್ದ ಬಾವಿಗಳು ಬತ್ತಿದ್ದವು. ನಂತರದಲ್ಲಿ ಎರಡನೇ ವರ್ಷದಲ್ಲಿ ಮತ್ತಷ್ಟು ಕೊಳವೆ ಬಾವಿಗಳಾದವು. ಇವು ಮೊದಲು ಕೊರೆಸಿದ ಕೊಳವೆ ಬಾವಿಗಳಿಗಿಂತ ೫೦ರಿಂದ ೧೦೦ ಅಡಿ ಆಳಕ್ಕೆ ಕೊರೆಸಿದವು. ಪರಿಣಾಮವಾಗಿ ಮೊದಲ ಹಂತದ ಕೊಳವೆ ಬಾವಿಗಳು ವಿಫಲವಾದವು. ಕೊಳವೆ ಬಾವಿಯ ನೀರನ್ನು ನಂಬಿ ಬೆಳೆ ಬಿತ್ತಿದ ರೈತರು ಕಂಗಲಾಗಿ ಮತ್ತೆ ಬೋರ್ ಕೊರೆಸಿದರೂ ಪ್ರಯೋಜನವಾಗಲಿಲ್ಲ. ಪ್ರಸ್ತುತ ಶಾಗ್ಯ ಗ್ರಾಮದಲ್ಲಿ ನೀರಿನ ಕ್ಷೋಭೆ ಉಂಟಾಗುವ ಹಂತಕ್ಕೆ ತಲುಪಿದೆ. ಪ್ರಸ್ತುತ ನಮ್ಮ ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಮನನವಾದ ವಿಚಾರವೆಂದರೆ ಕಾಡಂಚಿನ ಜಮೀನುಗಳಲ್ಲಿ ಮಾತ್ರ ಕೊಳವೆ ಬಾವಿಗಳು ಕಾರ್ಯ ನಿರ್ವಹಿಸುತ್ತಿವೆ.

ಸರ್ಕಾರದಿಂದ ಕೊರೆಸಿರುವ ಬೋರ್‌ಗಳು ಯಾವುದೇ ಅಂತರವನ್ನು ಕಾಯ್ದುಕೊಂಡಿಲ್ಲ. ಒಂದು ಬೋರ್‌ನಿಂದ ಮತ್ತೊಂದು ಬೋರ್‌ಗೆ ಕನಿಷ್ಠ ೧೦೦ ಮೀಟರ್ ಅಂತರವಾದರೂ ಇರಬೇಕು. ಆದರೆ ಇಲ್ಲಿ ಕೆಲವು ಬೋರ್‌ಗಳು ೫೦-೬೦ ಮೀ ಅಂತರದಲ್ಲಿವೆ. ಶಾಗ್ಯ ಗ್ರಾಮದಲ್ಲಿ ಕೊಳವೆ ಬಾವಿಯನ್ನು ಕೊರೆಸುವ ತರಾತುರಿಯಲ್ಲಿ ಸರ್ಕಾರದ ಅಧಿಕಾರಿಗಳು ಮತ್ತು ಜನರು ಕೆಲವೊಂದು ನಿಯಮಗಳನ್ನು ಪಾಲಿಸದೆ ಸಿಕ್ಕಿದ ಕಡೆಯಲ್ಲೆಲ್ಲಾ ಕೊಳವೆ ಬಾವಿ ಕೊರೆಸಿ ಅಂತರ್ಜಲವನ್ನು ಬರಿದುಮಾಡಿದ್ದಾರೆ. ಈಗ ಅದೇ ರೈತ ಜಲ ಮರುಪೂರಣದ ಬಗ್ಗೆ ತಿಳಿದು, ಕಾರ್ಯ ನಿರ್ವಹಿಸಬೇಕಾಗಿದೆ. ಸಾಂಪ್ರದಾಯಿಕ ಬೇಸಾಯ ಪದ್ಧತಿಯಿಂದ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರಾರಂಭಿಸಿ, ನೀರು ಸೋತ ನಂತರ ಮತ್ತದೇ ಸಾಂಪ್ರದಾಯಕ ಬೆಳೆಗಳನ್ನು ಬೆಳೆಯುತ್ತಿದ್ದಾರೆ.

## ಅಭಿನಂದನೆಗಳು...

ಕರ್ನಾಟಕ ಸಾಹಿತ್ಯ ಅಕಾಡೆಮಿಯ ೨೦೧೭ನೇ ಸಾಲಿನ ಗೌರವ ಪ್ರಶಸ್ತಿಯು ಹಿರಿಯ ಸಾಹಿತಿಗಳಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯ, ಪ್ರೊ॥ ಸೋಮಶೇಖರ ಇಮ್ರಾಪುರ, ಪ್ರೊ॥ ಎಚ್. ಜೆ. ಲಕ್ಕಪ್ಪಗೌಡ, ಪ್ರೊ॥ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಹಾಗೂ ಶ್ರೀಮತಿ ಕಸ್ತೂರಿ ಬಾಯರಿ ಅವರಿಗೆ ಲಭಿಸಿದೆ.

ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಒಡೆಯರಪಾಳ್ಯ ಗ್ರಾಮದಲ್ಲಿ ಇಂತಹ ಪರಿಸ್ಥಿತಿ ಈಗಷ್ಟೇ ಉದ್ಭವವಾಗುತ್ತಿದೆ. ಒಡೆಯರಪಾಳ್ಯವು ಒಂದು ಗುಡ್ಡದ ಮೇಲಿನ ಹಳ್ಳಿಯಂತಿದ್ದು, ಪೂರ್ವ ಮತ್ತು ಪಶ್ಚಿಮದಲ್ಲಿ ಇಳಿಜಾರಿನಿಂದ ಕೂಡಿದ್ದು, ಇಲ್ಲಿ ಸಣ್ಣ ಝರಿಗಳು ಹರಿಯುತ್ತಿದ್ದವು. ಒಡೆಯರಪಾಳ್ಯಕ್ಕಿಂತ ಸುತ್ತಮುತ್ತಲಿನ ಗ್ರಾಮಗಳಾದ ಹುತ್ತೂರು, ಹುಣಸೇಪಾಳ್ಯ ಗ್ರಾಮಗಳಲ್ಲಿ ೨೦೧೬-೧೭ನೇ ಸಾಲಿನಲ್ಲಿ ಕುಡಿಯುವ ನೀರಿನ ಸಮಸ್ಯೆ ತಲೆದೋರಿದೆ. ಹುತ್ತೂರಿನಲ್ಲಿ ೨೦೧೭ನೇ ವರ್ಷ ಮುಂಗಾರು ನೆಚ್ಚಿಕೊಂಡು ಬೆಳ್ಳುಳ್ಳಿ ಹಾಕಿರುವ ರೈತರು ಮಳೆ ಇಲ್ಲದೆ ಕಂಗಲಾಗಿದ್ದಾರೆ.

ಅಂತರ್ಜಲ ಬಳಕೆಯಲ್ಲಿ ಭಾರತವು ಮೊದಲನೇ ಸ್ಥಾನದಲ್ಲಿದ್ದು, ದೇಶದಲ್ಲಿ ಪ್ರತಿವರ್ಷ ೨೫೧ ಘನ ಮೀಟರ್ ಅಂತರ್ಜಲವನ್ನು ಹೊರತೆಗೆಯಲಾಗುತ್ತಿದೆ. ಇದು ಬಾಕ್ರ ಅಣೆಕಟ್ಟಿನಲ್ಲಿನ ಶೇಖರಣೆಯ ೨೬ಪಟ್ಟು ಅಧಿಕವೆಂದು ಯುನೆಸ್ಕೊ ವರದಿ ಮಾಡಿದೆ.

೨೦೧೬ರ ಜನವರಿಯಲ್ಲಿ ದೇಶದಾದ್ಯಂತ ಶೇಕಡ ೩೦ರಷ್ಟು ಬಾವಿಗಳಲ್ಲಿ ಮಾತ್ರ ನೀರು ನಾಲ್ಕು ಮೀಟರ್‌ಗಿಂತ ಹೆಚ್ಚು ಇತ್ತು, ಎಂದು ಕೇಂದ್ರೀಯ ಅಂತರ್ಜಲ ಮಂಡಳಿಯು ೨೦೧೬ರ ವರದಿಯಲ್ಲಿ ಹೇಳಿದೆ. ಅಲ್ಲದೆ, ಶೇಕಡ ೩೫ರಷ್ಟು ಬಾವಿಗಳಲ್ಲಿ ಮಾತ್ರ ಹೆಚ್ಚಳವಾಗಿದ್ದರೆ ಶೇಕಡ ೬೪ರಷ್ಟು ಬಾವಿಗಳ ನೀರಿನ ಮಟ್ಟ ಕುಸಿದಿದೆ. ಅಂತರ್ಜಲ ಬಳಕೆಯಲ್ಲಿ ದ್ವಿತೀಯ ಸ್ಥಾನವನ್ನು ಚೀನಾ ಮತ್ತು ಅಮೆರಿಕಾ ದೇಶಗಳು ಪಡೆದಿವೆ.

ಅಂತರ್ಜಲ ಮೌಲೀಕರಣವು ಪ್ರತೀ ಮೂರು ವರ್ಷಗಳಿಗೊಮ್ಮೆ ನಡೆಯುತ್ತದೆ. ರಾಜ್ಯದಲ್ಲಿ ೨೦೧೭ನೇ ಸಾಲಿನಲ್ಲಿ ಹಿಂಗಾರು ಮಳೆಯ ಕೊರತೆ ಶೇ. ೭೬ರಷ್ಟಿದ್ದು, ೪೬ ವರ್ಷಗಳಲ್ಲಿ ಅತಿ ಹೆಚ್ಚಿನ ಕೊರತೆಯಾಗಿದೆ.

೨೦೧೩ ಮತ್ತು ೨೦೧೬ನೇ ಅವಧಿಯಲ್ಲಿ ಕರ್ನಾಟಕ ರಾಜ್ಯ ಸರ್ಕಾರವು ೧೪೧ ತಾಲೂಕು ಗಳನ್ನು ಬರದ ತಾಲೂಕುಗಳೆಂದು ಘೋಷಿಸಿದೆ. ಇಲ್ಲಿ ಅಂತರ್ಜಲ ಮಟ್ಟವು ಕುಸಿದಿದೆ. ಕರಾವಳಿ ಮತ್ತು ಮಲೆನಾಡು ಪ್ರದೇಶಗಳ ಜಿಲ್ಲೆಗಳಲ್ಲಿ ಮಾತ್ರ ಅಂತರ್ಜಲ ಮಟ್ಟದ ಸ್ಥಿತಿಯು ಸಾಮಾನ್ಯವಾಗಿದೆ.

ಈ ಎಲ್ಲದರ ನಡುವೆ ರಾಜ್ಯ ಸರ್ಕಾರವು ಮಂಗಳೂರು ಮತ್ತು ಉಡುಪಿ ಜಿಲ್ಲೆಗಳಲ್ಲಿ ಕೊಳವೆ ಬಾವಿ ಕೊರೆಸುವುದನ್ನು ನಿಷೇಧಿಸಿದೆ ಮತ್ತು ಅದರ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳ ಮೇಲೆ ಹೊರಿಸಿದೆ. ಕಾರಣ ರಾಜ್ಯದಲ್ಲಿ ಕಳೆದೊಂದು ದಶಕದಲ್ಲಿ ಅಂತರ್ಜಲದ ಮಟ್ಟವು ಶೇಕಡ ೮೫ರಷ್ಟು ಕುಸಿದಿದೆ ಎಂದು ಕೇಂದ್ರ ಜಲ ಆಯೋಗ ಇತ್ತೀಚಿನ ವರದಿಯನ್ನು ಬಿಡುಗಡೆ ಮಾಡಿದೆ.

**ಶಂಕರ ಆರ್.**
ಸಂಶೋಧನಾ ವಿದ್ಯಾರ್ಥಿ, ಮಾನವಶಾಸ್ತ್ರ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

**ಡಾ॥ ಬಿ. ಆರ್. ವಿಜಯೇಂದ್ರ**
ಸಹಾಯಕ ಮಾನವಶಾಸ್ತ್ರಜ್ಞರು, ಅಂತ್ರೋಪಾಲಿಜಿಕಲ್
ಸರ್ವೇ ಆಫ್ ಇಂಡಿಯಾ, ಮೈಸೂರು

ಎಸ್. ಮಂಜುನಾಥ

**೫೦ ವರ್ಷಗಳ ಕಾಲ ಗಾಲಿಕುರ್ಚಿಗೆ ಒರಗಿಕೊಂಡು, ೧೯೮೬ರಲ್ಲಿ ನಿಮೋನಿಯದಿಂದ ತನ್ನ ಧ್ವನಿಯನ್ನೂ ಕಳೆದುಕೊಂಡು, ಕತ್ತಿನ ಮೇಲ್ಭಾಗ ಮತ್ತು ಕೈಬೆರಳುಗಳ ಸಣ್ಣ ಚಲನೆ ಹೊರತುಪಡಿಸಿ ದೇಹದ ಯಾವುದೇ ಭಾಗ ಸ್ವಾಧೀನದಲ್ಲಿ ಇರದಿದ್ದರೂ, ಕಳೆದ ೩೨ ವರ್ಷಗಳಿಂದ ಕಂಪ್ಯೂಟರ್ ಜನ್ಯ ಕೃತಕ ಧ್ವನಿಯಿಂದ ಬಾಹ್ಯ ಜಗತ್ತಿನೊಂದಿಗೆ ಸಂವಹಿಸುತ್ತ, ತನ್ನ ಸಂಶೋಧನೆಯ ಜೊತೆಗೆ ಪ್ರಮುಖ ಜಾಗತಿಕ ವಿದ್ಯಮಾನಗಳಿಗೆ ಸ್ಪಂದಿಸುತ್ತ, ಪ್ರೌಢ ವಿಚಾರಗಳ ಚಿಲುಮೆಯಾಗಿ, ಕಪ್ಪು ಕುಳಿಗಳ ವಕ್ತಾರರಾಗಿ ಕೊನೆಯವರೆಗೂ ಜೀವಿಸಿದ್ದು ಅನುಕರಣೀಯ.**

# ಕಪ್ಪು ಕುಳಿಯ ವಕ್ತಾರ ಸ್ಟೀಫನ್ ಹಾಕಿಂಗ್



ಮಿದುಳೊಂದು ಹೊರತುಪಡಿಸಿ, ಇಡೀ ದೇಹವೇ ನಿಶ್ಚಲವಾಗಿದ್ದರೂ, ಸೈದ್ಧಾಂತಿಕ ಭೌತವಿಜ್ಞಾನದಲ್ಲಿ, ಅದರಲ್ಲೂ ಕಪ್ಪು ಕುಳಿಯ ಬಗ್ಗೆ ಅಗಾಧ ಸಂಶೋಧನೆಗೈದು, ದೇಶ–ವಿದೇಶಗಳಲ್ಲಿ ಖಗೋಳ ವಿಜ್ಞಾನವನ್ನು ಜನಪ್ರಿಯಗೊಳಿಸಿ, ಅಭಿನವ ಐನ್‌ಸ್ಟೈನ್ ಎಂದು ಪ್ರಖ್ಯಾತರಾಗಿ, ಬದುಕಿದ್ದಾಗಲೇ ದಂತಕಥೆಯಾಗಿದ್ದವರು ಸ್ಟೀಫನ್ ಹಾಕಿಂಗ್. ಕಾಲ ಮತ್ತು ವ್ಯೋಮದ ಕುರಿತು ಇನ್ನಿಲ್ಲದ ಸಂಶೋಧನೆ ನಡೆಸಿದ ಈ ಮಹಾನ್ ವಿಜ್ಞಾನಿ, ಇನ್ನಿಲ್ಲವೆಂಬುದು ಕಾಲದ ಮಹಿಮೆ ಅನ್ನದೇ ಅನ್ಯ ಮಾರ್ಗವಿಲ್ಲ.

ಮಹಾನ್ ವಿಜ್ಞಾನಿ ಗೆಲಿಲಿಯೊ ನಿರ್ಗಮಿಸಿದ ೩೦೦ನೇ ವರ್ಷಾಚರಣೆಯ ದಿನದಂದು, ಅಂದರೆ ೧೯೪೨ರ ಜನವರಿ ೮ರಂದು ಜನಿಸಿ, ಕಾಕತಾಳೀಯವಾಗಿ ಮಾರ್ಚ್ ೧೪, ಐನ್‌ಸ್ಟೈನ್ ಹುಟ್ಟಿದ ದಿನವೇ ತೀರಿದ ವಿಜ್ಞಾನಿ ಸ್ಟೀಫನ್ ಹಾಕಿಂಗ್. ಸಹಸ್ರ ವರ್ಷಗಳ ವಿಜ್ಞಾನೇತಿಹಾಸದಲ್ಲಿ, ಜಗತ್ತು ಅನೇಕ ಮಹಮಹಾನ್ ವಿಜ್ಞಾನಿಗಳನ್ನು ಕಂಡಿದೆ, ಆದರೆ ಹಾಕಿಂಗ್ ರೀತಿ ಬದುಕಿ ವಿಶ್ವದುಗಮದ ಬಗ್ಗೆ ಅನ್ವೇಷಣೆಗಳನ್ನು ಕೈಗೊಂಡಿರುವವರು ಮಾತ್ರ ಅತ್ಯಪರೂಪ. ಇಂಥ ಅನನ್ಯ ವಿಜ್ಞಾನಿಯ ಸಮಕಾಲೀನರು ನಾವು, ಎನ್ನುವುದೇ ಹೆಮ್ಮೆಯ ವಿಷಯವಾಗಿದೆ.

ಇಂಗ್ಲೆಂಡಿನ ಆಕ್ಸ್‌ಫರ್ಡ್‌ನಲ್ಲಿ ವೈದ್ಯ ತಂದೆ ಫ್ರಾಂಕ್ ಮತ್ತು ತಾಯಿ ಇಸೊಬೆಲ್ಲರಿಗೆ ಜನಿಸಿದ ಸ್ಟೀಫನ್, ಆರಂಭಿಕ ವರ್ಷಗಳಲ್ಲಿ ಎಲ್ಲ ಸಾಮಾನ್ಯ ಮಕ್ಕಳಂತೆಯೇ ಇದ್ದವ. ಓದಿನಲ್ಲಿಯೂ ಸಾಧಾರಣ, ಕೀಟಲೆಗಳಲ್ಲೂ ಸಾಧಾರಣ. ಬಾಲಕ ಸ್ಟೀಫನ್‌ಗೆ ಹೊಸ ಹೊಸ ಪ್ರಯೋಗಗಳಲ್ಲಿ ಆಸಕ್ತಿ. ತನ್ನ ಹದಿನಾರನೇ ವಯಸ್ಸಿನಲ್ಲಿಯೇ, ಬಿಸಾಡಲ್ಪಟ್ಟ ಎಲೆಕ್ಟ್ರಾನಿಕ್ ವಸ್ತುಗಳನ್ನು ಬಳಸಿ, ಗಣಕದ ಮಾದರಿಯನ್ನು ತಯಾರಿಸಿದ್ದ. ಗಣಿತದಲ್ಲಿ ಅತೀವ ಆಸಕ್ತಿ ಇದ್ದ ಕಾರಣ, ಸ್ಟೀಫನ್ ತನ್ನ ಅಧ್ಯಯನಕ್ಕೆ ಆಕ್ಸ್‌ಫರ್ಡ್‌ನಲ್ಲಿ ಭೌತವಿಜ್ಞಾನ ವಿಷಯ ಆಯ್ಕೆ ಮಾಡಿಕೊಂಡ. ಈ ನಿರ್ಧಾರವು ತನ್ನ ಜೀವನಕ್ಕೆ ಹೊಸ ತಿರುವನ್ನೇ ನೀಡಿದ್ದು ಮಾತ್ರ ವಿಶೇಷ. ೧೯೬೩, ವಿಶ್ವವಿಜ್ಞಾನದ ವಿಷಯದ ಮೇಲೆ ಕೇಂಬ್ರಿಜ್ ವಿ.ವಿ.ಯ ಟ್ರಿನಿಟಿ ಹಾಲ್‌ನಲ್ಲಿ, ತನ್ನ ಪಿ.ಎಚ್‌ಡಿ. ನೋಂದಾಯಿಸಿದ ಕೆಲ ತಿಂಗಳುಗಳಲ್ಲಿಯೇ ವಿರಳಾತಿ ವಿರಳ ಮತ್ತು ವಿಲಕ್ಷಣವಾದ ಮೋಟಾರ್ ನ್ಯೂರಾಲ್ ಕಾಯಿಲೆಗೆ ತುತ್ತಾಗಿದ್ದು, ಶಾಪದಲ್ಲಿ ಸಿಕ್ಕ ವರ ಎನ್ನುವಂತಾಯಿತು! ಹೆಚ್ಚೆಂದರೆ, ಸ್ಟೀಫನ್ ಎರಡೂವರೆ ವರ್ಷ ಬದುಕಬಹುದು ಎಂದು ವೈದ್ಯರು ಅದಾಗಲೇ ನಿರ್ಧರಿಸಿಯಾಗಿತ್ತು. ತೀವ್ರ ಖಿನ್ನತೆಗೆ ಒಳಗಾಗಿದ್ದ ೨೧ರ ಹರೆಯದ ಸ್ಟೀಫನ್, ಒಂದೆಡೆ ತನ್ನ ಸಂಶೋಧನೆಯ ಕುರಿತು ಯೋಚಿಸಿದರೆ, ಮತ್ತೊಂದೆಡೆ ತನ್ನ ಜೀವನದ ಅಂತ್ಯದ ಬಗ್ಗೆ ದಿಗಿಲುಗೊಂಡಿದ್ದ.

ಪಾರ್ಟಿಯೊಂದರಲ್ಲಿ ಜೇನ್ ಎಂಬ ಯುವತಿಯ ಪರಿಚಯವಾಗಿದ್ದ ಸ್ಟೀಫನ್‌ಗೆ, ಪರಿಚಯ ಸ್ನೇಹಕ್ಕೆ ತಿರುಗಿದಾಗ ಆಕೆಯ ಬಳಿ ಮನಬಿಚ್ಚಿ ಮಾತನಾಡಿ, ತನ್ನ ಕಾಯಿಲೆಯ ಸ್ಥಿತಿಯನ್ನು ಹೇಳಿಕೊಂಡ. ನಂತರ, ಆಕೆಯ ಬಳಿ ತಮ್ಮಿಬ್ಬರ ಮದುವೆಯ ಪ್ರಸ್ತಾಪವನ್ನೂ ಮಾಡಿದ. ಒಂದರ್ಥದಲ್ಲಿ ದಿಟ್ಟೆಯಾಗಿದ್ದ ಜೇನ್, ಸ್ಟೀಫನನ್ನು ಮುಂದೆ ವರಿಸಿದಳು ಕೂಡ. ಒಂದೆಡೆ, ದಿನದಿಂದ ದಿನಕ್ಕೆ ಅವರ ಆರೋಗ್ಯ ಸ್ಥಿತಿ ಹದಗೆಡುತ್ತ ಸಾಗಿದಂತೆ, ವಿಚಿತ್ರವೆಂಬಂತೆ ತನ್ನ ಅಧ್ಯಯನ ಮತ್ತು ಸಂಶೋಧನಾಸಕ್ತಿಗಳು ಕೂಡ ಇಮ್ಮಡಿಗೊಂಡಿದ್ದವು. ಊರುಗೋಲು ಸಹಾಯದಿಂದ ನಡೆಯಲು ಆರಂಭಿಸಿದ ಸ್ಟೀಫನ್, ತನ್ನ ಪಿ.ಎಚ್‌ಡಿ. ಮಾರ್ಗದರ್ಶಕ ಪ್ರೊ॥ ಡೆನ್ನಿಸ್ ಸ್ಸಿಯಾಮ್‌ರ ಪ್ರೋತ್ಸಾಹದಿಂದ ಸಂಶೋಧನೆಯಲ್ಲಿ ಹೆಚ್ಚೆಚ್ಚು ಆಸಕ್ತಿದಾಯಕ ಫಲಿತಾಂಶಗಳನ್ನು ಪಡೆಯುತ್ತ ಸಾಗಿದ. ಜನಪ್ರಿಯ ಖಗೋಳ ವಿಜ್ಞಾನಿ, ಕೇಂಬ್ರಿಜ್ ವಿ.ವಿ.ಯ ಫ್ರೆಡ್ ಹಾಯ್ಲ್‌ರ ಉಪನ್ಯಾಸಗಳು ಅಂದಿನ ದಿನಗಳಲ್ಲಿ ಅತಿ ಜನಪ್ರಿಯವಾಗಿದ್ದವು. ಅಂಥದ್ದೇ ಒಂದು ಉಪನ್ಯಾಸದಲ್ಲಿ ಸಭಿಕರಾಗಿ ಭಾಗವಹಿಸಿದ್ದ ಸ್ಟೀಫನ್, ಹಾಯ್ಲ್ ಅವರಿಗೆ ಕೊನೆಯಲ್ಲಿ "ನೀವು ಹೇಳಿದಂತೆ ಅದು ಅಪಸರಣ ಆಗುವುದಿಲ್ಲ (divergent)" ಎಂದು ಪ್ರಶ್ನೆ ಹಾಕಿದ್ದರು. ಇದರಿಂದ ವಿಚಲಿತರಾದಂತೆ ಕಂಡ ಪ್ರೊ॥ ಹಾಯ್ಲ್, ಉಪನ್ಯಾಸ ತಯಾರಿಕೆಯಲ್ಲಿ ನೆರವು ನೀಡಿದ್ದ ತನ್ನ ವಿದ್ಯಾರ್ಥಿ ಭಾರತದ ಜಯಂತ್ ವಿಷ್ಣು ನಾರ್ಲಿಕರ್ ಮೇಲೆ ಕೆಂಗಣ್ಣು ಬೀರಿದ್ದರು!

ಆಕ್ಸ್‌ಫರ್ಡ್‌ನ ಪ್ರಖ್ಯಾತ ಸೈದ್ಧಾಂತಿಕ ಭೌತವಿಜ್ಞಾನಿ ಪ್ರೊ॥ ಪೆನ್‌ರೋಸ್, ಅದಾಗಲೇ ಕಪ್ಪುರಂಧ್ರದ ಕೇಂದ್ರದಲ್ಲಿ ಕಾಲಾಕಾಶದ (space-time) ಕುರಿತಾದ ಸಂಶೋಧನೆಗಳಿಂದ ಜಾಗತಿಕ ಗಮನವನ್ನು ಸೆಳೆದಿದ್ದರು. ಅವರ ಉಪನ್ಯಾಸಗಳಿಂದ ಪ್ರಭಾವಿತರಾಗಿದ್ದ ಸ್ಟೀಫನ್, ತಮ್ಮ ಸಂಶೋಧನೆಯ ಗತಿಯನ್ನು ಬದಲಾಯಿಸಿಕೊಂಡರು. ಪೆನ್‌ರೋಸ್‌ರ ಕಪ್ಪು ಕುಳಿಗಳ ಬಗೆಗಿನ ವಿಚಾರಗಳನ್ನು, ಇಡೀ ವಿಶ್ವಕ್ಕೆ ಅನ್ವಯಿಸಿ ಕ್ರಾಂತಿಕಾರಕ ಗಣಿತೀಯ ಸೂತ್ರಗಳನ್ನು ಪಡೆಯುವಲ್ಲಿ ಸ್ಟೀಫನ್ ಯಶಸ್ವಿಯಾದರು. ಇದೇ ವಿಷಯವೇ ತಮ್ಮ ಪಿ.ಎಚ್‌ಡಿ. ಮಹಾಪ್ರಬಂಧವಾಗಿ ೧೯೬೬ರಲ್ಲಿ ಮಂಡಿಸಿ, ಕೇಂಬ್ರಿಜ್‌ನಿಂದ ಡಾಕ್ಟರೇಟ್ ಪದವಿ ಪಡೆದುಕೊಂಡರು. ಅದು ತಮ್ಮ ಬಹು ದಿನಗಳ ಅಂತಿಮ ಆಸೆ, ಕೈಗೂಡಿದ ಕ್ಷಣವಾಗಿತ್ತು! ಇದಲ್ಲದೇ ತಮ್ಮ ಸಂಶೋಧನೆಗಳ ಸ್ಫೂರ್ತಿಯಾಗಿದ್ದ ಪೆನ್‌ರೋಸ್ ಜೊತೆಯಲ್ಲಿಯೇ,

ಅದೇ ವರ್ಷ ಪ್ರತಿಷ್ಠಿತ ಆಡಮ್ ಬಹುಮಾನವನ್ನು ಸಹ ಪಡೆದುಕೊಂಡಿದ್ದು, ಅವರ ಸಂಶೋಧನೆಗಳಿಗೆ ಸಿಕ್ಕ ಮೊದಲ ಜಯವಾಗಿತ್ತು.

೧೯೬೫ರಲ್ಲಿ ಜೇನ್‌ರನ್ನು ವಿವಾಹವಾಗಿದ್ದ ಸ್ಟೀಫನ್‌ಗೆ, ೧೯೬೭ರಲ್ಲಿ ಮಗ ರಾಬರ್ಟ್ ಜನಿಸಿದನು. ಪಿ.ಎಚ್‌ಡಿ. ತರುವಾಯ ಅವರು ಕೀಸ್ ವಿ.ವಿ.ಯಲ್ಲಿ ವೇತನ ಸಹಿತ ಸಂಶೋಧಕ ಸ್ಥಾನವನ್ನು ಪಡೆದುಕೊಂಡರು. ಪೆನ್‌ರೋಸ್ ಜೊತೆಯಲ್ಲಿ ತಮ್ಮ ಸಂಶೋಧನೆಯನ್ನು ಮುಂದುವರೆಸಿದ ಸ್ಟೀಫನ್, ಕಪ್ಪು ಕುಳಿಗಳು ಮತ್ತು ವಿಶ್ವದ ಉಗಮದ ಬಗ್ಗೆ ಮತ್ತಷ್ಟು ರೋಚಕ ಮಾಹಿತಿಗಳನ್ನು ಹೊರಗೆಡವಿದರು. ೧೯೬೯ರಲ್ಲಿ ಸ್ಟೀಫನ್‌ಗೆ ಊರುಗೋಲಿನಿಂದ ನಡೆಯುವುದು ಕಷ್ಟವಾಗಿ, ಅನಿವಾರ್ಯವಾಗಿ ಗಾಲಿಕುರ್ಚಿಗೆ ಒರಗಿದರು. ೧೯೭೦ರಲ್ಲಿ ಮಗಳು ಲೂಸಿ ಜನಿಸಿದಳು. ಅದೇ ವರ್ಷ ತಮ್ಮ ಕಪ್ಪು ಕುಳಿ ಬಲವಿಜ್ಞಾನದ ಎರಡನೆಯ ನಿಯಮವನ್ನು ಸಿದ್ಧಪಡಿಸಿದರು. ಬಾರ್ಡಿನ್ ಮತ್ತು ಕಾರ್ಟರ್ ಜೊತೆಯಲ್ಲಿ, ಕುಪ್ಪುಕುಳಿಯ ನಾಲ್ಕು ನಿಯಮಗಳನ್ನು ಆವಿಷ್ಕರಿಸಿದರು. ಇದೇ ಸಂದರ್ಭದಲ್ಲಿ ಅಮೆರಿಕದ ಕ್ಯಾಲ್‌ಟೆಕ್‌ದಿಂದ (ಕ್ಯಾಲಿಫೋರ್ನಿಯ ಇನ್‌ಸ್ಟಿಟ್ಯೂಟ್ ಆಫ್‌ಟೆಕ್ನಾಲಜಿ) ಅವರಿಗೆ ಒಂದು ವರ್ಷ ಕಾಲ ಸಂಶೋಧನೆ ನಡೆಸುವ ಅಪೂರ್ವ ಅವಕಾಶ ಒದಗಿತು. ೧೯೭೩ರಲ್ಲಿ ಜಾರ್ಜ್ ಎಲಿಸ್ ಜೊತೆಗೂಡಿ ತಮ್ಮ ಮೊದಲ ಪುಸ್ತಕ "ದಿ ಲಾರ್ಜ್ ಸ್ಕೇಲ್ ಸ್ಟ್ರಕ್ಚರ್ ಆಫ್ ಸ್ಪೇಸ್–ಟೈಮ್" ಪ್ರಕಟಿಸಿದರು.

ಸೂರ್ಯನಿಗಿಂತ ಅನೇಕ ಪಟ್ಟು ದ್ರವ್ಯವನ್ನು ಹೊಂದಿರುವ ತಾರೆಗಳು, ತಮ್ಮ ಅಂತಿಮ ಘಟ್ಟದಲ್ಲಿ ಕಪ್ಪು ಕುಳಿಗಳಾಗಿ ಅವಸಾನಗೊಳ್ಳುತ್ತವೆ. ಇಂಥ ಕಪ್ಪು ಕುಳಿಗಳು, ತಮ್ಮ ಹತ್ತಿರದಲ್ಲಿ ಸುಳಿಯುವ ಯಾವುದೇ ಕಾಯವನ್ನು, ಅಷ್ಟೇಕೆ ಬೆಳಕಿನ ದ್ಯುತಿಕಣವನ್ನೂ ಸಹ ತನ್ನ ಅತಿಯಾದ ಗುರುತ್ವದಿಂದಾಗಿ ಸೆಳೆಯದೇ ಬಿಡುವುದಿಲ್ಲ. ಕಪ್ಪು ಕುಳಿ ನುಂಗಿದ ಆ ದ್ರವ್ಯದಗತಿ, ಮುಂದೇನಾಯಿತು ಎನ್ನುವುದು ಸಹ, ಬಾಹ್ಯ ಜಗತ್ತಿಗೆ ತಿಳಿಯುವುದಿಲ್ಲ. ಅಂದರೆ, ಇವುಗಳ ಅಧ್ಯಯನಕ್ಕಾಗಿ ಬಳಸುವ ಯಾವುದೇ ವಿದ್ಯುತ್ಕಾಂತೀಯ ಕಿರಣಗಳಿಂದ ಮಾಹಿತಿಯನ್ನು ಪಡೆಯುವುದು ಅಸಾಧ್ಯವೆನ್ನುವ ಪರಿಸ್ಥಿತಿ ನಿರ್ಮಾಣವಾಯಿತು. ಇಂಥ ಅನೇಕ ಕೌತುಕ ಗುಣಗಳನ್ನು ಹೊಂದಿರುವ ಕಪ್ಪುಕಾಯಗಳು, ಗ್ಯಾಮ ಕಿರಣಗಳನ್ನು ಹೊರ ಚೆಲ್ಲುತ್ತವೆಂದು ಸ್ಟೀಫನ್ ಹಾಕಿಂಗ್, ೧೯೭೪ರಲ್ಲಿ ಹೇಳಿದಾಗ ವಿಜ್ಞಾನ ಲೋಕದಲ್ಲಿ ಬೃಹತ್ ಸಂಚಲನವೇ ಉಂಟಾಗಿತ್ತು. ಇದೇ ಹೊತ್ತಿನಲ್ಲಿಯೇ ಅವರಿಗೆ ಪ್ರತಿಷ್ಠಿತ ರಾಯಲ್ ಸೊಸೈಟಿಯ ಸದಸ್ಯತ್ವದ ಗೌರವ ಲಭ್ಯವಾಯಿತು. ಕಾಲಾಕಾಶದ ಉಗಮ, ಬಿಗ್ ಬ್ಯಾಂಗ್‌ನಿಂದಾದರೆ, ಅದರ ಅವಸಾನ ಕಪ್ಪು ಕುಳಿಯಲ್ಲಿ. ಈ ಸತ್ಯವನ್ನರಿತಿದ್ದ ಸ್ಟೀಫನ್; ಐನ್‌ಸ್ಟೈನ್‌ರ ಸಾಪೇಕ್ಷ ಸಿದ್ಧಾಂತ ಮತ್ತು ಕ್ವಾಂಟಮ್ ಮೆಕ್ಯಾನಿಕ್ಸ್ ಎರಡನ್ನೂ ಒಗ್ಗೂಡಿಸಲು ತಮ್ಮ ಜೀವನವೇ ಸಮರ್ಪಿಸಿದ್ದು, ಮನುಕುಲಕ್ಕೆ ಸಂದ ಅಪೂರ್ವ ಕೊಡುಗೆಯಾಗಿದೆ.

ಸಂಶೋಧನೆಯ ಜೊತೆಜೊತೆಯಲ್ಲಿಯೇ ಸ್ಟೀಫನ್ ಹಲವು ಜನಪ್ರಿಯ ವಿಜ್ಞಾನ ಪುಸ್ತಕಗಳನ್ನು ರಚಿಸಿದರು. ಅದರಲ್ಲಿ ಪ್ರಮುಖವಾದದ್ದು 'ಕಾಲದ ಸಂಕ್ಷಿಪ್ತ ಚರಿತ್ರೆ' (ಎ ಬ್ರೀಫ್ ಹಿಸ್ಟರಿ ಆಫ್ ಟೈಮ್). ಈ ಕೃತಿಯು ಜಗತ್ತಿನ ಜನಪ್ರಿಯ ವಿಜ್ಞಾನ ಕೃತಿಗಳಲ್ಲಿಯೇ ಹಲವು ದಾಖಲೆಗಳನ್ನೇ ನಿರ್ಮಿಸಿದೆ. ೧೯೮೮ರಲ್ಲಿ ಪ್ರಕಟಗೊಂಡು ಈ ಪುಸ್ತಕ ವಿಶ್ವದ ೩೫ ಭಾಷೆಗಳಿಗೆ ತರ್ಜುಮೆಗೊಂಡು, ಇಲ್ಲಿಯವರೆಗೆ ಒಂದು ಕೋಟಿಗೂ ಅಧಿಕ ಪ್ರತಿಗಳು ಮಾರಾಟವಾಗಿವೆ. ಜನಸಾಮಾನ್ಯರಿಗೆ ಅರ್ಥವಾಗುವ ಸರಳ ಭಾಷೆಯಲ್ಲಿ ವಿಶ್ವದ ಉಗಮ, ಅಂತ್ಯ, ಕಾಲಾಕಾಶಗಳ ಅಸ್ತಿತ್ವ, ಕಪ್ಪು ಕುಳಿ, ವಿಶ್ವದ ಭವಿಷ್ಯ – ಇನ್ನೂ ಅನೇಕ ರೋಚಕ ವಿಷಯಗಳನ್ನು ಒಳಗೊಂಡ ಈ ಕೃತಿ, ಕುತೂಹಲಕಾರಿಯಾಗಿ ಸಾಮಾನ್ಯ ಓದುಗರನ್ನು ಓದಿಸಿಕೊಂಡು ಹೋಗುತ್ತದೆ. ಇದಲ್ಲದೇ 'ಬ್ಲಾಕ್ ಹೋಲ್ಸ್ ಅಂಡ್ ಬೇಬಿ ಯುನಿವರ್ಸ್ ಅಂಡ್ ಅದರ್ ಎಸ್ಸೇಸ್' (೧೯೯೩), 'ದ ಯುನಿವರ್ಸ್ ಇನ್ ಎ ನಟ್ ಶೆಲ್' (೨೦೦೧), 'ಆನ್ ದಿ ಶೋಲ್ಡರ್ಸ್ ಆಫ್ ಜಯಾಂಟ್ಸ್' (೨೦೦೨) ಇನ್ನೂ ಅನೇಕ ಪುಸಕ್ತಗಳನ್ನು ರಚಿಸಿ ಸಾಮಾನ್ಯರಲ್ಲಿ ವಿಜ್ಞಾನದ ಜನಪ್ರಿಯತೆಗಾಗಿ ದುಡಿದ ವಿಜ್ಞಾನ ಲೇಖಕ ಸ್ಟೀಫನ್. ಇದಷ್ಟೇ ಅಲ್ಲದೆ, ತನ್ನ ಮಗಳು ಲೂಸಿ ಜೊತೆಯಲ್ಲಿ ಎಳೆಯರಿಗಾಗಿಯೇ ವಿಜ್ಞಾನ ಕಾಲ್ಪನಿಕ ಕಥೆಗಳನ್ನೊಳಗೊಂಡ ಅನೇಕ ಕೃತಿಗಳನ್ನು ಹೊರತಂದರು. ಈ ನಿಟ್ಟಿನಲ್ಲಿ 'ಜಾರ್ಜ್ಸ್ ಸಿಕ್ರೇಟ್ ಕೀ ಟು ದ ಯುನಿವರ್ಸ್' (೨೦೦೭) ಮೊದಲ ಕೃತಿಯಾದರೆ, ಈ ಸರಣಿಯ ಐದನೇ ಮತ್ತು ಕೊನೆಯ ಕೃತಿ 'ಜಾರ್ಜ್ ಅಂಡ್ ದ ಬ್ಲೂ ಮೂನ್' (೨೦೧೬).

ಅಪ್ಪಟ ವಿಜ್ಞಾನಿಯಾಗಿದ್ದ ಸ್ಟೀಫನ್, ತಮ್ಮ ಪ್ರತಿಯೊಂದು ಯೋಚನೆಯಲ್ಲಿಯೂ ವೈಜ್ಞಾನಿಕ ಚಿಂತನೆಯನ್ನು ನಿಚ್ಚಳವಾಗಿ ಪ್ರದರ್ಶಿಸುತ್ತಿದ್ದರು. ಅವರು ಯಾವುದೇ



ಮತದ ಅನುಯಾಯಿ ಆಗಿರಲಿಲ್ಲ. ಸ್ವರ್ಗ, ನರಕ ಮತ್ತು ಪುನರ್ಜನ್ಮಗಳಲ್ಲಿ ಕಿಂಚಿತ್ತೂ ನಂಬಿಕೆಯಿಟ್ಟವರಲ್ಲ. ಇರುವುದೊಂದೇ ಜನ್ಮ, ವಿಶ್ವದ ಮಹಾನ್ ಸೌಂದರ್ಯ ಆಸ್ವಾದಿಸುತ್ತ, ಕಾಯಕವ ಮಾಡಿ ಜೀವನವ ಸಾರ್ಥಕಪಡಿಸಿಕೊಳ್ಳಿ ಎಂದು ಯುವಜನತೆಗೆ ಅನೇಕ ಬಾರಿ ಕಿವಿ ಮಾತು ಹೇಳಿದ್ದರು. ವಿಜ್ಞಾನ ಮತ್ತು ಮತ–ಧರ್ಮಗಳ ಬಗ್ಗೆ ಸ್ಪಷ್ಟ ನಿಲುವನ್ನು ಹೊಂದಿದ್ದ ಸ್ಟೀಫನ್; ಮತ–ಧರ್ಮಗಳು ಅಧಿಕಾರದ ಮೇಲೆ ಅವಲಂಬಿತವಾಗಿವೆ. ಆದರೆ, ವಿಜ್ಞಾನವು ವೀಕ್ಷಣೆ ಮತ್ತು ಕಾರ್ಯ–ಕಾರಣ ಸಂಬಂಧವನ್ನು ಅವಲಂಬಿಸಿದೆಂದು ಪ್ರತಿಪಾದಿಸುತ್ತಿದ್ದರು. ಅವರು ಯಾವತ್ತಿಗೂ ಸಹ, ದೇವರ ಅಸ್ತಿತ್ವವನ್ನು ನಿರಾಕರಿಸಿದ್ದರು. "ದೇವರಿಲ್ಲ ಎನ್ನುವುದು ನನ್ನ ಅಭಿಪ್ರಾಯ, ನಮಗೆ ಬೇಕಾದದ್ದನ್ನು ನಂಬಲು ನಮಗೆ ಸ್ವಾತಂತ್ರ್ಯವಿದೆ" ಎಂದು ಯಾವುದೇ ಗೊಂದಲಗಳಿಗೆ ಆಸ್ಪದ ನೀಡದಂತೆ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುತ್ತಿದ್ದರು. ೨೦೧೪ರ ಅಂತರರಾಷ್ಟ್ರೀಯ ಸ್ಟಾರ್‌ಮಸ್ ಉತ್ಸವದಲ್ಲಿ ಮುಖ್ಯಭಾಷಣಕಾರರಾಗಿದ್ದ ಸ್ಟೀಫನ್, ತಾನು ನಾಸ್ತಿಕನೆಂದು ಮುಕ್ತವಾಗಿ ಹೇಳಿಕೊಂಡಿದ್ದರು.

ಖಗೋಳವಿಜ್ಞಾನ, ಕಪ್ಪು ಕುಳಿ, ಸಾಪೇಕ್ಷ ಸಿದ್ಧಾಂತ, ಕ್ವಾಂಟಮ್ ಮೆಕ್ಯಾನಿಕ್ಸ್, ಇದಷ್ಟೇ ಅಲ್ಲದೇ; ನ್ಯೂಕ್ಲಿಯರ್ ನಿರಸ್ತ್ರೀಕರಣದ ಪ್ರಚಾರ, ೨೦೦೩ರ ಇರಾಕ್ ಮೇಲಿನ ದಾಳಿಯ ಖಂಡನೆ, ಇಸ್ರೇಲಿನ ಬಹಿಷ್ಕಾರಕ್ಕೆ ಬೆಂಬಲ, ಸ್ಟೆಮ್ ಸೆಲ್ ಸಂಶೋಧನೆಗೆ ಉತ್ತೇಜನೆ, ಜಾಗತಿಕ ತಾಪಮಾನ ಬದಲಾವಣೆ ತಡೆಗಟ್ಟಲು ಅಗತ್ಯಕ್ರಮ, ಆರೋಗ್ಯ ಕ್ಷೇತ್ರದಲ್ಲಿ ಖಾಸಗಿ ಕಂಪನಿಗಳ ಬಂಡವಾಳ ಮತ್ತು ಒಡೆತನಕ್ಕೆ ವಿರೋಧ, ಹೀಗೆ ಸಾಮಾಜಿಕವಾಗಿಯೂ ತಮ್ಮ ಚಿಂತನೆಗಳನ್ನು ಹಂಚಿಕೊಳ್ಳುತ್ತಿದ್ದು ನಮಗೆಲ್ಲ ಆಶ್ಚರ್ಯವನ್ನುಂಟು ಮಾಡಬಹುದು !

೫೦ ವರ್ಷಗಳ ಕಾಲ ಗಾಲಿಕುರ್ಚಿಗೆ ಒರಗಿಕೊಂಡು, ೧೯೮೫ರಲ್ಲಿ ನಿಮೋನಿಯದಿಂದ ತನ್ನ ಧ್ವನಿಯನ್ನೂ ಕಳೆದುಕೊಂಡು, ಕತ್ತಿನ ಮೇಲ್ಭಾಗ ಮತ್ತು ಕೈಬೆರಳುಗಳ ಸಣ್ಣ ಚಲನೆ ಹೊರತುಪಡಿಸಿ ದೇಹದ ಯಾವುದೇ ಭಾಗ ಸ್ವಾಧೀನದಲ್ಲಿ ಇರದಿದ್ದರೂ, ಕಳೆದ ೩೨ ವರ್ಷಗಳಿಂದ ಕಂಪ್ಯೂಟರ್ ಜನ್ಯ ಕೃತಕ ಧ್ವನಿಯಿಂದ ಬಾಹ್ಯ ಜಗತ್ತಿನೊಂದಿಗೆ ಸಂವಹಿಸುತ್ತ, ತನ್ನ ಸಂಶೋಧನೆಯ ಜೊತೆಗೆ ಪ್ರಮುಖ ಜಾಗತಿಕ ವಿದ್ಯಮಾನಗಳಿಗೆ ಸ್ಪಂದಿಸುತ್ತ, ಪ್ರೌಢ ವಿಚಾರಗಳ ಚಿಲುಮೆಯಾಗಿ, ಕಪ್ಪು ಕುಳಿಗಳ ವಕ್ತಾರರಾಗಿ ಕೊನೆಯವರೆಗೂ ಜೀವಿಸಿದ್ದು ಅನುಕರಣೀಯ.

**ಎಸ್. ಮಂಜುನಾಥ**
ಮೇಡಂ ಕ್ಯೂರಿ ವಿಜ್ಞಾನ ಅಕಾಡೆಮಿ, ನಂ. ೬೩, ವಾರ್ಡ್–೧೨, ರೆಡ್ಡಿ ಬೀದಿ
ಬಿ.ಎಂ.ಡಿ. ಶಾಲೆ ಹಿಂಭಾಗ, ಬಳ್ಳಾರಿ – ೫೮೩ ೧೦೧

# ವೀರರಾಣಿ ಬೆಳವಡಿ ಮಲ್ಲಮ್ಮ



ಇತಿಹಾಸ ಎನ್ನುವುದು ಕೇವಲ ರಾಜರುಗಳಿಗೆ, ರಾಜ ಮನೆತನಗಳಿಗೆ ಸೀಮಿತವಾಗಿಲ್ಲ. ನಮ್ಮ ದೇಶದಲ್ಲಿ ಅನೇಕ ಸಣ್ಣ ಪುಟ್ಟ ಪಾಳೆಗಾರರು, ದೇಸಗತಿ ಮನೆತನಗಳು ಆಳಿ ಹೋಗಿವೆ. ಇವರ ಬಗೆಗಿನ ಇತಿಹಾಸವು ಅಷ್ಟೊಂದು ಪ್ರಮಾಣದಲ್ಲಿ ದಾಖಲೆಗೊಂಡಿಲ್ಲ. ಅದೇ ರೀತಿ ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯಲ್ಲಿ ಅನೇಕ ಸಂಸ್ಥಾನಿಕರು ಆಳಿ ಹೋಗಿದ್ದಾರೆ. ಇವರಲ್ಲಿ ಬೆಳವಡಿ ಸಂಸ್ಥಾನವೂ ಕೂಡಾ ಒಂದಾಗಿದೆ. ಬೆಳವಡಿಯು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನಲ್ಲಿದೆ. ಇದು ಬೈಲಹೊಂಗಲದ ದಕ್ಷಿಣಕ್ಕೆ ೧೫ ಕಿ.ಮೀ. ಅಂತರದಲ್ಲಿದೆ. ಕಿತ್ತೂರಿನಿಂದ ಪೂರ್ವಕ್ಕಿದೆ. ಪ್ರಾಚೀನ ಶಾಸನಗಳ ಪ್ರಕಾರ ಇದು ೩೬೦ ಗ್ರಾಮಗಳ ಒಂದು ಸಂಸ್ಥಾನವಾಗಿತ್ತು. ಬೆಳವಡಿ ಸಂಸ್ಥಾನವು ಇತಿಹಾಸದ ಪುಟಗಳಲ್ಲಿ ಸೇರಲು ಕಾರಣವಾದವಳು ಬೆಳವಡಿಯ ಮಲ್ಲಮ್ಮ. ಇದೊಂದು ಅದ್ಭುತ ಮತ್ತು ಉನ್ನತವಾದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ.

ದೇಶದ ಮತ್ತು ಕನ್ನಡ ನೆಲದ ಮಹಿಳಾ ವೀರ ಪರಂಪರೆಗೆ ಸೇರ್ಪಡೆಯಾದ ಅಪೂರ್ವ ಮಹಿಳೆ ವೀರ ರಾಣಿ ಬೆಳವಡಿ ಮಲ್ಲಮ್ಮ. ಇವಳು ಸೋಂದೆಯ (ಸ್ವಾದಿ) ರಾಜಕುಮಾರಿ. ಆಗ ಬೆಳವಡಿಯನ್ನು ದೇಸಾಯಿ ಈಶಪ್ರಭು ಆಳುತ್ತಿದ್ದ. ಇವನು ಶಿರಸಿ ತಾಲೂಕಿನ ಸೋಂದೆಯ ರಾಜಕುಮಾರಿ ಮಲ್ಲಮ್ಮನನ್ನು ವಿವಾಹವಾಗಿದ್ದ. ಶಿವಾಜಿಯು ವಿಜಯಪುರದ ವಿರುದ್ಧ ಬಂಡಾಯದ ಸಂಧಿ ಸಾಧಿಸಿ ವಿಜಾಪುರ ವಿರುದ್ಧ ಸಿಡಿದೆದ್ದಿದ್ದ. ಈ ಸಂದರ್ಭದಲ್ಲಿ ಶಿವಾಜಿಯ ಜೊತೆಯಲ್ಲಿ ತಾನು ಒಪ್ಪಂದ ಮಾಡಿಕೊಳ್ಳುವುದಕ್ಕಾಗಿ ಈಶಪ್ರಭುವು ಆಸಕ್ತನಾಗಿದ್ದ. ಕ್ರಿ. ಶ. ೧೬೭೮ರ ಏಪ್ರಿಲ್ ತಿಂಗಳಲ್ಲಿ ದಕ್ಷಿಣ ದಂಡಯಾತ್ರೆಯಿಂದ ಹಿಂದಿರುಗಿದ ಶಿವಾಜಿಯ ಸೈನಿಕರು ಬೆಳವಡಿಯ ದೇಸಗತಿಗೆ ಸೇರಿದ ಯಾದವಾಡದಲ್ಲಿ ಬೀಡು ಬಿಡುತ್ತಾರೆ. ಈ ಸಂದರ್ಭದಲ್ಲಿ ಬೆಳವಡಿಯವರ ಗೋವುಗಳನ್ನು ಅಪಹರಿಸುತ್ತಾರೆ. ಆ ಕಾಲದಲ್ಲಿ ಗೋವುಗಳನ್ನು ಅಪಹರಿಸುವುದೆಂದರೆ ಒಂದು ರೀತಿಯಲ್ಲಿ ಯುದ್ಧಕ್ಕೆ ಆಹ್ವಾನ ನೀಡಿದಂತೆ. ಆಗಿನ ಕಾಲದಲ್ಲಿ ಗೋವುಗಳು ಜೀವಧನವಿದ್ದಂತೆ ಎಂದು ಭಾವಿಸುತ್ತಿದ್ದುದರಿಂದ ಯಾವುದೇ ಹೋರಾಟಕ್ಕೂ ಜನ ಸಿದ್ಧರಿರುತ್ತಿದ್ದರು. ಒಟ್ಟಾರೆ, ಗೋವುಗಳನ್ನು ಮರಳಿ ಪಡೆಯಬೇಕೆಂಬುದೇ ಬೆಳವಡಿ ಸಂಸ್ಥಾನದವರ ದೃಢಸಂಕಲ್ಪವಾಗಿರುತ್ತದೆ.

ಶಿವಾಜಿಯ ಸೇನಾನಿ ದಾದಾಜಿ ರಘುನಾಥ ಬೆಳವಡಿ ಕೋಟೆಯನ್ನು ಮುತ್ತಿಗೆ ಹಾಕುತ್ತಾನೆ. ಈ ಯುದ್ಧದಲ್ಲಿ ಈಶಪ್ರಭು ಹೋರಾಟ ಮಾಡಿ ಮಡಿದ. ರಾಣಿ ಮಲ್ಲಮ್ಮ ಪತಿಯನ್ನು ಕಳೆದುಕೊಂಡರೂ ಎದೆಗುಂದದೆ ಈಶಪ್ರಭುವಿನ ಖಡ್ಗವನ್ನು ಎತ್ತಿಕೊಂಡು ಹೋರಾಟಕ್ಕೆ ಸಿದ್ಧಳಾಗುತ್ತಾಳೆ. ತಾನೇ ಬೆಳವಡಿಯ ಸೇನೆಯ ನಾಯಕತ್ವ ವಹಿಸಿ ವೀರಾವೇಶದಿಂದ ಹೋರಾಡಿ ಕೋಟೆಯಿಂದ ಮರಾಠರನ್ನು ಹೊರಗಟ್ಟುತ್ತಾಳೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಹೋರಾಟಕ್ಕಿಳಿದ ಮಲ್ಲಮ್ಮನ ವೀರತನವನ್ನು ಮೆಚ್ಚಲೇಬೇಕು. ಇಂತಹ ವೀರ ವನಿತೆಯರಿಂದಲೇ ಕರ್ನಾಟಕದ ಇತಿಹಾಸವು ರೋಚಕವಾಗಿದೆ.

ರಾಣಿ ಮಲ್ಲಮ್ಮಳಿಂದ ಸೋತು, ಅಪಮಾನಿತರಾಗಿದ್ದ ಶಿವಾಜಿಯ ಸೈನಿಕರು ಸುಮ್ಮನೆ ಇರದೆ ಸೇಡಿನಿಂದ ಕುದಿಯುತ್ತಿದ್ದರು. ಬೆಳವಡಿಯ ಕೋಟೆಯನ್ನು ತಿರುಗಿ ಮೂರು ವಾರಗಳ ಕಾಲ ದೀರ್ಘವಾಗಿ ಮುತ್ತಿಗೆ ಹಾಕುತ್ತಾರೆ. ಹೊರಗಿನಿಂದ ಶತ್ರುಗಳು ಮುತ್ತಿದಾಗ ಕೋಟೆಯೊಳಗೆ ಆಹಾರ ಪದಾರ್ಥಗಳು ಮತ್ತು ಅವಶ್ಯ ಸಾಮಗ್ರಿಗಳನ್ನು ಶೇಖರಿಸಿ ಇಟ್ಟುಕೊಂಡಿರುತ್ತಾರೆ. ಮೂರು ವಾರಗಳ ಕಾಲ ಮುತ್ತಿಗೆಯಿಂದ ಆಹಾರ ಧಾನ್ಯಗಳು ಮುಗಿದುಹೋಗುತ್ತವೆ. ಇನ್ನು ಕೋಟೆಯ ಬಾಗಿಲನ್ನು ತೆಗೆದು ನೇರವಾಗಿ ಹೋರಾಡುವುದು ಮಲ್ಲಮ್ಮನಿಗೆ ಅನಿವಾರ್ಯವಾಗುತ್ತದೆ. ಕೋಟೆಯ ಬಾಗಿಲನ್ನು ತೆರೆಸಿ ಹೊರಬಂದು ಹೋರಾಟಕ್ಕೆ ನಿಲ್ಲುತ್ತಾಳೆ. ವೀರಾವೇಶದಿಂದ ಹೋರಾಡಿದರೂ ಗೆಲ್ಲುವುದು ಸಾಧ್ಯವಾಗದೆ ಶಿವಾಜಿಯ ಸೈನಿಕರಿಗೆ ಸೆರೆಯಾಗುತ್ತಾಳೆ. ಇಲ್ಲಿ ಮಲ್ಲಮ್ಮನ ಧೈರ್ಯ ಸಾಹಸಗಳು ವೈರಿಗಳ ಮನಸ್ಸನ್ನೂ ಗೆಲ್ಲುತ್ತದೆ. ಶಿವಾಜಿಯು ರಾಣಿ ಮಲ್ಲಮ್ಮಳ ವೀರತನಕ್ಕೆ ತಲೆದೂಗುತ್ತಾನೆ. ಮಲ್ಲಮ್ಮನನ್ನು ಸೋದರಿಯೆಂದು ಗೌರವಿಸಿ, ಬಿಡುಗಡೆ ಮಾಡುತ್ತಾನೆ. ಅಂದಿನಿಂದ ಬೆಳವಡಿ ದೇಸಗತಿಯು ಶಿವಾಜಿಗೆ ಸಾಮಂತ ರಾಜ್ಯವಾಯಿತು.

ಯಾದವಾಡ ದೇವಾಲಯದಲ್ಲಿ ಕೆತ್ತಲ್ಪಟ್ಟಿರುವ, ಶಿವಾಜಿಯು ರಾಣಿಯ ಮಗುವಿಗೆ ಹಾಲುಣಿಸುತ್ತಿರುವ ಉಬ್ಬುಶಿಲ್ಪವೊಂದು ಇಂದಿಗೂ ರಾರಾಜಿಸುತ್ತಿದೆ. ಅದೇ ಚಿತ್ರದ ಮೇಲ್ಭಾಗದಲ್ಲಿ ಕುದುರೆಯೇರಿ ಸಾಗುತ್ತಿರುವ ಶಿವಾಜಿಯ ಚಿತ್ರವೂ ಇದೆ. ಈ ಯುದ್ಧದ ನೆನಪಿಗಾಗಿ ಮಲ್ಲವ್ವ ತನ್ನ ರಾಜ್ಯದ ಅನೇಕ ಕಡೆ ವೀರಗಲ್ಲುಗಳನ್ನು ಸ್ಥಾಪಿಸಿದ್ದಾಳೆ. ಕಿತ್ತೂರು ನಾಡಿನ ಬೆಳವಡಿಯ ಕೀರ್ತಿಯನ್ನು ಬೆಳಗಿದ ವೀರವನಿತೆ ಮಲ್ಲಮ್ಮನ ಸಾಹಸಗಾಥೆ ಆ ಭಾಗದ ಜನಪದರಲ್ಲಿ ಇಂದಿಗೂ ಅಮರವಾಗಿ ಉಳಿದಿದೆ. ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾದ ಅಗತ್ಯವಿದೆ.

**ಜಬೀನಾ ನದಾಫ್**
ಸಂಶೋಧನಾ ವಿದ್ಯಾರ್ಥಿನಿ, ಕನ್ನಡ ಅಧ್ಯಯನ ವಿಭಾಗ
ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಪುರ

# ಪ್ರಜಾಪ್ರಭುತ್ವ ಅಳಿವು ಉಳಿವು ಪ್ರಶ್ನೆ

'ದೇಶದ ಪ್ರಜಾತಂತ್ರವೇ ಅಪಾಯದತ್ತ'–ಈ ಮಾತನ್ನು ಮಾಧ್ಯಮದೆದುರು ಹೇಳುತ್ತಿರುವವರು ಪ್ರಜಾತಂತ್ರದ ರಕ್ಷಕರೆಂದು ಜನರು ನಂಬಿರುವ ಸರ್ವೋಚ್ಚ ನ್ಯಾಯಾಲಯದ ನಾಲ್ವರು ನ್ಯಾಯಾಧೀಶರು. 'ಜನರ ಮನಸ್ಸಿನಲ್ಲಿ ಅನುಮಾನಗಳು ಮೂಡುತ್ತಿವೆ. ಹಾಗಾಗಿ ಮಾಧ್ಯಮದ ಮುಂದೆ ಬರಬೇಕಾಯಿತು' ಎಂಬುದು ಅವರ ಅಳಲು. ಹಾಗಾದರೆ ಈ ಅನುಮಾನಗಳು ಯಾವುವು? ಅಪಾಯ ಏನು? ಸ್ವಾತಂತ್ರ್ಯ ಬಂದ ಏಳು ದಶಕಗಳಲ್ಲಿ ಗೋಡೆ ಒಳಗಿನ ನ್ಯಾಯಾಲಯದ ಪಿಸುಮಾತು ಎಂದೂ ಬಯಲಿನಲ್ಲಿ ಚರ್ಚೆಯಾಗಿರಲಿಲ್ಲ. ಕಾರ್ಯಾಂಗ, ಶಾಸಕಾಂಗಗಳ ತಾಳ ತಪ್ಪಿದರೆ ಸುತ್ತಿಗೆಯಲ್ಲಿ ಕುಟ್ಟಿ ಹದ ಮಾಡುವ ಪ್ರಧಾನ ಅಂಗ ನ್ಯಾಯಾಂಗ. ಈ ನಡೆ ಭವಿಷ್ಯದಲ್ಲಿ ಭಾರತೀಯ ನ್ಯಾಯಶಾಸ್ತ್ರದ ದಿಕ್ಕು ತಪ್ಪಿಸೀತು, ಇದು ಒಳ್ಳೆಯದಲ್ಲ ಎಂದು ಹೇಳುತ್ತಿರುವ ನ್ಯಾಯತಜ್ಞರಿದ್ದಾರೆ. ಪ್ರಜಾರಾಜ್ಯದಲ್ಲಿ ಪ್ರಜೆಗಳೇ ದೊರೆಗಳು. ನಾಲ್ಕು ಗೋಡೆ ಒಳಗೆ ಬಗೆಹರಿಯದಿದ್ದರೆ ಇನ್ನೇನು ಮಾಡಬೇಕು! ಎಂದು ಹೇಳುವವರಿದ್ದಾರೆ. ಈ ನಾಲ್ವರು ಹಿಟ್ ಅಂಡ್ ರನ್ ಮಾಡಲು ಹೊರಟಿದ್ದಾರೆಯೇ? (ಪ್ರ.ವಾ.ಜ ೧೬) ಎಂದು ಎ. ನಾರಾಯಣ ಅವರು ಹೇಳುವ ಮಾತು ಬಲು ಸೂಕ್ಷ್ಮವಾದ್ದು. ವಿಚಾರ ಅಷ್ಟು ಸರಳವಾಗಿಲ್ಲ.

ಮಾಧ್ಯಮರಂಗ ಬಯಲು ರಂಗಭೂಮಿ. ಅಲ್ಲಿ ವೇಷ ಧರಿಸಲು ಇಲ್ಲಿಯವರೆಗೆ ನ್ಯಾಯಾಧೀಶರುಗಳಿಗೆ ಪಾತ್ರವಿರಲಿಲ್ಲ. ಮುಖ್ಯ ನ್ಯಾಯಾಧೀಶರಿಗೆ ಮೂರ್ನಾಲ್ಕು ತಿಂಗಳ ಹಿಂದೆ ಬರೆದ ಪತ್ರವು ಮುಸುಕು ಗುದ್ದಿನೊಳಗಿದ್ದು ಬೀದಿಗೆ ಈಗ ಬಂದಿದೆ. ಅದರಲ್ಲಿ ಮುಖ್ಯ ನ್ಯಾಯಮೂರ್ತಿಯವರು ತಮಗೆ ಸರಿ ಕಂಡ ಪೀಠಗಳಿಗೆ ಪ್ರಕರಣಗಳನ್ನು ಹಂಚಿಕೆ ಮಾಡಿದ ಆಪಾದನೆಯಿದೆ. ನ್ಯಾಯಾಧೀಶರುಗಳ ನೇಮಕ ಕುರಿತ ಕೇಂದ್ರ ಸರ್ಕಾರ ಹಾಗೂ ಲೂಥಾ ಪ್ರಕರಣವು ನ್ಯಾಯಾಲಯದಲ್ಲಿ ಸರಿಯಾಗಿ ನಿರ್ವಹಣೆಯಾಗುತ್ತಿಲ್ಲ ಎಂದು ಹೇಳಲಾಗಿದೆ. ವೈದ್ಯಕೀಯ ಕಾಲೇಜು ಹಗರಣ ಪ್ರಕರಣ ಕುರಿತು ಹೇಳಲಾಗಿದೆ. ಸಿ. ಎಸ್. ಕರ್ಣನ್ ಅವರನ್ನು ಸೆರೆಮನೆಗೆ ಕಳುಹಿಸಿದ ಪ್ರಸಂಗಕ್ಕೆ ಬೇರೆ ದಾರಿಗಳಿದ್ದವು ಎಂದು ಹೇಳಲಾಗಿದೆ. ಇದೆಲ್ಲಕ್ಕಿಂತ ಹೆಚ್ಚಾಗಿ ಉರಿಯುತ್ತಿರುವ ಒಳಕೆಂಡವು ದೇಶದ ಆಳುವ ಪಕ್ಷದ ಅಧ್ಯಕ್ಷ ಅಮಿತ್ ಷಾ ಅವರ ಮೇಲಿನ ಆಪಾದನೆಯ ವಿಚಾರ. ಸಂಭಾವಿತರು ಸಿಡಿದರೆ ಪ್ರಳಯ ವಾಗುವುದುಂಟು. ಹಾಗಾಗಿ ಸಿಡಿದಿರುವ ನಾಲ್ವರ ವಿಚಾರಗಳು ಬಿಡಿಸಲು ಅಷ್ಟು ಸುಲಭವಾಗಿಲ್ಲ. ದೇಶದ ಆಡಳಿತ ವ್ಯವಸ್ಥೆ ಸರ್ವಾಧಿಕಾರದ ಕಡೆಗೆ ಚಲಿಸುವುದನ್ನು ಪ್ರಶ್ನಿಸುವ ಎಲ್ಲಾ ಸೂಚನೆಗಳು ಇಲ್ಲಿವೆ. ಹೈದರಾಬಾದಿನಿಂದ ಅಹಮದಾಬಾದ್‌ಗೆ ಪ್ರಯಾಣಿಸುತ್ತಿದ್ದ ಸೊಹ್ರಾಬ್ ಹಾಗೂ ಅವರ ಪತ್ನಿಯನ್ನು ಗುಜರಾತ್ ಪೊಲೀಸರು ಎನ್‌ಕೌಂಟರಿನಲ್ಲಿ ಕೊಂದದ್ದು ೨೦೦೫ರಲ್ಲಿ. ಅವರೊಂದಿಗಿದ್ದ ತುಳಸೀರಾಂ ಪ್ರಜಾಪತಿಯನ್ನು ಸಹಾ ಎನ್‌ಕೌಂಟರಿನಲ್ಲಿ ಕೊಂದದ್ದು ೨೦೦೬ರಲ್ಲಿ. ಆ ಅವಧಿಯಲ್ಲಿ ಷಾ ಗೃಹಮಂತ್ರಿ. ಈ ಸಂಬಂಧ ಮುಂದೆ ಅಮಿತ್ ಷಾ ಬಂಧನವನ್ನು ಸಿ. ಬಿ. ಐ. ಮಾಡುತ್ತದೆ. ಪ್ರಕರಣ ಮುಂದುವರಿಯುತ್ತದೆ.

ಪದೇ ಪದೇ ಗೈರುಹಾಜರಾಗುತ್ತಿದ್ದ ಷಾ ಅವರನ್ನು ಪ್ರಶ್ನಿಸಿದ ನ್ಯಾಯಾಧೀಶ ಉತ್ಪತ್ ಅವರನ್ನು ೨೦೧೪ರ ಜೂನ್ ೨೫ರಂದು ಬದಲಾಯಿಸಲಾಗುತ್ತದೆ. ಆ ಸ್ಥಾನಕ್ಕೆ ಬಂದ ಬಿ. ಹೆಚ್. ಲೋಯಾ ಅವರು ಸಹೋದ್ಯೋಗಿಯ ಮಗಳ ಮದುವೆ ಸಂದರ್ಭದಲ್ಲಿ ಹೃದಯಾಘಾತದಿಂದ ಸಾವನ್ನಪ್ಪುತ್ತಾರೆ. ಮುಂದೆ ಅಮಿತ್ ಷಾ ಪ್ರಕರಣದ ಖುಲಾಸೆ ೨೦೧೬ರಲ್ಲಾಗುತ್ತದೆ. ಲೋಯಾ ಕುಟುಂಬವು ಇದು ಸಹಜ ಸಾವಲ್ಲ ಎಂದು ಪ್ರತಿಪಾದಿಸಿದ ವಿಚಾರವನ್ನು 'ದಿ ಕಾರವಾನ್' ಪತ್ರಿಕೆ ಪ್ರಕಟಿಸುತ್ತದೆ. ಅದೀಗ ಪುನಃ ನ್ಯಾಯಾಲಯದಲ್ಲಿ ಪ್ರಶ್ನಿತವಾಗುಳಿದಿದೆ.

ಇಷ್ಟೆಲ್ಲಾ ವರ್ತಮಾನದ ರಾಮಾಯಣ ಮಹಾಭಾರತವಿರುವುದರಿಂದಲೇ ನ್ಯಾಯಾಧೀಶರುಗಳು ಸಿಡಿದು ಉರಿಯುವ ಮನೆಯನ್ನು ಸರಿಪಡಿಸಲು ಹೊರಟಿರುವುದು. ಮಾರನೇ ದಿನದ ಸುದ್ದಿಯು ಪ್ರಧಾನಿಯವರ ಪ್ರಧಾನ ಕಾರ್ಯದರ್ಶಿ ಸಿ. ಜೆ. ಐ. ಮನೆ ಬಾಗಿಲು ತಟ್ಟುತ್ತಿರುವುದನ್ನು ಕಾವಲಿನ ಕ್ಯಾಮರಾ ಕಣ್ಣುಬಿಟ್ಟು ನೋಡಿದೆ. ಆಳುವ ಪಕ್ಷದ ಹಿರಿಯ ಯಶವಂತ್ ಸಿನ್ಹ ಕ್ಯಾಬಿನೆಟ್ ಒಳಗೋಡೆಯಲ್ಲೂ ಈ ನಾಲ್ವರು ನ್ಯಾಯಾಧೀಶರಂತೆ ಪ್ರಶ್ನಿಸುವ ಶಕ್ತಿ ಮಂತ್ರಿಗಳಿಗೆ ಬರಲಿ ಎಂದಿದ್ದಾರೆ. ಈ ನಡುವೆ ಮತ್ತೊಂದು ಬೆಂಚಿನಲ್ಲಿ ಶ್ರೀರಾಮಮಂದಿರ ತೀರ್ಪು ತ್ವರಿತವಾಗಲಿ ಎಂದು ಸರ್ವೋಚ್ಚ ನ್ಯಾಯಾಲಯದ ಮೇಲೆ ಹೇರುತ್ತಿರುವ ತವಕ ಸಹ ಇಲ್ಲಿದೆ. ಅಂದರೆ ಜನರ ಮನಸ್ಸಿನಲ್ಲಿರುವ ಅನುಮಾನಗಳಿಗೆಲ್ಲಾ ಉತ್ತರ ಕೊಡಬೇಕಾದದ್ದು ಪ್ರಜಾಪ್ರಭುತ್ವದ ಕರ್ತವ್ಯ. ಇತ್ತೀಚಿನ ಗುಜರಾತ್ ಚುನಾವಣಾ ದಿನಾಂಕ ಮುಂದೂಡಿಕೆ ಹಾಗೂ ಪ್ರಸ್ತುತ ಸರ್ವೋಚ್ಚ ನ್ಯಾಯಾಲಯದ ಹಸ್ತಕ್ಷೇಪ ಸೇರಿದಂತೆ ರಾಜಕೀಯ ಒತ್ತಡ ಪ್ರಜಾಪ್ರಭುತ್ವಕ್ಕೆ ಮಾರಕ. ಈ ರೀತಿಯ ಅತಿಕ್ರಮ ಯಾವ ಪಕ್ಷ ಮಾಡಿದರೂ ಅದು ಸರ್ವಾಧಿಕಾರಿ ಕ್ರಮವೇ ಹೌದು. ರಾಜಕಾರಣವು ನ್ಯಾಯಾಲಯದ ಕಡತಗಳನ್ನು ಇಣುಕಿ ಕಣ್ಸನ್ನೆ ಮಾಡುವುದು ಗಣನೀತಿಗೆ ವಿರುದ್ಧ. ಅಂತೆಯೇ ಸರ್ವೋಚ್ಚ ನ್ಯಾಯಾಲಯ ಮುಖ್ಯ ನ್ಯಾಯಾಧೀಶರಾಗಿ ಗದ್ದುಗೆ ಮೇಲೆ ಕುಳಿತವರು ಕಣ್ಸನ್ನೆ ಮಾಡಿದವರ ಪರ ಖಾತೆ ಕಿರದಿ ಬರೆದು ಕೊಡುವುದು ನ್ಯಾಯಾಕ್ಷರದ ವ್ಯಭಿಚಾರ.

ಬೇಲಿಯೇ ಎದ್ದು ಹೊಲ ಮೇಯ್ದರೆ ಆ ಬೇಲಿ ಕಿತ್ತವರಾರು ಎಂಬುದು ಮತ ನೀಡುವ ಪ್ರಜಾರಾಜ್ಯಕ್ಕೆ ಗೊತ್ತಾಗಬೇಕು. ಅಡ್ಡಾದಿಡ್ಡಿ ಮಾತನಾಡಿದರೆಂದು ನ್ಯಾಯಾಂಗದ ಮರ್ಯಾದೆ ಉಳಿಸಲು ಕರ್ಣನ್ ಅವರನ್ನು ಸೆರೆಮನೆಗೂ ಕಳುಹಿಸಲಾಯಿತು. ಸರಿ, ಇಂಥಾದ್ದಕ್ಕೆ ಅಂಬೇಡ್ಕರ್ ಒಂದು ಘಟನೆಯ ಮೂಲಕ ಒಂದು ವಿಚಾರ ಹೇಳುತ್ತಾರೆ: "ನೊಬಿನ್ಡ್ರೋಮೆ ಎಂಬ ಅಸ್ಪೃಶ್ಯನನ್ನು ಮೇಕೆ ಕದ್ದನೆಂಬ ಕಾರಣಕ್ಕೆ ಬಂಧಿಸಲಾಗುತ್ತದೆ. ಅವನು ಅಪರಾಧಿಯಲ್ಲ ಎಂದು ತೀರ್ಮಾನವಾಗುತ್ತದೆ. ಆಗವನು ಮಾನ ನಷ್ಟ ಮೊಕದ್ದಮೆಯನ್ನು ಫಿರ್ಯಾದಿಯ ವಿರುದ್ಧ ಹೂಡುತ್ತಾನೆ. 'ನ್ಯಾಯಾಧೀಶನು ಇವನು ಕೀಳು ಜಾತಿಗೆ ಸೇರಿದವನಾದ ಕಾರಣ ಇವನಿಗೆ ಮಾನವೆಂಬುದೇ ಇಲ್ಲ' ಎಂದು ಮೊಕದ್ದಮೆಯನ್ನು ವಜಾ ಮಾಡಿದನು. ಮುಂದೆ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿತವಾಗಿ ಹಿಂದಿನ ನ್ಯಾಯಾಧೀಶನ ತೀರ್ಪು ತಪ್ಪು; ನ್ಯಾಯದ ಮುಂದೆ ಎಲ್ಲರೂ ಸಮಾನರು ಎಂದು ನಿರ್ಧಾರವಾಗುತ್ತದೆ." ಸ್ವಾತಂತ್ರ್ಯಪೂರ್ವದ ಈ ನಿದರ್ಶನಗಳು ಇಂದು ಪಠ್ಯಗಳಾಗುತ್ತಾ ಹೋಗುವುದೇ ಸಂವಿಧಾನದ ಮಹತ್ವ ಎಂದು ನಾಲ್ವರು ನ್ಯಾಯಾಧೀಶರಿಂದ ನಿರ್ಧಾರವಾಗುವ ಲಕ್ಷಣ ಕಾಣುತ್ತಿದೆ.

ನ್ಯಾಯ–ಪಂಚಾಯ್ತಿ–ಸಂಘ ನಿಯಮಗಳೆಲ್ಲವೂ ಬುದ್ಧನ ಮೂಲದವು. ಗಾಂಧೀಜಿ ಕಿರುಗಣ್ಣಲ್ಲಿ ನೆಹರೂವಿಗೆ ಸನ್ನೆ ಮಾಡಿ, ವಿರೋಧ ಪಕ್ಷದಲ್ಲಿದ್ದ ಅಂಬೇಡ್ಕರ್‌ರನ್ನು ಹತ್ತಿರಕ್ಕೆ ಕರೆದು ನಾಲ್ಕು ವರ್ಷ ಒಂದು ತಿಂಗಳು ಇಪ್ಪತ್ತಾರು ದಿನ ಕಾನೂನು ಮಂತ್ರಿ ಮಾಡಿದ್ದಿದೆ. ಅಂಬೇಡ್ಕರ್, ಗಾಂಧೀಜಿ ಕೇವಲ ರಾಜಕಾರಣಿಗಳಲ್ಲ. ಆರ್ಥಿಕ ತಜ್ಞರಷ್ಟೇ ಅಲ್ಲ. ಅವರು ನ್ಯಾಯ ಪಂಡಿತರೂ ಹೌದು. ಒಂದು ಹಂತದಲ್ಲಿ ಬ್ಯಾರಿಸ್ಟರ್ ಪದವಿ ತೊರೆದ ಗಾಂಧೀಜಿ ಅವರು ವಕೀಲರು, ನ್ಯಾಯಾಧೀಶರು ಈ ದೇಶಕ್ಕೆ ಕೇಡು ಬಗೆಯುವವರು ಎಂದೇ ಉರಿದುಬೀಳುತ್ತಿದ್ದರು. ಈ ಸಂದಿಗ್ಧತೆಯಲ್ಲೂ ಇಂದಿನ ನ್ಯಾಯಾಧೀಶರುಗಳ ವಿರೋಧವು ಅದು ಮುಳ್ಳಿನಿಂದ ಮುಳ್ಳನ್ನು ತೆಗೆಯುವ ಚಿಕಿತ್ಸೆ. ಈ ಸೂಕ್ಷ್ಮವನ್ನು ಭಾರತೀಯ ವಕೀಲರ ಪರಿಷತ್ತು ಹಾಗೂ ಸುಪ್ರೀಂಕೋರ್ಟಿನ ವಕೀಲರ ಕೂಟ ಶಮನ ಮಾಡಲು ಪ್ರಯತ್ನಿಸುತ್ತಿವೆ. ಆಡಳಿತಾತ್ಮಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವುದಲ್ಲದೆ ಇದರಲ್ಲಿ ಬೇರೆ ಏನೂ ಇಲ್ಲ ಹಾಗೂ ನಮ್ಮ ನಾಲ್ವರ ದನಿ ಒಂದೇ ಎಂದು ಪ್ರತಿಭಟಿಸಿದವರೇ ಹೇಳುತ್ತಿದ್ದಾರೆ. ಒಟ್ಟಿನಲ್ಲಿ, ವರ್ತಮಾನವು ನ್ಯಾಯಾಂಗದ ಮೂಲಕ ಪ್ರಜಾ ರಕ್ಷಣೆಗೆ ಹೊರಟಿರುವ ತುರ್ತು ಇದಾಗಿದೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಈ ದೇಶದಲ್ಲೀಗ ಯಾರು ಚಾಣಕ್ಯ, ಯಾರು ಚಂದ್ರಗುಪ್ತ, ಎಂಬುದು ಮುಖ್ಯವಲ್ಲ. ಯಾರು ಪ್ರಜೆಗಳು, ಯಾರು ಪ್ರಜಾರಕ್ಷಕರಾಗುತ್ತಾ ಸಾಗಬೇಕು, ಎಂಬುದೇ ಬಹುಮುಖ್ಯ.

**ಡಾ॥ ರಾಜೇಗೌಡ ಹೊಸಹಳ್ಳಿ**
೪೧೩, ಟೀಚರ್ಸ್ ಕಾಲನಿ, ನಾಗರಬಾವಿ, ಬೆಂಗಳೂರು – ೫೬೦ ೦೭೨



# ಧರೆಗಿಳಿದ ಸ್ವರ್ಗ ಮಾರಿಷಸ್

**ಬಳಕೂರು ವಿ. ಎಸ್. ನಾಯಕ್**

"ಸಾಧಾರಣವಾಗಿ ಕನ್ನಡದ ಸಾಹಿತಿಗಳು ವಿದೇಶಿ ಪ್ರವಾಸಿಕಥನ ಬರೆವಾಗ ವಿಮಾನಯಾನದ ಬಗ್ಗೆ ಬರೆದೇ ಬರೆಯುತ್ತಾರೆ" ಎಂದ ವಿಮಾನದಲ್ಲಿ ಪಕ್ಕದಲ್ಲಿ ಕುಳಿತಿದ್ದ ಗೆಳೆಯ, ಸಹಬೋಧಕ ಆರ್. ಎಚ್. ಕುಲಕರ್ಣಿ. ಯಾನ ಮತ್ತು ಗಮ್ಯ, ಸ್ಥಾವರಜಂಗಮಗಳು ಒಂದೇ ಆದ ಅನುಭವ ಕನ್ನಡಿಗರದ್ದು, ಅಲ್ಲವೆ. ಭಾರತೀಯರಿಗೆ ಅಲ್ಲಿ ಇಳಿದ ಮೇಲೆಯೇ ವೀಸಾ ನೀಡಿಬಿಡುತ್ತಾರೆ ಮಾರಿಷಸ್ ದ್ವೀಪ-ದೇಶದವರು. ಯುರೋಪಿನ ಪಯಣದಲ್ಲಾಗುವ ವೀಸಾತಂಕಗಳಿಲ್ಲದ ಅಪರೂಪದ ಸಲೀಸುತನ ನಮಗೆ ಮಾರಿಷಸ್ಸಿನ ಪೋರ್ಟ್ ಲೂಯಿಸಿನ ವಿಮಾನ ನಿಲ್ದಾಣದಲ್ಲಿ. "ಆಪ್ ಕಾ ವಿಜಿಟ್ ಪರ್ಪಸ್ ಕ್ಯಾ ಹೈ?" ಎಂದ ವೀಸಾಧಿಕಾರಿ, ಭಾರತೀಯರಿಗೆಲ್ಲರಿಗೂ ಹಿಂದಿ ಬಂದೇ ಬರುತ್ತದೆಂಬ ವಿಶ್ವಾಸದಲ್ಲಿ. "ಎಜುಕೇಷನ್" ಎಂದೆ. "ಟೂರಿಜಂ" ಎಂದು ಬದಲಿಸಿ ಎಂದ. "ನನ್ನ ಭೇಟಿಯ ಉದ್ದೇಶ ಭೇಟಿಯಷ್ಟೇ" ಎಂದು ಬರೆದರು ಸುರೇಖ. "ಓಕೆ" ಎಂದಾತ ಅವರ ಪಾಸ್‌ಪೋರ್ಟಿನ ಮೇಲೆ ಅನುಮತಿಯನ್ನು ಒತ್ತಿ, ನಕ್ಕ. ಮುಂದೆ ಅರ್ಧ ಗಂಟೆ ಕಾಲ ನಾವು ನಕ್ಕೆವು, ಸುರೇಖ ಬರೆದಿದ್ದನ್ನೇ ಒಪ್ಪಿಕೊಂಡನಲ್ಲ ಅವ ! ಎಂಬ ಕಾರಣಕ್ಕೆ.

ಪೂರ್ಣಚಂದ್ರ ತೇಜಸ್ವಿ ಶೈಲಿಯ ಅನುಭವಗಳು ಒಂದೊಂದೇ ಅನಾವರಣಗೊಳ್ಳ ತೊಡಗಿದವು. ಮಾರನೇ ದಿನ ಸ್ಥಳೀಯ ವೈದ್ಯಾಧಿಕಾರಿ ಹತ್ತಿರ ರಕ್ತಪರೀಕ್ಷೆಗೆ ಹೋದೆವು. ಶಾಂತ ಸಮುದ್ರತೀರದಲ್ಲೇ ಇರುವ ಮಲೆನಾಡಿನೆಂಚಿನ ಮನೆಯೆಂಬ ಕಛೇರಿಯ ರೇಡಿಯೋದಲ್ಲಿ ಮುಖೇಶರ ಹಾಡು ಬರುತ್ತಿತ್ತು. ಕುಲಕರ್ಣಿ ಅದರೊಂದಿಗೆ ಗುನುಗತೊಡಗಿದ. ವೈದ್ಯನಿಗೆ ಖುಷಿಯಾದಂತಾಗಿ, ಸಣ್ಣ ಸೂಜಿ ಯೊಂದನ್ನು ಚುಚ್ಚಿ ರಕ್ತದ ಸ್ಯಾಂಪಲ್ ಸಂಗ್ರಹಿಸಲು ಅನುವಾದ. "ಅದು ದಬ್ಬಳ" ಎಂದರು ಸುರೇಖ. "ಅಲ್ಲ ಅದು ಗುಂಡುಪಿನ್" ಎಂದ ಕುಲಕರ್ಣಿ. "ಆ ವಯ್ಯನ ಸೈಜಿನಿಂದಾಗಿ ಅದು ಸಣ್ಣದಾಗಿ ಕಾಣುತ್ತಿದೆ, ಅದು ದಬ್ಬಳವೇ" ಎಂದರಾಕೆ. ಅಷ್ಟರಲ್ಲಿ ನಮಗೆ ಆ ದೇಶದಲ್ಲಿ ಆತಿಥ್ಯ ನೀಡುತ್ತಿದ್ದ ಅವಿಲ್ಲ ದಮಾರಳನ್ನು ಮಾತನಾಡಿಸಿ, ವಿವರ ಸಂಗ್ರಹಿಸಿ ಆ ದಫೂತಾಧಿಕಾರಿ ಆಕೆಯ ಬೆರಳಿಗೇ ಗುಂಡುಪಿನ್ನು ಚುಚ್ಚಿಬಿಟ್ಟಿದ್ದ ! ಮತ್ತೊಬ್ಬರಿಗೆ ಆತ ಚುಚ್ಚಿದಾಗ, ಚುಚ್ಚಿಸಿಕೊಂಡ ವ್ಯಕ್ತಿ ಅದೆಷ್ಟು ಗಾಬರಿ ಬಿದ್ದು ಹಿಂದಕ್ಕೆ ಸರಿದನೆಂದರೆ, ಕುರ್ಚಿಗೆ ಬೆನ್ನೆಲುಬು ಇಲ್ಲದಿದ್ದಲ್ಲಿ ಆ ವ್ಯಕ್ತಿ ಸೀದ ಸಮುದ್ರ ಪಾಲಾಗುತ್ತಿದ್ದ. ಈ ಘಟನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸುರೇಖ ಮತ್ತು ಕುಲಕರ್ಣಿ ತಮ್ಮ ತಮ್ಮ ಮೊಬೈಲುಗಳ ವಿಡಿಯೋ ರೆಕಾರ್ಡಿಂಗ್‌ಅನ್ನು ತಯಾರಾಗಿಟ್ಟುಕೊಂಡರು. ಏಕೆಂದರೆ ನಂತರ ಬೆರಳು ಚುಚ್ಚಿಸಿಕೊಳ್ಳುವ ಸರದಿ ನನ್ನದಾಗಿತ್ತು. ಚುಚ್ಚಿಸಿಕೊಳ್ಳುವ ಮುನ್ನವೇ ರಕ್ತ ಹರಿಯತೊಡಗಿತು ನನ್ನ ಬೆರಳಿನಿಂದ. ಅವರಿಬ್ಬರಿಗೂ ಬೇಜಾರಾಗದಿರಲಿ ಎಂದು ನಾನು ಸ್ವಲ್ಪ ನಾಟಕೀಯವಾಗಿ ಬೆಚ್ಚಿದೆ. ಅವರಿಬ್ಬರ ಮೊಬೈಲುಗಳು ಖುಷಿಗೊಂಡವು.

ಹೊರಗಿನಿಂದ ಬರುವವರು ಈ ದೇಶಕ್ಕೆ ಕಾಯಿಲೆ ತರದಿರಲಿ ಎಂದಷ್ಟೇ ಈ ಪರೀಕ್ಷೆ ಒಂದು ರೊಟೀನು. "ಇದರ ರಿಸಲ್ಟ್ ಪಡೆದುಕೊಳ್ಳಲು ಯಾವಾಗ ಬರಬೇಕು?" ಎಂದು ವೈದ್ಯಾಧಿಕಾರಿಯನ್ನು ಕೇಳಿದೆವು. ಆತ ಲೊಚಗುಟ್ಟಿದ "ಮತ್ತೆ ಬಂದೀರಿ ಈ ಕಡೆ ಜೋಕೆ" ಎಂಬಂತಿತ್ತು ಆತನ ಕ್ರೆಯೋಲ್ ಭಾಷೆ. ಭೋಜಪುರಿ ಮಿಶ್ರಿತ ಹಿಂದಿ ಮಾತನಾಡುವವರು ಅಲ್ಲಿ ವಿಪುಲ ವಾಗಿದ್ದರು. ಅಂತಹವರಲ್ಲಿ ಬಹುಮಂದಿ ಭಾರತಕ್ಕೆ ಎಂದೂ ಬಂದೇ ಇಲ್ಲವಂತೆ. "ಇದೊಂದೇ ಕ್ರಯೋಲ್ ಭಾಷೆಯ ವಾಕ್ಯ ನಮಗೆ ಅರ್ಥವಾಗಿದ್ದು ನೋಡು ಅವಿಲ" ಎಂದೆವು ನಮ್ಮ ಹೋಸ್ಟೀಗೆ. ಆಕೆ ಹುಬ್ಬು ಗಂಟಿಕ್ಕಿದಳು. "ಯೂ ಪೀಪಲ್ ಆರ್ ಮೋರ್ ಇಂಡಿಯನ್ ದ್ಯಾನ್ ಇಂಡಿಯನ್ಸ್" ಎಂದೆವು.



"ಭಾರತೀಯರಿಗಿಂತಲೂ ಹೆಚ್ಚು ಭಾರತೀಯರು ನಾವು" ಎಂದರು ಮಾರಿಷಸ್ಸಿನ ನ್ಯಾಷನಲ್ ಗ್ಯಾಲರಿಯ ನಿರ್ದೇಶಕರಾದ ನಾಯ್ಕರ್ ನಾಯ್ಡು. ಅವರ ಹೆಸರಿನಲ್ಲಿ ಮತ್ತೆರಡು ಮೊದಲ ಪದಗಳ ನೆನಪು ನನಗಿಲ್ಲ. ಆದರೆ ಲಭ್ಯವಿದ್ದ ಮಾಹಿತಿಯಲ್ಲೇ ತಮಿಳುನಾಡು, ಆಂಧ್ರ ಮೂಲಗಳು ನನ್ನ ಭಾರತೀಯ ತಲೆಯಲ್ಲಿ ಹೊಳೆದುಹೋಯಿತು. ಇಡಿಯ ಅಂಗೈಯಗಲದ ಆ ದೇಶದಲ್ಲಿ ರಾಷ್ಟ್ರೀಯ ಆಧುನಿಕ ಕಲಾಗ್ಯಾಲರಿಯನ್ನು ಆರಂಭಿಸಲು ಸೂಕ್ತ, ಹಳೆಯ ಕಟ್ಟಡವೊಂದನ್ನು ಹಲವು ದಶಕಗಳಿಂದ ಹುಡುಕಾಡುತ್ತಿದ್ದರಂತೆ. ಇದ್ದ ಒಂದು ಅಂತಹ ಸ್ಥಳವನ್ನು 'ಅಪ್ರವಾಸಿ ಘಾಟ್' ಎಂಬ ಸಂಗ್ರಹಾಲಯವನ್ನಾಗಿಸಿಬಿಟ್ಟಿದ್ದರು.

ಭಾರತೀಯರು ಕೂಲಿ ಕೆಲಸಕ್ಕೆ, 'ಇಂಡೆಂಚರ್' ಕೆಲಸದವರಾಗಿ ಅಲ್ಲಿಗೆ ಹೋದಾಗ, ಹೋದ ರೀತಿ ತೆಗೆದುಕೊಂಡು ಹೋದ ವಸ್ತುಗಳೆಲ್ಲವನ್ನು ಅಪ್ರವಾಸಿ ಘಾಟಿನಲ್ಲಿ ಶೇಖರಿಸಿದ್ದರು. ಅವರುಗಳು ಉಳಿದುಕೊಂಡಿದ್ದ ಮನೆ, ಕೋಣೆಗಳು, ಸ್ನಾನದ ಮನೆ ಇತ್ಯಾದಿಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿತ್ತು. ಎಂ.ಇ.ಐ. (ಮಹಾತ್ಮ ಗಾಂಧಿ ಇನ್ಸ್‌ಟಿಟ್ಯೂಟ್) ಕಾಲೇಜಿನಲ್ಲಿ ಹೊಸದಾಗಿ ಪತ್ರಾಗಾರವನ್ನೂ ಆರಂಭಿಸಲಾಗಿತ್ತು. ನಾವು ಅಲ್ಲಿಗೆ ಭೇಟಿ ನೀಡುವ ಮುನ್ನವೇ ಅವರು ನಮಗಾಗಿ ಕಾದಂತಿತ್ತು. ಉತ್ಸಾಹದಿಂದ ಅವರು ಪತ್ರಾಗಾರದ ಹೃದಯವನ್ನೇ ತೆರೆದಿಟ್ಟರು. ಭಾರತದಿಂದ ಹೊರಟವರ ಹೆಸರುಗಳು, ಎರಡೆರಡು ಫೋಟೋಗಳನ್ನು ಹಡಗು ಹತ್ತುವ ಮುನ್ನ ದಾಖಲಿಸಲಾಗುತ್ತಿತ್ತು. ನಮ್ಮವರದ್ದೇ ಹೆಸರು, ಬರವಣಿಗೆ ಮಾತ್ರ ಬ್ರಿಟಿಷರದ್ದು. ಅಲ್ಲಿ ಹೊರಟ ಬಹುಪಾಲು ಮಂದಿಯ ಹೆಸರನ್ನು ಮೊದಲ ಬಾರಿ, ಕೆಲವೊಮ್ಮೆ ಕೊನೆಯ ಬಾರಿಗೆ ಬರೆದದ್ದು ಅದೊಂದೇ ಬಾರಿ. ವಿಕಾರವಾದ ಸ್ಪೆಲ್ಲಿಂಗುಗಳು. ಮಾನೆಟ್ ಎಂದು ಕರೆದರೆ "ನೀನು ಬದುಕಿರುವುದಕ್ಕೇ ನಾಲಾಯಕ್ಕು" ಎಂದು ಜರಿದುಬಿಡುತ್ತಿದ್ದರು ನಮ್ಮ ಕಲಾ ಇತಿಹಾಸದ ಪ್ರಾಧ್ಯಾಪಕರಾದ ಬರೋಡ ಎಂ. ಎಸ್. ವಿಶ್ವವಿದ್ಯಾಲಯದ ಡಾ॥ ರತನ್ ಪರಿಮೂ. ಸೇಡು ತೀರಿಸಿಕೊಳ್ಳುವಂತೆ ಅವರನ್ನು 'ರಾಟನ್ ಪರಿಮಾ'ವೂ ಎಂದು ನಾವು ಪುನರ್ ನಾಮಕರಣ ಮಾಡಿಬಿಟ್ಟಿದ್ದೆವು. ಹೀಗೆ ಬ್ರಿಟಿಷ್ ವಸಾಹತು ತನ್ನ ಭಾಷೆಯನ್ನೂ ಅನಕ್ಷರಸ್ಥರ ಮೇಲೆಯೂ ಅಸ್ತ್ರವನ್ನಾಗಿ ಬಳಸಿದ ವಿಪುಲ ಉದಾಹರಣೆಗೆ ಮಾರಿಷಸ್‌ನ ಇತಿಹಾಸ ಒಂದು ಸಮೃದ್ಧ ಭೂಮಿಯಾಗಿತ್ತೆಂದು ಕಾಣುತ್ತದೆ.

ಮಾರಿಷಸ್ಸಿನ ಹೈ ಕಮೀಷನರ್ ಅವರನ್ನು ಭೇಟಿ ಮಾಡಿದಾಗ ಅವರು ತಿಳಿಸಿದ ಕುತೂಹಲದ ವಿಷಯವೊಂದಿದೆ. ಭಾರತದಿಂದ ಹೊರಟ ಹಡಗು ಮಾರಿಷಸ್ಸನ್ನು ತಲುಪಿದಾಗ, ಕೌಂಟರ್‌ಫೈಲ್‌ಅನ್ನು ಅಲ್ಲಿನ ಅಧಿಕಾರಿಗಳಿಗೆ ನೀಡಲಾಗುತ್ತಿತ್ತು. ಹಡಗಿನಲ್ಲಿದ್ದ ಕೂಲಿಗಳ ಹೆಸರು – ಫೋಟೋಗಳ ಪ್ರತಿಯನ್ನು ಅವರಿಗೆ ನೀಡಲಾಗುತ್ತಿತ್ತು. ಅಂದರೆ ಮದ್ರಾಸು, ಮುಂಬಯಿ, ಕಲ್ಕತ್ತಗಳಿಂದ ಹೊರಟಾಗ



## ಅಭಿನಂದನೆಗಳು...

ಕರ್ನಾಟಕ ಸಾಹಿತ್ಯ ಅಕಾಡೆಮಿಯ ೨೦೧೭ನೇ ಸಾಲಿನ 'ಸಾಹಿತ್ಯ ಶ್ರೀ' ಪ್ರಶಸ್ತಿಯು ಪ್ರೊ॥ ಧರಣೇಂದ್ರ ಕುರಕುರಿ, ಫಕೀರ್ ಮುಹಮ್ಮದ್ ಕಟ್ಪಾಡಿ, ಡಾ॥ ವಿಜಯಶ್ರೀ ಸಬರದ, ಡಾ॥ ವಿ. ಮುನಿವೆಂಕಟಪ್ಪ, ಡಾ॥ ನಟರಾಜ ಹುಳಿಯಾರ್, ಡಾ॥ ಕೆ. ಕೇಶವ ಶರ್ಮ, ಡಾ॥ ಕರೀಗೌಡ ಬೀಚನಹಳ್ಳಿ, ಪ್ರೊ॥ ತೇಜಸ್ವಿ ಕಟ್ಟೀಮನಿ, ಡಾ॥ ಕಮಲಾ ಹೆಮ್ಮಿಗೆ ಮತ್ತು ಶ್ರೀ ಕಂಚ್ಯಾಣಿ ಶರಣಪ್ಪ ಇವರುಗಳಿಗೆ ಲಭಿಸಿದೆ.

ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಭಾರತದ್ದೇ ಅಸಲಿ ದಾಖಲೆಯ ಹೆಸರು–ಫೋಟೋ ಕಡತಗಳು ಇರಬೇಕಲ್ಲ? ಅದು ಭಾರತದಲ್ಲಿ ಇನ್ನೂ ಅಲಭ್ಯವೇ ಆಗಿದೆ, ಪ್ರಾಯಶಃ ಎಂದೆಂದಿಗೂ ಸಹ.

ಎಲ್ಲೆಡೆ ಆಗುವಂತೆ, ಹೊಸ ದೇಶದಲ್ಲಿ ಶ್ರೀಮಂತರಾಗಬಹುದು, ಜಮೀನಿನ ಒಡೆಯರಾಗಬಹುದು ಎಂಬಿತ್ಯಾದಿ ಆಶ್ವಾಸನೆಗಳೊಂದಿಗೇ ಭಾರತೀಯರನ್ನು ಅಲ್ಲಿ ಕರೆತರಲಾಗಿತ್ತು. ಕಬ್ಬು, ಚಹ ಹಾಗೂ ಬಾಳೆ ಅಲ್ಲಿನವರ ಮುಖ್ಯ ಬೆಳೆ, ಇಂದಿಗೂ. ಆ ದ್ವೀಪದಲ್ಲಿ ಇಂದಿಗೂ ಒಂದೂ ಹಾವು ಕಾಣುವುದಿಲ್ಲವಂತೆ. ಅಲ್ಲಿ ಹೋದಾಗ ಟೀ, ಕಬ್ಬು, ಬಾಳೆಯ ಎಸ್ಟೇಟುಗಳ ಒಡೆಯರು ಅವರನ್ನು ಹೈರ್ ಮಾಡುತ್ತಿದ್ದರು, ತಪ್ಪಿಸಿಕೊಂಡವರನ್ನು ಫೈರ್ ಮಾಡುತ್ತಿದ್ದರು.

ಪತ್ರಾಗಾರ ಕೇವಲ ದಾಖಲೆಯ ಕೆಲಸ ಎನ್ನಿಸಿಬಿಡಬಹುದು, ಸಹಜವಾಗಿ. ಆದರೆ ಅವರು ಸೂಚಿಸಿದ ಸಮಸ್ಯೆಯೊಂದು ಅಪರೂಪದ್ದಲ್ಲದಿದ್ದರೂ ವಿಕ್ಷಿಪ್ತವಾಗಿತ್ತು: ಈಗಲೂ ತಮ್ಮ ಪುರಾತನರು ಭಾರತದಲ್ಲಿ ಯಾರು, ಎಲ್ಲಿಂದ ಬಂದರು, ಈಗ ಅವರ ಮುಂದಿನ ಪೀಳಿಗೆಯವರು ಎಲ್ಲೆಲ್ಲಿ ಇದ್ದಾರೆ ಎಂದು ಹುಡುಕುವ ಅನೇಕ ಮಂದಿ ಆ ಪತ್ರಾಗಾರಕ್ಕೆ ಬರುತ್ತಿದ್ದಾರಂತೆ. ಅದಕ್ಕೆ ಸೂಕ್ತವಾಗಿ ಮಾನ್ಯಮಾಡಲಾದ ದಾಖಲೆಗಳನ್ನೂ ಪಡೆದುಕೊಳ್ಳುತ್ತಿದ್ದಾರಂತೆ. ಅದು ಈಗ ಅವರಿಗೆ 'ಆಧಾರ್' ಕಾರ್ಡ್ ಇದ್ದಂತೆ.

ಕಣ್ಮುಚ್ಚಿ ಮೊಬೈಲಿನಲ್ಲಿ ಕ್ಲಿಕ್ ಮಾಡಿದರೂ ಮಾರಿಷಸ್ ಸ್ವರ್ಗವೇ. ಮೊದಲು ದೇವರು ಮಾರಿಷಸ್ಸನ್ನು ಸೃಷ್ಟಿಸಿದನಂತೆ, ಆಮೇಲೆ ಅದನ್ನು ಆಧರಿಸಿ ಸ್ವರ್ಗ ಸೃಷ್ಟಿಸಿದನಂತೆ. ಟ್ರಿನಿಡಾಡ್ – ಟೊಬ್ಯಾಗೋ ಮುಂತಾದ ವೆಸ್ಟ್‌ಇಂಡೀಸಿನ ಬಗ್ಗೆಯೂ ಹೀಗೇ ಹೇಳಬಹುದೇನೋ. 'ಭಾರತವನ್ನು ಖಂಡಖಂಡವಾಗಿ ಅನುಭವಿಸಿ ಅದರ ಅಖಂಡತೆಯನ್ನು ಅಂದಾಜಿಸಬೇಕು' ಎಂಬ ವಾಕ್ಯವು, ಭಾರತವನ್ನು ಕುರಿತಾದ ಪ್ರವಾಸಿ ಪುಸ್ತಕದಲ್ಲಿದ್ದು ಆ ಪುಸ್ತಕ ಮಾತ್ರ ಅಲ್ಲಿನ ಹೈಕಮೀಷನರ್ ಅವರ ಕಾಯುವ ಕೋಣೆಯ ಮೇಜಿನ ಮೇಲಿತ್ತು. ಅದನ್ನು ಓದಲು ಮಾತ್ರ ಬಹಳಷ್ಟು ಸಮಯ ನೀಡುವ ಹೈಕಮೀಷನರ್ ತಮ್ಮ ಭೇಟಿಯನ್ನು ಮಾತ್ರ ಮೊಟಕುಗೊಳಿಸಿದ್ದರು. ನಾವು ಅವರ ಕೋಣೆ ಹೊಕ್ಕಾಗಲೇ ಆಕಸ್ಮಿಕವಾಗಿ ಬಾಗಿಲ ಕಡೆ ಇದ್ದ ಅವರ ಕಣ್ಣಿನ ಸಂಜ್ಞೆಯನ್ನು ನನ್ನ ಕಣ್ಣಂಚಿನಿಂದ ಗಮನಿಸಿದೆ. ಕಾಫಿ–ಟೀ–ನೀರಿನ ಅವಶ್ಯಕತೆಗೆ ನಾವು ಯೋಗ್ಯರಲ್ಲವೆಂದು ಅವರ ಅನುಚರರಿಗೆ ಸೂಚಿಸಿತು ಅವರ ಚಟುವಟಿಕೆ. ಪಾಪ, ಅವರಾದರೂ ಏನು ಮಾಡಿಯಾರು. ಯಾವುದೇ ಉದ್ದೇಶವಿಲ್ಲದೆ, ಕೇವಲ ಸಾಂಸ್ಕೃತಿಕ ರಂಗದವರಾದ ನಮ್ಮಲ್ಲಿ ಅವರಿಗೆ ಸುದೀರ್ಘವಾಗಿ ಮಾತನಾಡುವುದಾದರೂ ಏನಿತ್ತು? "ಭಾರತಕ್ಕೆ, ಬೆಂಗಳೂರಿಗೆ, ನಮ್ಮ ಚಿತ್ರಕಲಾ ಮಹಾವಿದ್ಯಾಲಯಕ್ಕೆ ಬರುವವರ ಸಂಖ್ಯೆಯನ್ನು ಹೆಚ್ಚಿಸಿ, ಅವರಿಗೆ ಹೆಚ್ಚಿನ ಆರ್ಥಿಕ ಸೌಲಭ್ಯ ದೊರಕಿಸಿಕೊಡಿ, ಭಾರತೀಯ ಕಲೆಯನ್ನು ಕುರಿತಾದ ಸಾಹಿತ್ಯವನ್ನು ಮಾರಿಷಸ್ಸಿನ ಕ್ರಯೋಲ್–ಫ್ರೆಂಚ್ ಭಾಷೆಗೂ, ಅಲ್ಲಿನ ಕಲೆಯ ಕುರಿತ ಸಾಹಿತ್ಯವನ್ನು ಕನ್ನಡಕ್ಕೂ ತರ್ಜುಮೆ ಮಾಡುವ ವ್ಯವಸ್ಥೆ ಮಾಡಿ" ಎಂಬ ನಮ್ಮ ಸಲಹೆ–ಸಹಕಾರದ ಆಶ್ವಾಸನೆಗಳೆಲ್ಲಕ್ಕೂ, ಅವುಗಳನ್ನು ಪ್ರಸ್ತುತಪಡಿಸುವ ಮುನ್ನವೇ ಬದಿಗೆ ಸರಿಸಲಾಗಿತ್ತು.

ದೇಶದ ದಕ್ಷಿಣ ಭಾಗದಲ್ಲಿರುವ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ಚಿಕ್ಕದಾದರೂ ಚಂದವಾಗಿದೆ. ಅದಕ್ಕೆ ಕಾರಣ ಅಲ್ಲಿ ಹೊರಗಿನವರನ್ನು ಸ್ವಾಗತಿಸಿಕೊಳ್ಳುವ ವಿಧಾನ. ಹಾರ ತುರಾಯಿ ನೀಡದಿದ್ದರೂ, ಅಮೇರಿಕದವರಂತೆ ಗುರಾಣಿ ಹಿಡಿದು ನಿಲ್ಲುವುದಿಲ್ಲ. ಬೆಂಗಳೂರಿನವರಾದ ನಮಗೆ ಅಲ್ಲಿನ ಸಣ್ಣಪುಟ್ಟ ರಸ್ತೆಗಳೂ ಸಹ ಭಾರಿ ತೊಂದರೆ ಕೊಟ್ಟುಬಿಟ್ಟವು. ದಢಕ್ಕನೆ ಬರುವ ಹಳ್ಳದಲ್ಲಿ ಜೋಲಾಡುವ ನಮ್ಮ ದೇಹ, ಅಚಾನಕ್ ಅಕ್ಕಪಕ್ಕದಿಂದ ನುಗ್ಗಿ ಅಡ್ಡಡ್ಡ ಓಡಾಡುವ ಪಾದಚಾರಿಗಳು ನಮ್ಮನ್ನು

ಎಚ್ಚರದಿಂದಿರಿಸುವ ಝೆನ್ ತಂತ್ರ, ಎಫ್.ಎಂ.ನ ಕೆಟ್ಟ ಹಾಡುಗಳನ್ನು ಕೇಳುವಾಗ, ಅದಕ್ಕೊಂದು ಆಹ್ಲಾದಕರವಾದ ಕಮರ್ಷಿಯಲ್ ಬ್ರೇಕ್ ನೀಡುವ ಕರ್ಣಾನಂದಕರವಾದ ಹಾರ್ನುಗಳು, ಬ್ಯಾಂಕ್ ಸೇವಿಂಗ್ಸ್ ತರಹ ಯಾರಾದರೂ, ಏನಾದರೂ ಅಡ್ಡ ಬರುವ ಮುನ್ನವೇ ಅಡ್ವಾನ್ಸ್ ಈ.ಎಂ.ಐ. ಕಟ್ಟುವಂತೆ ತೆವಲಿಗೆ ಹಾರ್ನ್ ಬಾರಿಸುವವರ ಎಚ್ಚರ – ಇವೆಲ್ಲವನ್ನೂ ಅಲ್ಲಿ ನಾವು ನಿಜಕ್ಕೂ ಮಿಸ್ ಮಾಡಿಕೊಂಡೆವು. ಎಲ್ಲವೂ ಅನವಶ್ಯಕವಾಗಿ ಸುಸೂತ್ರವಾದ ಡ್ರೈವ್. ಮುಂದಿನ ವಾಹನದ ಹಿಂದಿನ ಚಕ್ರವು ನೆಲಕ್ಕೆ ತಾಗುವುದು ಕಾಣುವಂತಹ ಅಂತರದಲ್ಲಿ ನಮ್ಮ ವಾಹನವನ್ನು ನಿಲ್ಲಿಸಿಕೊಳ್ಳುವುದನ್ನು 'ಅಂತರ ಕಾಪಾಡಿಕೊಳ್ಳುವುದು' ಎಂಬ ನಮ್ಮ ಆರ್.ಟಿ.ಓ. ನಿಯಮದ ಪಾಲನೆಯಲ್ಲಿ ಅಲ್ಲಿ ಅನುಷ್ಠಾನಗೊಳಿಸಿರುವುದನ್ನು ಕಣ್ಣಾರೆ ಕಂಡೆ. ಆದ್ದರಿಂದ ಅವರುಗಳ ಟ್ರಾಫಿಕ್ ಜಾಮ್ ಪರಿಕಲ್ಪನೆಗಳನ್ನು ಕಂಡು ನಾವು ನಗಾಡುತ್ತಿದ್ದೆವು.

ಮಾರಿಷಸ್ ಎಂಬ ಇಡಿಯ ಮಾರೀಚ ದೇಶವನ್ನು ನಾಲ್ಕಾರು ಗಂಟೆಗಳಲ್ಲಿ ವಾಹನದಲ್ಲಿ ಸುತ್ತಾಡಿಬಿಡಬಹುದು. ಹೋದಲ್ಲೆಲ್ಲ ಬೀಚುಗಳು, ಬೀಚ್ ಬೀಚ್ ಮೆ ಸಣ್ಣ ನದಿ, ತೊರೆ, ಜಲಪಾತಗಳು. ಭಾರತಕ್ಕೆ ಒಮ್ಮೆಯೂ ಬರದವರೂ ಸಹ ನಿರರ್ಗಳ ಹಿಂದಿ ಮಾತನಾಡುತ್ತಾರೆ, ಪಠ್ಯಪುಸ್ತಕದ ಶೈಲಿಯಲ್ಲಿ, ನೀವು ಭಾರತೀಯ ರಾಗಿದ್ದರೆ, ಅಲ್ಲಿ ಬಾಯಿ ಬಿಡದಿದ್ದರೆ ನಿಮ್ಮನ್ನು ಕ್ಯಾರೆ ಎನ್ನುವುದಿಲ್ಲ ಅವರು. ನೀವು ಅಲ್ಲಿನವರೇ ಎಂಬ ತಪ್ಪರ್ಥೈಸುವಿಕೆಯ ಕಾರಣದಿಂದ ಹೀಗಾಗುತ್ತದೆ. ಅರ್ಥವಾಗ ದಿದ್ದರೂ ಹಿಂದಿ ಸಿನೆಮ, ಹಾಡುಗಳನ್ನು ನಿರಂತರವಾಗಿ ಟಿವಿಯಲ್ಲಿ ವೀಕ್ಷಿಸುವ ಇವರು, ಅದ್ಯಾವ ಕಾರಣಕ್ಕೋ ೧೯೮೦ರ ದಶಕದ ಹಾಡುಗಳನ್ನೇ ಕೇಳುತ್ತಿದ್ದಾರೆ, ಇನ್ನೂ ನಾವು ಮಾರಿಷಸ್‌ಗೆ ಭೇಟಿ ನೀಡಲು ಮುಖ್ಯ ಕಾರಣ ಅಲ್ಲಿನ ಒಂದು ಕಲಾ ಶಾಲೆಯ ಪ್ರೊಫೆಸರ್ ಅವಿಲ್ಲಾ ದಮಾರ್. ನಾವು ಬೋಧಿಸುವ ಚಿತ್ರಕಲಾ ಪರಿಷತ್ತಿನಲ್ಲಿ ಈಗ ಆಕೆ ಸ್ನಾತಕೋತ್ತರ ಪದವಿ ವಿದ್ಯಾರ್ಥಿನಿ. ಇನ್ನೂ ಕಲೆ ಹಾಗೂ ಸಂಸ್ಕೃತಿಯ ರೂಪುರೇಷೆಯೊಂದನ್ನು ರೂಢಿಸಿಕೊಳ್ಳಬೇಕಾಗಿರುವ ಚಿಕ್ಕ ಹಾಗೂ ಯೌವ್ವನದಲ್ಲಿರುವ ಮಾರಿಷಸ್ ದೇಶಕ್ಕೆ ಭಾರತವು ಒಂದು ಮುಖ್ಯ ಹಾಗೂ ಸಮೀಪದ ಮಾದರಿ. ನಮ್ಮನ್ನು ಅಲ್ಲಿ ಭಾರತೀಯ ಕಲೆಯ ಬಗ್ಗೆ ಮಾತನಾಡಲು ಅವಿಲ್ಲ ಕರೆದೊಯ್ದರು. ಅಲ್ಲಿ ನೋಡಿದರೆ, ಕಾಲು ಶತಮಾನದ ಹಿಂದೆ ಶಾಂತಿನಿಕೇತನದಲ್ಲಿ ನನ್ನ ಸಹಪಾಠಿಯಾಗಿದ್ದ ಹಾನ್ಸ್ ರಾಮದತ್ತ ಆಕೆಯ ವಿಭಾಗದ ಮುಖ್ಯಸ್ಥ! ಆಕೆಯ ಉಳಿದ ಸಹಬೋಧಕರಲ್ಲಿ ಒಬ್ಬರು ನಮ್ಮ ಗುರುಗಳಾಗಿದ್ದವರ ಸಹಪಾಠಿಗಳು, ಮಾರಿಷಸ್ಸಿನಲ್ಲಿ ಸಮುದ್ರ ಹಾಗೂ ಬೀಚನ್ನು ಹುಡುಕಿಹೋಗಬೇಕಿಲ್ಲ. ಈ ಪುಟ್ಟ ದ್ವೀಪದ ಅಂಚಿನಲ್ಲಿ ರಾಷ್ಟ್ರೀಯ ಹೆದ್ದಾರಿ. ಅದರ ಒಂದು ಕಡೆ ನಿರಂತರ ಸಮುದ್ರ, ಈ ಎರಡರ ನಡುವೆ, ಬೀಚ್ ಬೀಚ್ ಮೆ ಬೀಚುಗಳು. ೨೦೦೪ರ ಸುನಾಮಿಯ ಮುಂಚೆ ಅಲ್ಲಿನ ಸಮುದ್ರದಂಚಿನ ಮನೆಗಳಿಗೆ ವಿದೇಶಿ ಪ್ರಜೆಗಳ ನಡುವೆ ಭಾರಿ ಸ್ಪರ್ಧೆಯಿತ್ತಂತೆ. ಈಗ ಎಲ್ಲರೂ ಹೆದರಿ ನಡುಗುಡ್ಡೆಗೆ ಹೋಗುತ್ತಿದ್ದಾರೆ, ಬೆಂಗಳೂರಿನ ಜನನಿಬಿಡ ರಸ್ತೆಗಳಿಂದ ಜನವಸತಿ ದೂರವಿರಲಿ ಎಂದು ಬಯಸಿದಂತೆ. ಈ ಪ್ರಾಕೃತಿಕ ದ್ವೀಪದ ಪ್ರಕೃತಿಯೇ ವಿಚಿತ್ರ. ನಮ್ಮಲ್ಲಿ ಚಳಿಯಿರುವ ಡಿಸೆಂಬರಿನಲ್ಲಿ ಅಲ್ಲಿ ಬೇಸಿಗೆಯಂತೆ. "ಈಕ್ವೆಡಾರಿನ ಬಳಿ ಇದೆಯಲ್ಲ, ಅದಕ್ಕೆ" ಎಂದರು ಯಾರೋ. ಇರಬಹುದು ಎಂದುಕೊಂಡೆವು. "ಸುನಾಮಿ ಭಯವಿಲ್ಲ, ಏಕೆಂದರೆ ಭಾರತ ಅಡ್ಡವಿದೆಯಲ್ಲ, ಗೋಡೆಯಂತೆ" ಎಂದರು ಮತ್ತೂ ಯಾರೋ. ಹೌದಲ್ಲಾ! ಎಂದುಕೊಂಡೆವು. ಅದರ ಎಡಕ್ಕಿರುವ ಆಫ್ರಿಕದ ಮಡಗಾಸ್ಕರ್ ಎಂಬ ದ್ವೀಪವನ್ನು ಮ್ಯಾಪಿನಲ್ಲಿ ನೋಡುವಷ್ಟು ಸಾಕೆಂದು ಚಿಕ್ಕ ದಾಗಿಸಿದರೆ, ಮಾರಿಷಸ್ ಚುಕ್ಕೆಯಾಗಿ ಕಾಣದಂತೆಯೂ ಆಗಿಬಿಡಬಲ್ಲಷ್ಟು ಪುಟ್ಟದು.

ಶಿವರಾತ್ರಿ ಅವರಿಗೆ ರಾಷ್ಟ್ರೀಯ ಹಬ್ಬದಂತಿದ್ದು ಹತ್ತಾರು ದಿನ, ಕಾವಡಿಗೆ ತಮಿಳರು ಹೋದಂತೆ ನಡೆದು ಹೋಗುತ್ತಾರಂತೆ, ಗಂಗಾತಾಲಾವ್ ಎಂಬಲ್ಲಿಗೆ. ನಾವು ಇದ್ದಲ್ಲಿಂದ ಅಲ್ಲಿಗೆ ಅರ್ಧ ಗಂಟೆಯ ಹಾದಿಯಿತ್ತು. ಹೊರಡುವಾಗ ಬಿಸಿಲು ಸುಡುತ್ತಿತ್ತು. ನಿರ್ಜನ ರಸ್ತೆ, ಇಕ್ಕೆಲಗಳಲ್ಲಿ ಕಬ್ಬು, ಚಹಾ, ಬಾಳೆಯ ಎದೆಯೆತ್ತರ ತೋಟಗಳನ್ನು ದಾಟಿ ಅಲ್ಲಿ ತಲುಪಿದಾಗ, "ಅಲ್ಲಿ ನೋಡಿ, ಮಾರಿಷಸ್ಸಿನ ಅತ್ಯಂತ ದೊಡ್ಡ ರಾಮ–ಶಿವರ ಶಿಲ್ಪ" ಎಂದು ಅವಿಲ್ಲ ತೋರಿಸಿದಾಗ, ಬರಿಯ ಮಂಜು, ಬೀಸುವ ಗಾಳಿ ಮತ್ತು ಕಣ್ಣುಗತ್ತಲೆ. ಕೇವಲ ಕಾಲುಗಂಟೆ ಸಮಯದಲ್ಲಿ ಸುಡುಬಿಸಿಲು ಬಿರುಗಾಳಿ–ಮಳೆಯಾಗುವ ಕಾಲದ ಫಾಸ್ಟ್ ಫಾರ್ವರ್ಡ್ ನೋಡಿದ್ದು, ಅಥವಾ ಏನನ್ನೂ ನೋಡಲಾಗದಂತಾದದ್ದು ಮಾರಿಷಸ್ಸಿನಲ್ಲಿಯೇ.

ಮೊದಲಿಗೆ ಫ್ರೆಂಚರು, ಬ್ರಿಟಿಷರು ಅಲ್ಲಿ ನೆಲೆ ನಿಂತಾಗ, ಕೂಲಿಯಾಳುಗಳನ್ನು ಆಫ್ರಿಕ, ನಂತರ ಭಾರತ ಮುಂತಾದ ಪ್ರದೇಶಗಳಿಂದ ಎಳೆದು ತರುತ್ತಿದ್ದರಂತೆ. ತಪ್ಪಿಸಿಕೊಂಡವರು ಆ ಸ್ವರ್ಗದ ಬೆಟ್ಟದ ಮೇಲೇರುತ್ತಿದ್ದರಂತೆ. ಅದನ್ನು ತಿಳಿದಿದ್ದ ಅಧಿಕಾರಿಗಳು ಅಲ್ಲಿ ಅವರುಗಳನ್ನು ಸುತ್ತುವರಿದಾಗ, ಕೆಲಸಗಾರರು ಕೆಳಕ್ಕೆ ಹಾರಿ ಸಾಯುತ್ತಿದ್ದರಂತೆ. ಈಗ ಅದು ಪ್ರವಾಸಿ ತಾಣವಾಗಿದೆ. ಇಂತಹ ಅದ್ಭುತ ತಾಣವೊಂದನ್ನು ಮನಸ್ಸಿನಲ್ಲಿಯೇ ಅಂದುಕೊಂಡು ಕಳೆದ ಕ್ಷಣಗಳನ್ನೆಲ್ಲಾ ನೆನಪಿನ ಬುತ್ತಿಯಲ್ಲಿ ತುಂಬಿಕೊಂಡು ಅಲ್ಲಿಂದ ಹೊರಟೆವು. ಆದರೆ ಜೀವನದಲ್ಲಿ ಒಂದು ಸಲ ಮಾರಿಷಸ್‌ಅನ್ನು ನೋಡಲೇಬೇಕು ಅಲ್ಲಿ ಕಳೆದ ಕೆಲವೊಂದು ಕ್ಷಣಗಳು ರೋಮಾಂಚನ ಅದ್ಭುತ ಎಂದು ಹೇಳಬಹುದು.

**ಬಳಕೂರು ವಿ. ಎಸ್. ನಾಯಕ್**
ಕನ್ನಡ ವಿಭಾಗದ ಮುಖ್ಯಸ್ಥರು, ಕರ್ನಾಟಕ ಚಿತ್ರಕಲಾ ಪರಿಷತ್,
ಚಿತ್ರಕಲಾ ಮಹಾವಿದ್ಯಾಲಯ, ಬೆಂಗಳೂರು

## ಸುದ್ದಿ ಚಿತ್ರ




ಬೆಂಗಳೂರಿನ ಶ್ರೀ ಶಂಕರ ಕ್ಯಾನ್ಸರ್ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರದಲ್ಲಿ ದಿ. ೨೪–೨–೨೦೧೮ ರಂದು ಯೋಗರತ್ನ ಡಾ॥ ಎಸ್. ಎನ್. ಓಂಕಾರ್ ಅವರ 'ಪ್ರಾಣಾಯಾಮ ಪ್ರಕಾಶಿಕಾ' ಕೃತಿಯನ್ನು ಡಾ॥ ಬಿ. ಎನ್. ಗಂಗಾಧರ ಅವರು ಲೋಕಾರ್ಪಣೆ ಮಾಡಿದರು.
ವೇದಿಕೆಯಲ್ಲಿ ಕೃತಿಯ ಲೇಖಕ ಡಾ॥ ಎಸ್. ಎನ್. ಓಂಕಾರ್, ಡಾ॥ ಬಿ. ಎಸ್. ಶ್ರೀನಾಥ್ (ಖ್ಯಾತ ಕ್ಯಾನ್ಸರ್ ಶಸ್ತ್ರಚಿಕಿತ್ಸಾ ತಜ್ಞರು), ಡಾ॥ ಬಿ. ಎನ್. ಗಂಗಾಧರ (ಮನೋವೈದ್ಯಶಾಸ್ತ್ರದ ಪ್ರಾಧ್ಯಾಪಕರು, ನಿಮ್ಹಾನ್ಸ್) ಹಾಗೂ ನವಕರ್ನಾಟಕ ಪ್ರಕಾಶನದ ಕಾರ್ಯ ನಿರ್ವಾಹಕ ನಿರ್ದೇಶಕರಾದ ಶ್ರೀ ಎ. ರಮೇಶ ಉಡುಪ ಅವರು ಉಪಸ್ಥಿತರಿದ್ದರು.







**ಕತೆಯಲ್ಲದ ಕತೆ**

*ಸುನಂದಾ ಪ್ರಕಾಶ ಕಡಮೆ*

**ಪುಟ : ೧೨೪**

**ಬೆಲೆ : ರೂ. ೧೦೦**

**ಅಪರಂಜಿ ಪ್ರಕಾಶನ**

ಚಿಕ್ಕಮಗಳೂರು

*ಸುನಂದಾ ಪ್ರಕಾಶ ಕಡಮೆ ಅವರ 'ಕತೆಯಲ್ಲದ ಕತೆ'ಯಲ್ಲಿರುವ 20 ಪ್ರಬಂಧಗಳನ್ನು – ಸ್ವಕಥನ ಪ್ರಬಂಧಗಳು ಎನ್ನುತ್ತಾರೆ. ಸುನಂದಾ ಅವರು ಈ ಪ್ರಬಂಧಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಪತ್ರಿಕೆಗಳಿಗೆ ಬರೆದುಕೊಟ್ಟ ಪ್ರಬಂಧಗಳಾಗಿವೆ. 'ಬೃಹದಾಕಾರದ ಹೆಜ್ಜೆಯ ನನ್ನ ದಾದಾ' ಎಂಬ ಮೊದಲ ಪ್ರಬಂಧದಲ್ಲಿಯೇ ತನ್ನ ತಂದೆಯ ಬಗ್ಗೆ ಎಷ್ಟೊಂದು ಆಪ್ತವಾಗಿ ಚಿತ್ರಿಸುತ್ತಾರೆ ಎಂದರೆ ಅವರ ಪ್ರಭಾವ ಇಂದಿಗೂ ಸುನಂದಾ ಅವರ ಮೇಲೆ ಉಳಿದು ಕೊಂಡಿರುವುದನ್ನು ತೋರಿಸುತ್ತದೆ. 'ಸಿಹಿ ನಿಷೇಧಿತ ನಾಗಪಂಚಮಿ' ಎಂಬ ಪ್ರಬಂಧ ಅವರ ಹಿಂದಿನ ತಲೆಮಾರುಗಳಿಗೆ ಸೇರಿದ ಕತೆಯಾಗಿದ್ದು ಈ ಕಥೆ ಪುರಾಣ ಮತ್ತು ಇಂದಿನ ತಲೆಮಾರುಗಳ ನಡುವಿನ ಕೊಂಡಿಗಳನ್ನು ಬೆಸೆದುಕೊಂಡ ಅಪರೂಪದ ಕಥೆಯಾಗಿದೆ. 'ಬೇಸಿಗೆಯ ಬಾವಿ ತುಂಬಲು ಚೌಡಮ್ಮನ ಸ್ನಾನ' ನೀರಿನ ಜೊತೆಗೆ ಅದೇ ರೀತಿಯ ನಂಬಿಕೆ ಮತ್ತು ಸಂಬಂಧಗಳ ಮಧ್ಯೆ ಸಾಗುತ್ತದೆ. 'ಶಿಕ್ಷಣ ಮೌಲ್ಯ ಮತ್ತು ಮಾನವ ವಿಕಾಸ' ಪ್ರಬಂಧ ವಿಶೇಷವಾಗಿ ಕಾಣಿಸುತ್ತದೆ. ಸುನಂದಾ ಅವರ ಪ್ರಬಂಧಗಳು ಹೆಣ್ಣಿನ ಅನೇಕ ಮುಖಗಳನ್ನು ತೆರೆದು ತೋರಿಸುವಲ್ಲಿ ಸಫಲವಾಗಿದ್ದು ಓದುಗರಿಗೆ ಹೊಸ ಹೊಳಹುಗಳನ್ನು ನೀಡುತ್ತವೆ. ಇವರ ಬರಹಗಳಿಗೆ ವಿಶಾಲವಾದ ಹರವು ಇರುವುದು ಎದ್ದು ಕಾಣಿಸುತ್ತದೆ. ಹಲವು ಪ್ರಕಾರಗಳಲ್ಲಿ ಕೈ ಆಡಿಸಿರುವ ಸುನಂದಾ ಕನ್ನಡದ ಸಮರ್ಥ ಲೇಖಕಿಯಾಗಿ ಗುರುತಿಸಿಕೊಂಡಿದ್ದು, ಇವರ ಸಾಹಿತ್ಯ ಇಂಗ್ಲಿಷ್ ಭಾಷೆಯೂ ಸೇರಿದಂತೆ ಹಲವು ಭಾಷೆಗಳಿಗೆ ಭಾಷಾಂತರಗೊಂಡು ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.*

**ಎಲ್ಲೆ ಮೀರಿ** *ಗೂಗಿ ವಾ ಥಿಯಾಂಗೋ ಕನ್ನಡಕ್ಕೆ : ಡಾ|| ಎಚ್. ಎಸ್. ನಾಗಭೂಷಣ*

**ಪುಟ : ೨೨೪** **ಬೆಲೆ : ರೂ. ೨೦೦**

**ಸೃಷ್ಟಿ ಪಬ್ಲಿಕೇಷನ್ಸ್,** ವಿಜಯನಗರ, ಬೆಂಗಳೂರು – ೫೬೦ ೦೪೦




*ವಸಾಹತೋತ್ತರ ಚಿಂತಕರಲ್ಲಿ ಅತಿಪ್ರಮುಖರಾದ ಎನ್ ಗೂಗಿ ವಾ ಥಿಯಾಂಗೋರ 'ಎಲ್ಲೆ ಮೀರಿ' ಎಂಬ ವೈಚಾರಿಕ ಲೇಖನಗಳ ಸಂಗ್ರಹವನ್ನು ಕನ್ನಡಕ್ಕೆ ಡಾ|| ಎಚ್. ಎಸ್. ನಾಗಭೂಷಣ ಅವರು ತಂದಿದ್ದಾರೆ. ಎನ್ ಗೂಗಿ ಅವರ ಪ್ರಕಾರ "ವಸಾಹತುಶಾಹಿಯು ಕೇವಲ ರಾಜಕೀಯ ಸಂಗತಿಯಲ್ಲ; ಸಾಮ್ರಾಜ್ಯಶಾಹಿಯ ಆರ್ಥಿಕ, ರಾಜಕೀಯ, ಮಿಲಿಟರಿ, ಸಾಂಸ್ಕೃತಿಕ ಹಾಗೂ ಮಾನಸಿಕ ಆಯಾಮಗಳು ಇಂದಿನ ಜಗತ್ತಿನ ಎಲ್ಲಾ ಪ್ರಜೆಗಳನ್ನು ಪ್ರಭಾವಿಸುತ್ತವೆ." ಅವರಿಗೆ ಕೇವಲ ವಸಾಹತುಶಾಹಿ ಕಥನಗಳನ್ನು ಕಥಿಸುವುದರಲ್ಲಿ ಆಸಕ್ತಿಯಿಲ್ಲ; ಒಂದು ಸಮಾಜದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಧ್ಯಪ್ರವೇಶ ಮಾಡಿ, ಅಲ್ಲೊಂದು ಬದಲಾವಣೆಯನ್ನು ತರುವ ಕಥನಗಳು ಅವರಿಗೆ ತುಂಬಾ ಮುಖ್ಯವೆನಿಸುತ್ತವೆ. ಜವಾಬ್ದಾರಿಯುತ ಲೇಖಕನೊಬ್ಬ ಪ್ರಭುತ್ವದೊಡನೆ ರಾಜಿ ಮಾಡಿಕೊಳ್ಳುವುದು ಎಂದಿಗೂ ಅಸಾಧ್ಯ ಎಂದು ವಾದಿಸುವ ವಾ ಥಿಯಾಂಗೋ ಅವರು ಸಾಹಿತಿ ಎರಡು ಭಿನ್ನ ನೆಲೆಗಳಲ್ಲಿ ಹೋರಾಡಬೇಕಾಗುತ್ತದೆ ಎನ್ನುತ್ತಾರೆ. ಒಂದು : ತನ್ನ ಮೇಲೆ ಹೇರಲಾಗುತ್ತಿರುವ ಸಾಂಸ್ಕೃತಿಕ ವಸಾಹತುಶಾಹಿಯೊಡನೆ, ಮತ್ತೊಂದು ತನ್ನದೇ ದೇಶದ ಸರ್ವಾಧಿಕಾರ ದೊಡನೆ. ಸೈಮನ್ ಗಿಕುಂಡಿ ಹೇಳುವಂತೆ, ಲೇಖಕ ಹಾಗೂ ಪ್ರಭುತ್ವ ಇವರ ನಡುವೆ ಇರಬೇಕಾದ ವಿರೋಧವು ಎನ್ ಗೂಗಿ ಅವರು ರೂಪಿಸುವ ಪ್ರಮುಖ ಮಾದರಿ. ಯಾರೊಂದಿಗೂ ಸಂಬಂಧವಿಟ್ಟುಕೊಳ್ಳದ ವ್ಯಕ್ತಿ, ಉಸಿರಾಡುವ ಗಾಳಿಯ ಮೂಲಕವಾದರೂ ಸಂಬಂಧವಿಟ್ಟುಕೊಂಡೇ ಇರಬೇಕಾಗುತ್ತದೆ ಎಂಬ ಸತ್ಯವನ್ನು ತನ್ನ ಬರಹ, ಚಿಂತನೆಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಅತ್ಯಂತ ಮೌಲಿಕವಾದ ಈ ಪುಸ್ತಕ ಕನ್ನಡಕ್ಕೆ ಬಂದದ್ದು ಅತ್ಯಂತ ಸ್ವಾಗತಾರ್ಹ.*




**ಭಾರತೀಯ ಭಾಷಾ ಸಾಹಿತ್ಯಗಳ ವರ್ಗಸೆಲೆ** *ಸಂ. ಪ್ರೊ|| ಬಿ. ಗಂಗಾಧರ ಮೂರ್ತಿ*

**ಪುಟ : ೧೬೦** **ಬೆಲೆ : ರೂ. ೧೧೦**

**ಲಡಾಯಿ ಪ್ರಕಾಶನ,** ಗದಗ – ೫೮೨ ೧೦೧

*ಶ್ರೀ ಎಸ್. ನಾರಾಯಣ ಮತ್ತು ಪ್ರೊ|| ಬಿ. ಗಂಗಾಧರ ಮೂರ್ತಿಯವರು ಒಡನಾಡಿಗಳಾಗಿ ಮೈಸೂರಿನಲ್ಲಿ ವಿಕಾಸ ಪ್ರಕಾಶನ ಆರಂಭಿಸಿದರು. ತದನಂತರ 'ಒಡನಾಡಿ' ಎಂಬ ಎಡಪಂಥೀಯ ಸಾಹಿತ್ಯಕ ಪತ್ರಿಕೆಯನ್ನೂ ಆರಂಭಿಸಿ, ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಸಾಹಿತ್ಯ, ಸಂಸ್ಕೃತಿ, ಕಲೆಗಳನ್ನೂ ಪುನರ್‌ವಿಮರ್ಶಿಸುವ ಕೆಲಸವನ್ನೂ ಮಾಡುತ್ತಿದ್ದರು. ಈ ಹಿನ್ನೆಲೆಯಲ್ಲಿ ರೂಪು ಪಡೆದದ್ದೇ "ಭಾರತೀಯ ಭಾಷಾ ಸಾಹಿತ್ಯಗಳ ವರ್ಗ ಸೆಲೆ" ಎಂಬ ಐತಿಹಾಸಿಕ ಮಹತ್ವದ ಪುಸ್ತಕ. ಮಾರ್ಕ್ಸ್‌ವಾದ ಕೇವಲ ಆರ್ಥಿಕ ಕ್ಷೇತ್ರಕ್ಕೆ, ಮಾತ್ರ ಸಂಬಂಧಿಸಿದ್ದು, ಅದನ್ನು ಸಾಹಿತ್ಯ ಕಲೆಗಳ ಕ್ಷೇತ್ರಕ್ಕೆ ಅನ್ವಯಿಸಬಾರದು ಎಂಬ ಮಡಿವಂತಿಕೆಯ ಕಾಲಘಟ್ಟದಲ್ಲಿ ಅಂದರೆ ೧೯೭೭ರಲ್ಲಿ ಈ ಪುಸ್ತಕ ಬಂದದ್ದರಿಂದ ಇದಕ್ಕೆ ಐತಿಹಾಸಿಕ ಮಹತ್ವವಿದೆ. ಇಲ್ಲಿಂದ ಮುಂದೆ ಕೆಲವರಾದರೂ ಲೇಖಕರು ಸಾಹಿತ್ಯ ಮತ್ತು ಸಾಮಾಜಿಕ ಬದ್ಧತೆಯ ಬಗ್ಗೆ ಧೈರ್ಯದಿಂದ ಮಾತನಾಡಲಾರಂಭಿಸಿದರು. ಈ ಪುಸ್ತಕದಲ್ಲಿ ಕನ್ನಡವೂ ಸೇರಿದಂತೆ ಭಾರತೀಯ ಭಾಷೆಗಳ ಒಟ್ಟು ಹನ್ನೆರಡು ಲೇಖನಗಳಿವೆ. ದಲಿತ ಮತ್ತು ದಮನಿತ ವರ್ಗಗಳೆಲ್ಲವನ್ನೂ ಹಿಂದೂ ಸಾಮ್ರಾಜ್ಯವಾದದಿಂದ ಬಿಡಿಸಿ ವಾಸ್ತವದ ತಳಹದಿಯ ಮೇಲೆ ನಿಲ್ಲಿಸಬೇಕೆಂಬ ತುಡಿತ ಎಲ್ಲ ಲೇಖನಗಳ ಹಿಂದೆ ಕೆಲಸ ಮಾಡುತ್ತದೆ. ಶೋಷಣೆ ಮತ್ತು ಮೂಢನಂಬಿಕೆಗಳ ಮೋಸವನ್ನು ಬಯಲುಮಾಡುವ ವೈಜ್ಞಾನಿಕ ವಿಚಾರಧಾರೆಯೊಂದು ಮಾರ್ಕ್ಸ್‌ವಾದದ ಹೊಳಪಿನಲ್ಲಿ ಇಲ್ಲಿನ ಲೇಖನಗಳನ್ನು ಮುನ್ನಡೆಸಿದೆ. ಧರ್ಮ ತಾರತಮ್ಯ, ಸಾಮಾಜಿಕ ತಾರತಮ್ಯ, ಆರ್ಥಿಕ ತಾರತಮ್ಯ ನಮ್ಮ ಸಮಾಜದ ಅನಿಷ್ಟಗಳಿಗೆ ಕಾರಣವೆಂಬ 'ವರ್ಗಸೆಲೆ' ಎಲ್ಲ ಲೇಖನಗಳ ಆಳದಲ್ಲಿ ಅಂತರ್ಜಲದಂತೆ ಹರಿಯುತ್ತಿದೆ.*

*– **ಡಾ|| ರಂಗಾರೆಡ್ಡಿ ಕೋಡಿರಾಂಪುರ,** ಬೆಂಗಳೂರು – ೫೮*

**ದಲಿತರ ದೇವಸ್ಥಾನ ಪ್ರವೇಶದ ಸಾವಿರ ವರ್ಷ: ದಲಿತರು ಮರೆತ ರಾಮಾನುಜ** *ಎನ್. ಕೆ. ಮೋಹನ್ ರಾಂ*

**ಪುಟ : ೧೦೪** **ಬೆಲೆ : ರೂ. ೧೦೦**

**ಐಬಿಎಚ್ ಪ್ರಕಾಶನ,** ಬೆಂಗಳೂರು




*೧೧ನೇ ಶತಮಾನದ ವಿಶಿಷ್ಟಾದ್ವೈತ ಸ್ಥಾಪಕ ರಾಮಾನುಜಾಚಾರ್ಯರು ಬಸವಣ್ಣ ಹುಟ್ಟುವುದಕ್ಕಿಂತ ಮುಂಚೆಯೇ ದೊಡ್ಡ ಸಾಮಾಜಿಕ ಪರಿವರ್ತನೆ ಮಾಡಿದ ಹರಿಕಾರರು. ಕೃತಿಯ ಶೀರ್ಷಿಕೆಯೇ ಹೇಳುವಂತೆ ಸಾವಿರ ವರ್ಷಗಳ ಹಿಂದೆಯೇ ದಲಿತರನ್ನು ದೇವಸ್ಥಾನಕ್ಕೆ ಪ್ರವೇಶ ಮಾಡಿಸಿದ್ದರು. ಭಾರತದಲ್ಲಿ ಸಾಮಾನ್ಯವಾಗಿ ಹೆಚ್ಚು ದಲಿತ ಜನಾಂಗಗಳು ಬುದ್ಧ, ಬಸವ, ಅಂಬೇಡ್ಕರ್ ಅವರ ಸಾಮಾಜಿಕ ಪರಿವರ್ತನೆಗಳ ಬಗ್ಗೆ ಮಾತನಾಡುತ್ತಾರೆ. ಮಧ್ಯ ಭಾರತ ಮತ್ತು ಉತ್ತರ ಭಾರತದಲ್ಲಿಯೂ ಅನೇಕ ಸಾಮಾಜಿಕ ಪರಿವರ್ತನೆಕಾರರನ್ನು ನೋಡಬಹುದಾಗಿದೆ. ರಾಮಾನುಜರು ದಲಿತರಿಗೆ ದೀಕ್ಷೆ ಕೊಟ್ಟು ವೈಷ್ಣವರನ್ನಾಗಿಸಿದ್ದು, ನಾಮ ಹಾಕಿಸಿ ಬ್ರಾಹ್ಮಣರನ್ನಾಗಿಸಿದ್ದು ಒಂದು ದೊಡ್ಡ ಪವಾಡವೇ ಆಗಿದೆ. ರಾಮಾನುಜರ ವಿಶೇಷತೆಯೆಂದರೆ ಅವರು ಹಿಂದೂ ಧರ್ಮ ಬಿಟ್ಟು ಹೊರಹೋಗಲಿಲ್ಲ, ತಮ್ಮ ಬ್ರಾಹ್ಮಣತ್ವವನ್ನೂ ಬಿಡಲಿಲ್ಲ. ದಲಿತರನ್ನು ಬ್ರಾಹ್ಮಣರಾಗಿ ಪರಿವರ್ತಿಸಿ ಜಾತ್ಯತೀತನಾಗುವ ಅಸಾಧ್ಯ ಕೆಲಸವನ್ನು ಮಾಡಿತೋರಿದ್ದರು. ಆದರೆ ಹಿಂದೂ ಧರ್ಮದ ಕರ್ಮಠ ಬಾಹುಗಳು ಎಲ್ಲವನ್ನು ಕಾಲಾಂತರದಲ್ಲಿ ನುಂಗಿಕೊಂಡಂತೆ ಇಲ್ಲಿಯೂ ಕೆಲಸ ಮಾಡಿದ್ದವು. ಮೇಲುಕೋಟೆಯ ಚೆಲುವನಾರಾಯಣ ಸ್ವಾಮಿ ದೇವಾಲಯವನ್ನು ದಲಿತರಿಗಾಗಿಯೇ ನಿರ್ಮಿಸಿರುವುದಾಗಿ ತಿಳಿದುಬರುತ್ತದೆ. ಅದೇ ದೇವಸ್ಥಾನದಲ್ಲಿ ಬೀಬಿ ನಾಚಿಯಾರ್ ಎಂಬ ಮುಸ್ಲಿಂ ಹೆಣ್ಣುಮಗಳು ಕೂಡ ದೇವರಾಗಿ ಪ್ರತಿಷ್ಠಾಪಿತವಾಗಿರುವುದು ಮತ್ತೊಂದು ಪವಾಡ. ಸಾಮಾಜಿಕ ಪರಿವರ್ತನೆಗಳಿಗಾಗಿ ಹೋರಾಡಿದ ಈ ಮಹನೀಯರ ಆದರ್ಶಗಳು ಇನ್ನೂ ಈ ಮಣ್ಣಿನಲ್ಲಿ ಉಸಿರಾಡುತ್ತಿವೆ. ಸಾಮಾಜಿಕ ಬದ್ಧತೆಗಳಿರುವ ಎಲ್ಲರೂ ಈ ಸಣ್ಣ ಕೃತಿಯನ್ನು ಓದಬೇಕಾಗಿದೆ.*

*– **ಡಾ|| ಎಂ. ವೆಂಕಟಸ್ವಾಮಿ,** # ೪ಡಿ, ಕಾಸ್ಮಾಸ್ ಟವರ್, ಕಸವನಹಳ್ಳಿ, ಬೆಂಗಳೂರು – ೫೬೦ ೦೩೫*



**ಮೈಮನ ಅರಳಿಸುವ ಸುವಾಸನೆಭರಿತ ಮೆಲುಗಾಳಿಗೆ ಮ್ಯಾಕ್ಸ್‌ವೆಲ್ ಒಂದು ಕ್ಷಣ ಅಚಲನಾಗಿ ನಿಂತ. ಚಿತ್ತ ಮಿಸ್ ಲೆಸ್ಲಿಯ ಸುತ್ತ ಸುತ್ತತೊಡಗಿತು. ಮೆಲುಗಾಳಿಯಲ್ಲಿ ತೇಲಿಬಂದ ಮಧುರ ಸುವಾಸನೆ ಮಿಸ್ ಲೆಸ್ಲಿಗೇ ಸಂಬಂಧಿಸಿದ್ದು. ಅದು ಅವಳದೇ ಸುವಾಸನೆ. ಅವಳೇ ಆ ಸುವಾಸನೆ. ಆ ಸುವಾಸನೆಯೇ ಅವಳು. ಅವಳು ಸುವಾಸಿನಿ.**

ಇಂಗ್ಲಿಷ್ ಮೂಲ : **ಓ. ಹೆನ್ರಿ**
ಕನ್ನಡಕ್ಕೆ : **ಟಿ. ವಿ. ಮಾಗಳದ**

# ಪುರಸೊತ್ತಿಲ್ಲದ ದಲ್ಲಾಳಿಯ ಪ್ರೇಮಾಯಣ

ಹಾರ್ವೆ ಮ್ಯಾಕ್ಸ್‌ವೆಲ್ ಶೇರ್ ಮಾರ್ಕೆಟ್ಟಿನ ಒಬ್ಬ ದಲ್ಲಾಳಿ. ಅವನದೇ ಆದ ಒಂದು ಆಫೀಸು. ಒಡೆಯ ಹಾರ್ವೆ ಮ್ಯಾಕ್ಸ್‌ವೆಲ್ ಆಫೀಸನೊಳಗೆ ಬರುವುದನ್ನು ಸಾಮಾನ್ಯವಾಗಿ ನಿರ್ಭಾವುಕ ನೋಟದಿಂದ ನೋಡುತ್ತಿದ್ದ ಆಪ್ತ ಗುಮಾಸ್ತ ಪಿಚರ್ ಅಂದು ಮಾತ್ರ ತನ್ನ ಒಡೆಯ ತುಂಬು ತಾರುಣ್ಯದ ಸ್ಟೆನೋಗ್ರಾಫರ್‌ಳೊಂದಿಗೆ ಮುಂಜಾನೆ ಒಂಬತ್ತು ಮೂವತ್ತಕ್ಕೆ ಸರಸರನೆ ಆಫೀಸಿನೊಳಗೆ ಹೆಜ್ಜೆ ಹಾಕುವುದನ್ನು ನವಿರಾದ ಕುತೂಹಲ ಮತ್ತು ತಡೆಯಲಾಗದ ಆಶ್ಚರ್ಯದಿಂದ ನೋಡಿದ. "ಗುಡ್ ಮಾರ್ನಿಂಗ್, ಪಿಚರ್", ಎಂದು ಪಟಪಟನೆ ಶಬ್ದ ಸಿಡಿಸುತ್ತಲೇ ಒಂದೇ ಜಿಗಿತಕ್ಕೆ ಕೂಡ್ರುವವನಂತೆ ಮ್ಯಾಕ್ಸ್‌ವೆಲ್ ತನ್ನ ಕುರ್ಚಿಯತ್ತ ನುಗ್ಗಿದ. ತನಗಾಗಿ ಅಲ್ಲಿ ಕಾಯುತ್ತಿದ್ದ ಪತ್ರಗಳ ಮತ್ತು ಟೆಲಿಗ್ರಾಮ್‌ಗಳ ಬೃಹತ್ ರಾಶಿಯಲ್ಲಿ ಮುಳುಗಿದ.

ತುಂಬಿ ತುಳುಕುವ ತಾರುಣ್ಯದ ಆ ಯುವತಿ. ಮ್ಯಾಕ್ಸ್‌ವೆಲ್‌ನ ಸ್ಟೆನೋಗ್ರಾಫರ್ ಆಗಿ ಒಂದು ವರ್ಷದಿಂದ ಕೆಲಸ ಮಾಡುತ್ತಿದ್ದಳು. ಸ್ಟೆನೋಗ್ರಾಫರ್‌ಗಿರಿಗೆ ಮೀರಿದ ಸೌಂದರ್ಯ ಅವಳದಾಗಿತ್ತು ಎಂಬುದರಲ್ಲಿ ಎರಡು ಮಾತಿರಲಿಲ್ಲ. ಮೋಹಕ ಮೈಕಟ್ಟಿನ ಮನಸೂರೆಗೊಳಿಸುವ ಚೆಲುವಿನ ಅವಳು ಆಡಂಬರ, ಸಡಗರ ಸಂಭ್ರಮದ ಖಯಾಲಿಯಿಂದ ದೂರ ಅತಿದೂರವಿದ್ದ ಅಪ್ಪಟ ಸರಳ ಸೌಜನ್ಯದ ಸಾಕಾರವಾಗಿದ್ದಳು. ಚೇನ್, ಲಾಕೆಟ್, ಬ್ರೇಸ್‌ಲೆಟ್‌ಗಳೊಂದೂ ಇಲ್ಲದ ನಿರಾಭರಣ ನಿರಾಡಂಬರ ಸಹಜ ಸುಂದರಿ ಅವಳಾಗಿದ್ದಳು. ಯಾವುದೇ ಊಟ, ಉಪಹಾರ, ಕೂಟಗಳ ಆಮಂತ್ರಣಕ್ಕಾಗಿ ಹಪಹಪಿಸುವ ಹಂಬಲವಾಗಲಿ, ಜಂಭವಾಗಲಿ ಅವಳದಾಗಿರಲಿಲ್ಲ. ಅವಳದು ಬೂದುಬಣ್ಣದ ಅತ್ಯಂತ ಸಾದಾಸೀದಾ ಉಡುಪು. ಆದರೆ ಅದು ಅವಳ ಮೈಮಾಟಕ್ಕೆ ಅದ್ಭುತವಾಗಿ ಒಪ್ಪುತ್ತಿತ್ತು. ಅವಳ ಅಚ್ಚುಕಟ್ಟಾದ ಕಪ್ಪು ಹ್ಯಾಟ್‌ಗೆ ಗಿಳಿಯ ಬಂಗಾರ ಹಸಿರು ಮಿಶ್ರಿತ ಬಣ್ಣದ ರೆಕ್ಕೆಯ ಚಿತ್ರವಿತ್ತು. ಅಂದು ಮುಂಜಾನೆ ಆಫೀಸು ಪ್ರವೇಶಿಸುವಾಗ ಅವಳು ನಯನಾಜೂಕಿನ ನಸುನಾಚಿಕೆಯಿಂದ ಕಾಂತಿಯುತವಾಗಿ ಕಂಗೊಳಿಸುತ್ತಿದ್ದಳು. ಹೊಂಗನಸುಗಳ ಸಂಭ್ರಮದಿಂದ ಶೃಂಗಾರಭರಿತ ಅವಳ ಕಣ್ಣುಗಳು ಹೊಳಪಿನ ಹೊಳೆಯಾಗಿದ್ದವು. ಅವಳ ಕೆನ್ನೆಗಳು ಅದೇ ಆಗ ಅರಳಿದ ಕೆಂಗುಲಾಬಿಗಳಾಗಿದ್ದವು. ಯಾವುದೋ ಮಧುರ ನೆನಪಿನಿಂದ ರಂಗೇರಿದ ಉಲ್ಲಾಸೋತ್ಸಾಹ ಅವಳ ಬರುವಿಕೆ, ಇರುವಿಕೆ, ತೋರುವಿಕೆಯಲ್ಲಿ ಅವಳಿಗರಿವಿಲ್ಲದಂತೆ ಅಭಿವ್ಯಕ್ತಗೊಳ್ಳುತ್ತಿತ್ತು.

ಹತೋಟಿಗೊಳ್ಳದ ಕುತೂಹಲದಿಂದ ಕುಳಿತಲ್ಲಿಂದಲೇ ಕಳ್ಳನೋಟವನ್ನು ಹರಿಬಿಟ್ಟ ಪಿಚರ್ ಅಂದು ಮುಂಜಾನೆ ಸ್ಟೆನೋಗ್ರಾಫರ್‌ಳ ರೀತಿರಿವಾಜಿನಲ್ಲಿ ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಿದ. ಅಂದು ಅವಳು ನೇರ ತನ್ನ ಪಕ್ಕದ ಕೋಣೆಗೆ ಹೋಗದೆ ಹೊರಗಡೆ ಆಫೀಸಿನ ಬಳಿ ಕಳ್ಳಬೆಕ್ಕಿನಂತೆ ಸ್ವಲ್ಪ ಹೊತ್ತು ಅತ್ತಿತ್ತ ಸುಳಿದಾಡಿದಳು. ಒಂದು ಸಲವಂತೂ ಮ್ಯಾಕ್ಸ್‌ವೆಲ್‌ನ ಗಮನವನ್ನು ತನ್ನತ್ತ ಸೆಳೆಯುವಷ್ಟರ ಮಟ್ಟಿಗೆ ಅವನ ಡೆಸ್ಕ್ ಸಮೀಪದವರೆಗೆ ನಡೆದಾಡಿದಳು.

ಆ ಡೆಸ್ಕ್‌ನಲ್ಲಿ ಕುಕ್ಕರಿಸಿದ ಯಂತ್ರ ಎಳ್ಳಷ್ಟೂ ಮನುಷ್ಯನಾಗಿಯೇ ಉಳಿದಿರಲಿಲ್ಲ. ಅದು ಗಡಿಯಾರದ ತಿರುಗುವ ಮುಳ್ಳಿನೊಂದಿಗೆ ಸ್ಪರ್ಧೆಗಿಳಿದ ಒಂದರೆನಿಮಿಷವೂ ಬಿಡುವಿಲ್ಲದ ನ್ಯೂಯಾರ್ಕ್ ಬ್ರೋಕರ್ ಆಗಿತ್ತು.

"ಸರಿ...ಏನದು? ಮತ್ತೇನಾದರೂ ಇದೆಯಾ?", ತೀಕ್ಷ್ಣವಾಗಿ ಮ್ಯಾಕ್ಸ್‌ವೆಲ್ ಕೇಳಿದ. ಅವನ ಡೆಸ್ಕಿನ ಮೇಲೆ ಲಕೋಟೆಗಳು, ಬಿಚ್ಚಿದ ಅಂಚೆಗಳು, ಬಾಂಡ್‌ಗಳು, ದಾಖಲೆಗಳು ರಾಶಿರಾಶಿಯಾಗಿ ಗುಡ್ಡೆ ಬಿದ್ದಿದ್ದವು. ತೀಕ್ಷ್ಣ ಇರಿತದ ಅವನ ಕಾಂತಿಯುತ ಕಪ್ಪು ಕಣ್ಣುಗಳು ಕಾರಿದ ನಿರ್ಭಾವುಕ ಹರಿತ ನೋಟ ಅವಳ ಮೇಲೆ ಅಸಹನೆಯ ಉರಿ ತೂರಿತು. ಕೆಂಡ ಕಾರಿತು.

"ಏನೂ ಇಲ್ಲ", ಎಂದುಸುರುತ್ತ ಹತಾಶಪ್ರಯತ್ನದ ಆಯಾಸದೊಂದಿಗೆ ಮುಖದ ಮೇಲೊಂದು ಮೆಲುಮುಗುಳ್ನಗೆ ತೋರಿ ಅವಳು ಅಲ್ಲಿಂದ ಕಾಣೆಯಾದಳು.

ನೇರ ಆಪ್ತ ಗುಮಾಸ್ತ ಪಿಚರ್‌ನ ಬಳಿ ಹೋಗಿ ಅವಳು ಕೇಳಿದಳು, "ಪಿಚರ್, ಬೇರೊಬ್ಬ ಸ್ಟೆನೋಗ್ರಾಫರ್‌ನನ್ನು ನೇಮಕ ಮಾಡಿಕೊಳ್ಳುವುದರ ಬಗ್ಗೆ ನಿನ್ನೆ ಮ್ಯಾಕ್ಸ್‌ವೆಲ್ ಏನಾದರೂ ಹೇಳಿದರೆ?"

ಪಿಚರ್ ಉತ್ತರಿಸಿದ, "ಹೌದು. ಇನ್ನೊಬ್ಬ ಸ್ಟೆನೋಗ್ರಾಫರ್‌ನನ್ನು ಹುಡುಕಲು ನನಗೆ ಹೇಳಿದರು. ಇವತ್ತು ಮುಂಜಾನೆ ಅಂಥ ಅಭ್ಯರ್ಥಿಗಳನ್ನು ಕಳಿಸಲು ನಿನ್ನೆ ಮಧ್ಯಾಹ್ನವೇ ಏಜೆನ್ಸಿಗೆ ತಿಳಿಸಿದ್ದೇನೆ. ಈಗ ಮುಂಜಾನೆ ೯.೪೫ ಆದರೂ ಇನ್ನೂ ಯಾವ ಮಾಹಿತಿಯೂ ಬಂದಿಲ್ಲ."

"ಹಾಗಾದರೆ ನನ್ನ ಸ್ಥಾನಕ್ಕೆ ಮತ್ತೊಬ್ಬರು ಬರೋವರೆಗೂ ಎಂದಿನಂತೆ ಯಥಾಪ್ರಕಾರ ನಾನು ಕೆಲಸ ಮಾಡುತ್ತೇನೆ", ಯುವತಿ ಸ್ಟೆನೋಗ್ರಾಫರ್ ಹೇಳಿದಳು. ತನ್ನ ಡೆಸ್ಕ್‌ಗೆ ಹೋದಳು. ನಿತ್ಯದ ರೂಢಿಯಂತೆ ತನ್ನ ಕಪ್ಪು ಹ್ಯಾಟನ್ನು ಅದರ ಮಾಮೂಲು ಸ್ಥಳದಲ್ಲಿ ತೂಗುಹಾಕಿದಳು.

ಬ್ರೋಕರ್‌ಗಿರಿಯ ದಿನದ ವ್ಯವಹಾರದ ಭಾರಿ ತುರುಸಿನ ರೀತಿಯೇ ಹಾಗೆ. ಒಂದು ಕ್ಷಣದ ಬಿಡುವೂ ಸಾಧ್ಯವಿಲ್ಲ. ಬ್ರೋಕರ್‌ನ ತಾಸು ಎಂದರೆ ಕೈತುಂಬ ಕೆಲಸದ ತೆರಪಿಲ್ಲದ ತಾಸೆಂದೇ ಅರ್ಥ. ಬ್ರೋಕರ್‌ನ ಸಮಯ ಆತನ ಸಮಯವೇ ಅಲ್ಲ. ಆಫೀಸಿನ ಮುಂದೆ ಮತ್ತು ಹಿಂದೆ ಎರಡೂ ಹಾಲ್‌ಗಳಲ್ಲಿ ತುಂಬಿ ತುಳುಕುವ ಎದೆ ಬಡಿತದ, ವೇಗದ ಹೃದಯ ಮಿಡಿತದ, ರೆಪ್ಪೆ ಪಿಳುಕಿಸದ ಕಣ್ಣುಗಳಿಂದ ಉದ್ವೇಗ ಹಾಗೂ ಕಾತುರತೆ ಉಕ್ಕೇರುವ ಅನುಭವಪೀಡಿತ ಗ್ರಾಹಕರಿಗೆಲ್ಲ ಒತ್ತೆ ಬಿದ್ದ ಸಮಯ.

ಅದರಲ್ಲೂ ಇಂದಂತೂ ಹಾರ್ವೆ ಮ್ಯಾಕ್ಸ್‌ವೆಲ್‌ನದು ಎಳ್ಳಷ್ಟೂ ಬಿಡುವಿಲ್ಲದ ದಿನ. ಟೇಪ್ ಯಂತ್ರದಿಂದ ಹಾಳೆ ಏಕಪ್ರಕಾರ ಕೊನೆಯಿಲ್ಲದಂತೆ ಸುರುಳೀ ಬಿಚ್ಚಿಕೊಳ್ಳುತ್ತ ಪುಟಿಪುಟಿದು ಹೊರಬರುತ್ತಿತ್ತು. ತೆರಪಿಲ್ಲದೆ ಕಿರುಚುವ ದೀರ್ಘಕಾಲೀನ ರೋಗಪೀಡಿತ ಡೆಸ್ಕ್ ಟೆಲಿಫೋನ್ ಆಫೀಸಿನಲ್ಲಿಯ ಯಾರೊಬ್ಬರೂ ತಲೆಕೆಡಿಸಿಕೊಳ್ಳದ ಎಲ್ಲರ ಸ್ವಯಂಸ್ಫೂರ್ತಿಯ ಸರ್ವಸಮ್ಮತ ಸಪ್ಪಳ ವಾಗಿತ್ತು. ಜನರು ಈಗ ಆಫೀಸಿನಲ್ಲಿ ಕಿಕ್ಕಿರಿಯ ತೊಡಗಿದರು. ಲೋಹದ ಸಳಿಗಳಿಗೆ ಮುಖವಿಟ್ಟು ಬ್ರೋಕರ್ ಮ್ಯಾಕ್ಸ್‌ವೆಲ್‌ನನ್ನು ಉತ್ಸಾಹದಿಂದ, ಉಲ್ಲಾಸದಿಂದ, ಕರ್ಕಶಧ್ವನಿಯಿಂದ, ಏರಿದ ಸಿಟ್ಟಿನಿಂದ, ಹಿಡಿತಕ್ಕೆ ದಕ್ಕದ ಉದ್ವೇಗದಿಂದ ಕಿರುಚುತ್ತಿದ್ದರು. ಕರೆಯುತ್ತಿದ್ದರು. ಕೇಳುತ್ತಿದ್ದರು. ಕಟಕಿಯಾಡುತ್ತಿದ್ದರು. ತಕರಾರು ಎತ್ತುತ್ತಿದ್ದರು. ಸುದ್ದಿಸಂದೇಶಗಳನ್ನು ಹೊತ್ತುತರುವ ಹುಡುಗರು ಕಾಗದಪತ್ರಗಳೊಂದಿಗೆ, ತಂತಿವಾರ್ತೆಗಳೊಂದಿಗೆ ಒಳಗೆ ಹೊರಗೆ ಓಡಾಡುತ್ತಿದ್ದರು. ಆಫೀಸಿನ ಗುಮಾಸ್ತರು ಬಿರುಗಾಳಿಯ ರಭಸಕ್ಕೆ ಸಿಕ್ಕ ನಾವಿಕರಂತೆ ಅತ್ತಿಂದಿತ್ತ ಇತ್ತಿಂದತ್ತ ಆಫೀಸಿನಲ್ಲಿ ಜಿಗಿದಾಡುತ್ತಿದ್ದರು.

ಎಕ್ಸ್‌ಚೇಂಜ್‌ನಲ್ಲಿಯ ಚಂಡಮಾರುತಗಳು, ಭೂಕುಸಿತಗಳು, ಹಿಮಪಾತಗಳು, ಹಿಮಪ್ರವಾಹಗಳು, ಜ್ವಾಲಾಮುಖಿಗಳು, ಪ್ರಾಕೃತಿಕ ವಿಕೋಪಗಳು ಸೂಕ್ಷ್ಮಪ್ರಮಾಣದಲ್ಲಿ ಬ್ರೋಕರ್‌ರ ಆಫೀಸುಗಳಲ್ಲಿ ಹೆಡೆಯೆತ್ತುತ್ತಿರುತ್ತವೆ. ಮ್ಯಾಕ್ಸ್‌ವೆಲ್ ತನ್ನ ಕುರ್ಚಿಯನ್ನು ಜೋರಾಗಿ ಗೋಡೆಗೆ ತಳ್ಳಿದ. ತುದಿಬೆರಳುಗಳ ಮೇಲೆ ನೃತ್ಯ ಮಾಡುವ ಶೈಲಿಯಲ್ಲಿ ವ್ಯವಹಾರದ ಕೊಡುಕೊಳ್ಳುವಿಕೆ ನಡೆಸಿದ. ಟೇಪ್ ಯಂತ್ರದಿಂದ ಫೋನ್ ಕಡೆಗೆ, ಡೆಸ್ಕ್‌ನಿಂದ ಬಾಗಿಲ ಕಡೆಗೆ ತರಬೇತಿ ಹೊಂದಿ ಪಳಗಿದ ಕೋಡಂಗಿಯ ಚಪಲತೆ ಮೀರಿಸುವ ರೀತಿಯಲ್ಲಿ ಮ್ಯಾಕ್ಸ್‌ವೆಲ್ ಜಿಗಿಯುತ್ತಿದ್ದ.

ಈ ಎಲ್ಲ ಎಡೆಬಿಡದೆ ತೀವ್ರಗೊಳ್ಳುತ್ತಿದ್ದ ಹಾಗೂ ತೀಕ್ಷ್ಣಗೊಳ್ಳುತ್ತಿದ್ದ ಭಾರಿ ಒತ್ತಡದ ಮಧ್ಯದಲ್ಲೂ ಇದ್ದಕ್ಕಿದ್ದಂತೆ ಒಮ್ಮೆಲೆ ಮಕಮಲ್ಲಿನ ಹೊದಿಕೆಯ ಅಡಿಯಲ್ಲಿಯ ಅಪ್ಪಟ ಚಿನ್ನದ ಹೊಳಪಿನ ಕೂದಲುಗಳ ಸುಂದರವದನದ ಶಾಂತ ಮುಖಮುದ್ರೆಯ ಸ್ಫುರದ್ರೂಪಿ ಯುವತಿಯನ್ನು ಮ್ಯಾಕ್ಸ್‌ವೆಲ್ ಗಮನಿಸಿದ. ಅವಳನ್ನು ಪರಿಚಯಿಸಲು ಪಿಚರ್ ಅಲ್ಲಿಯೇ ಇದ್ದ.

ಪಿಚರ್ ಹೇಳಿದ, "ಸರ್, ಸ್ಟೆನೋಗ್ರಾಫರ್ ಹುದ್ದೆಗೆ ಸ್ಟೆನೋಗ್ರಾಫರ್ ಏಜೆನ್ಸಿಯಿಂದ ಈ ಮಹಿಳೆ."

ಕೈತುಂಬ ಕಾಗದಗಳನ್ನು ಮತ್ತು ಸ್ಟಿಕರ್ ಟೇಪನ್ನು ಹಿಡಿದುಕೊಂಡಿದ್ದ ಮ್ಯಾಕ್ಸ್‌ವೆಲ್ ಕುಳಿತ ಕುರ್ಚಿಯಲ್ಲೇ ಅರ್ಧ ಸುತ್ತು ತಿರುಗಿದ.

"ಯಾವ ಹುದ್ದೆ?", ಹುಬ್ಬುಗಂಟಿಕ್ಕಿ ಮ್ಯಾಕ್ಸ್‌ವೆಲ್ ಕೇಳಿದ.

"ಸ್ಟೆನೋಗ್ರಾಫರ್ ಹುದ್ದೆ ಸರ್. ಸ್ಟೆನೋಗ್ರಾಫರ್ ಏಜೆನ್ಸಿಗೆ ತಿಳಿಸಲು ನಿನ್ನೆ ನೀವು ನನಗೆ ಹೇಳಿದ್ದಿರಿ. ಈಗ ಮುಂಜಾನೆ ಅವರು ಒಬ್ಬರನ್ನು ಕಳಿಸಿದ್ದಾರೆ", ಪಿಚರ್ ಹೇಳಿದ.

ಮ್ಯಾಕ್ಸ್‌ವೆಲ್ ಗುಡುಗಿದ, "ಪಿಚರ್, ಬರುಬರುತ್ತಾ ನೀನು ಬುದ್ಧಿ ಕಳೆದುಕೊಳ್ಳುತ್ತಾ ಇದ್ದಿ. ನಾನ್ಯಾಕೆ ನಿನಗೆ ಇಂಥ ಆದೇಶಗಳನ್ನು ಕೊಡಲಿ? ಮಿಸ್ ಲೆಸ್ಲಿ ಈ ಒಂದು ವರ್ಷದಿಂದಲೂ ಇಲ್ಲಿ ಇದ್ದುಕೊಂಡು ಒಳ್ಳೆ ಚೆನ್ನಾಗಿ ಕೆಲಸ ಮಾಡ್ತಾ ಇದ್ದಾಳೆ. ಅವಳು ಎಲ್ಲಿಯವರೆಗೆ ಇಲ್ಲಿ ಇರಲಿಕ್ಕೆ ಇಷ್ಟಪಡುವಳೋ ಅಲ್ಲಿಯವರೆಗೂ ಆ ಹುದ್ದೆ ಅವಳದೇ. ಮೇಡಮ್, ಈಗಂತೂ ನಮ್ಮಲ್ಲಿ ಅಂಥ ಯಾವ ಸ್ಟೆನೋಗ್ರಾಫರ್ ಹುದ್ದೇನೂ ಖಾಲಿ ಇಲ್ಲ. ಪಿಚರ್, ಆ ಏಜೆನ್ಸಿಯವರಿಗೆ ಈ ಆದೇಶ ರದ್ದುಮಾಡಲು ಹೇಳು. ಇನ್ನು ಮುಂದೆ ಇಂಥ ಯಾರೊಬ್ಬರನ್ನೂ ಇಲ್ಲಿ ನನ್ನ ಬಳಿ ಕರೆತರಬೇಡಾ. ತಿಳೀತಾ?"

ಆಫೀಸಿನ ಕುರ್ಚಿ, ಮೇಜುಗಳನ್ನು ತಳ್ಳುತ್ತ ಸಿಟ್ಟಿನಿಂದ ಬುಸುಗುಡುತ್ತ ಆ ಮಹಿಳೆ ಅಲ್ಲಿಂದ ಹೊರಟುಹೋದಳು. ಇದೇ ಅವಕಾಶ ಬಳಸಿಕೊಂಡು ಪಿಚರ್ ತನ್ನ ಒಡೆಯ ಮ್ಯಾಕ್ಸ್‌ವೆಲ್‌ನ ಬಗ್ಗೆ ಗೊಣಗಿಕೊಂಡ. ತನ್ನ ಧಣಿ ಈ ಜಗತ್ತಿನ ವಿಷಯದಲ್ಲಿ ದಿನದಿಂದ ದಿನಕ್ಕೆ ಮರೆಗುಳಿಯಾಗುತ್ತಾ ನಡೆದಿದ್ದಾನೆ ಎಂದು ಗುಣುಗುತ್ತ ಮೌನಕ್ಕೆ ಶರಣಾದ.

ಆಫೀಸಿನಲ್ಲಿ ನೂಕುನುಗ್ಗಲು ಹೆಚ್ಚತೊಡಗಿತು. ವ್ಯವಹಾರ ಬಿರುಸುಗೊಳ್ಳತೊಡಗಿತು. ಏಕಕಾಲಕ್ಕೆ ಅರ್ಧ ಡಜನ್ನಿಗಿಂತಲೂ ಹೆಚ್ಚು ಸ್ಟಾಕ್‌ಗಳನ್ನು ಸುರಿಯತೊಡಗಿದರು. ಅದರಲ್ಲಿ ಮ್ಯಾಕ್ಸ್‌ವೆಲ್‌ನ ಗ್ರಾಹಕರೇ ಭಾರಿ ಹೂಡಿಕೆದಾರರಿದ್ದರು. ವಲಸೆ ಪಕ್ಷಿಗಳಂತೆ ಭಾರಿ ಚುರುಕಿನಿಂದ ಕೊಳ್ಳುವ ಮತ್ತು ಮಾರುವ ಆದೇಶಗಳು ಬರುತ್ತಿದ್ದವು ಹಾಗೂ ಹೋಗುತ್ತಿದ್ದವು. ತನ್ನವೇ ಆದ ಕೆಲವು ಕಂಪನಿ ಷೇರುಗಳು ಗಂಡಾಂತರದ ಗಂಟಲಲ್ಲಿ ಸಿಕ್ಕಿ ಸಂಕಟಕ್ಕೀಡಾಗಿದ್ದವು. ಆದರೆ ಮ್ಯಾಕ್ಸ್‌ವೆಲ್ ಎಂಬ ಆ ಮನುಷ್ಯ ಸೂಕ್ಷ್ಮತೆಯನ್ನು ಸಂಕಟಪಟ್ಟು ಕಾಯ್ದುಕೊಳ್ಳುತ್ತ ಉದ್ವೇಗಭರಿತನಾಗಿ ವೇಗಗತಿಯಲ್ಲಿ ಅತ್ತಿತ್ತ ನುಗ್ಗುತ್ತ ಎಳ್ಳಷ್ಟೂ ಕುಗ್ಗದೆ, ಅಂಜದೆ, ಅಳುಕದೆ ಸಮಯೋಚಿತ ನಿಖರ ಶಬ್ದಗಳನ್ನು ಬಳಸುತ್ತ ಚಾಣಾಕ್ಷ ನಿರ್ಧಾರದ ಚಾಕಚಕ್ಯತೆಯಿಂದ ಅಕ್ಷರಶಃ ಗಡಿಯಾರದಂತೆ ಅವಿರತವಾಗಿ ಮತ್ತು ಚುರುಕಾಗಿ ಕೆಲಸ ಮಾಡುತ್ತಿದ್ದ. ಸ್ಟಾಕ್‌ಗಳು, ಬಾಂಡ್‌ಗಳು, ಸಾಲಗಳು, ಅಡವು ಪತ್ರಗಳು, ಹೆಚ್ಚುವರಿ ಹಣ ನೀಡಿದ ಪತ್ರಗಳು, ಭದ್ರತೆಗಳು ಹೀಗೆಲ್ಲ ಅಲ್ಲಿ



ಸಂಪೂರ್ಣ ಹಣಕಾಸಿನದೇ ಜಗತ್ತು. ಮ್ಯಾಕ್ಸ್‌ವೆಲ್‌ನ ಆ ಜಗತ್ತಿನಲ್ಲಿ ಹಣವೇ ಸರ್ವಸ್ವ. ಹಣವೇ ಸರ್ವಾಂತರ್ಯಾಮಿ. ಎತ್ತ ನೋಡಿದರತ್ತ ಹಣವೇ ಹಣ. ಮಾನವ ಜಗತ್ತಿಗೆ ಅಲ್ಲಿ ಸಾಸಿವೆಯಷ್ಟೂ ಸ್ಥಳಾವಕಾಶವಿಲ್ಲ. ನೈಸರ್ಗಿಕ ಜಗತ್ತಂತೂ ಅಲ್ಲಿ ಕನಸಿನ ಮಾತು.

ಮಧ್ಯಾಹ್ನ ಊಟದ ಹೊತ್ತು ಸಮೀಪಿಸುತ್ತಿದ್ದಂತೆ ಸದ್ದುಗದ್ದಲ ಗೋಜು ಗೊಂದಲ, ಗಲಿಬಿಲಿ ತಗ್ಗಿ ತಕ್ಕಮಟ್ಟಿಗೆ ಶಾಂತತೆ ತಲೆಯೆತ್ತಿತು.

ಕೈ ತುಂಬಾ ತಂತಿವಾರ್ತೆಗಳು, ಜ್ಞಾಪಕ ಪತ್ರಗಳು ಮುಂತಾದ ಕಾಗದ ಪತ್ರಗಳನ್ನು ಹಿಡಿದು ಮ್ಯಾಕ್ಸ್‌ವೆಲ್ ಮೆಲ್ಲನೆ ಡೆಸ್ಕ್ ಬಳಿ ಎದ್ದು ನಿಂತ. ಬಲಗಿವಿಯ ಮೇಲೆ ಪೆನ್ನು ತುರುಕಿಕೊಂಡಿದ್ದ. ಅಸ್ತವ್ಯಸ್ತಗೊಂಡ ತಲೆಗೂದಲು ಹಣೆಯಮೇಲೆ ಹೊಯ್ದಾಡುತ್ತಿದ್ದವು. ಅವನ ಚೇಂಬರಿನ ಕಿಟಕಿ ತೆರೆದಿತ್ತು. ಋತುಗಳ ರಾಜ ವಸಂತನ ಆಗಮನದ ಶುಭಸಂದೇಶದ ದೂತನಾಗಿ ಅದೇ ಆಗ ಮೈಕೊಡವಿ ಮೆಲ್ಲನೆ ಮಣ್ಣಿನ ಮಡಿಲಿನಿಂದ ಪುಟಿದೇಳುತ್ತಿದ್ದ ಚಿಗುರುಗಳ, ಬಳ್ಳಿಯ ಮೊಗ್ಗುಗಳ ನವಿರಾದ ಸುವಾಸನೆಯನ್ನು ಹೊತ್ತು ತರುವ ಹಂಬಲದ ವಸಂತನ ಪರಿಚಾರಿಕನಾಗಿ ಮಂದಮಾರುತ ತೆರೆದ ಕಿಟಕಿಯಿಂದ ಒಳಗಡೆ ತೇಲಿ ಬರುತ್ತಿದ್ದ! ಮೈಮನ ಅರಳಿಸುವ ಸುವಾಸನೆಭರಿತ ಮೆಲುಗಾಳಿಗೆ ಮ್ಯಾಕ್ಸ್‌ವೆಲ್ ಒಂದು ಕ್ಷಣ ಅಚಲನಾಗಿ ನಿಂತ. ಚಿತ್ತ ಮಿಸ್ ಲೆಸ್ಲಿಯ ಸುತ್ತ ಸುತ್ತತೊಡಗಿತು. ಮೆಲುಗಾಳಿಯಲ್ಲಿ ತೇಲಿಬಂದ ಮಧುರ ಸುವಾಸನೆ ಮಿಸ್ ಲೆಸ್ಲಿಗೇ ಸಂಬಂಧಿಸಿದ್ದು. ಅದು ಅವಳದೇ ಸುವಾಸನೆ. ಅವಳೇ ಆ ಸುವಾಸನೆ. ಆ ಸುವಾಸನೆಯೇ ಅವಳು. ಅವಳು ಸುವಾಸಿನಿ.

ಲೆಸ್ಲಿಯ ಆ ಸುವಾಸನೆ ಅವಳ ವರ್ಣನಾತೀತ ವೈಭವದ ವರ್ಣನೆಯ ಯಶಸ್ವಿ ಸಾಹಸವಾಗಿತ್ತು. ಆ ಸುವಾಸನೆ ಅಕ್ಷರಶಃ ಅವಳನ್ನೇ ಮ್ಯಾಕ್ಸ್‌ವೆಲ್‌ನ ಕಣ್ಮುಂದೆ ಕಟ್ಟಿ ನಿಲ್ಲಿಸಿತು. ಮೈಮನಗಳಲ್ಲೆಲ್ಲಾ ಅವಳನ್ನೇ ವ್ಯಾಪಿಸಿತು. ಇದ್ದಕ್ಕಿದ್ದಂತೆ ಇಡೀ ಹಣಕಾಸಿನ ಜಗತ್ತೇ ಒಂದು ನಿಕೃಷ್ಟ ಕಣವಾಗಿ ಕುಸಿದುಹೋಯಿತು, ನಶಿಸಿಹೋಯಿತು. ಲೆಸ್ಲಿ ಅಲ್ಲೇ ಪಕ್ಕದ ಕೋಣೆಯಲ್ಲಿದ್ದಳು. ಅತಿ ದೂರವೇನೂ ಅಲ್ಲ. ಅಲ್ಲೇ ನಾಲ್ಕಾರು ಹೆಜ್ಜೆ ಅಂತರದಲ್ಲಿ, ಅಷ್ಟೆ.

"ದೇವರೇ, ಈಗ ನಾನು ಅದನ್ನು ಮಾಡುವೆ", ಅರೆಬರೆ ಗಟ್ಟಿಧ್ವನಿಯಲ್ಲಿ ಮ್ಯಾಕ್ಸ್‌ವೆಲ್ ಉಚ್ಚರಿಸಿದ, "ಈ ಕ್ಷಣವೇ ನಾನು ಅವಳಲ್ಲಿಗೆ ಹೋಗುತ್ತೇನೆ. ಅವಳನ್ನೇ ಕೇಳುತ್ತೇನೆ. ಕೇಳಿಯೇ ಬಿಡುತ್ತೇನೆ. ಇಷ್ಟೊಂದು ದಿನಗಳಾದರೂ ಇವತ್ತಿಗೂ ನಾನು ಅವಳನ್ನು ಅದೇಕೆ ಕೇಳದೇ ಹಾಗೇ ಬಿಟ್ಟೆ? ಅದೇ ನನಗೆ ಅರ್ಥವಾಗುತ್ತಿಲ್ಲ. ಅದು ಹಾಗಾಗಬಾರದಿತ್ತು."

ಇದ್ದಕ್ಕಿದ್ದಂತೆ ದಿಢೀರನೆ ರಭಸದಿಂದ ಆಫೀಸಿನ ಒಳ ಚೇಂಬರ್‌ಗೆ ನುಗ್ಗಿದ. ನುಗ್ಗಿದ ಅನ್ನೋದಕ್ಕಿಂತ ಸ್ಟೆನೋಗ್ರಾಫರ್‌ಳ ಡೆಸ್ಕ್ ಮೇಲೆ ಆಕ್ರಮಣ ಮಾಡಿದ ಅನ್ನೋದೇ ಹೆಚ್ಚು ವಸ್ತುನಿಷ್ಠ. ಸತ್ಯಕ್ಕೆ ಸಮೀಪ. ಸತ್ಯವೇ.

ಅವಳು ತುಟಿಗಳಲ್ಲಿ ಮುಗುಳ್ನಗೆಯ ಮಲ್ಲಿಗೆ ಸುರಿದಳು. ಹೊಳಪಿನ ಕಣ್ಣುಗಳು ಅವನತ್ತ ಬೆಳಕನ್ನು ಚಿಮ್ಮಿದವು. ಕೆನ್ನೆ ತುಂಬ ಕೆಂಗುಲಾಬಿಗಳು ಅರಳಿ ಕಂಗೊಳಿಸಿದವು. ಪ್ರೀತಿ ತುಂಬಿದ ಅವಳ ಕಣ್ಣುಗಳ ಕಾಂತಿಯಲ್ಲಿ ಮ್ಯಾಕ್ಸ್‌ವೆಲ್ ಕರಗಿಹೋದ. ಮ್ಯಾಕ್ಸ್‌ವೆಲ್ ಮೆಲ್ಲನೆ ಅವಳ ಡೆಸ್ಕ್‌ಮೇಲೆ ಮೊಣಕೈ ಊರಿದ. ಪರಸ್ಪರ ಬೆರೆತ ಕಣ್ನೋಟಗಳಲ್ಲಿ ಹೊಮ್ಮಿದ ಪ್ರೀತಿಗೆ ಸಾಗರವೂ ಸಾಸಿವೆ ಯಾಯಿತು. ಪಟಪಟಿಸುವ ಹಾಳೆಗಳನ್ನು ಎರಡೂ ಕೈಗಳಲ್ಲಿ ಮ್ಯಾಕ್ಸ್‌ವೆಲ್ ಹೇಗೋ ಹಿಡಿದಿದ್ದ. ಕಿವಿಯ ಮೇಲೆ ಪೆನ್ನು ಅಬಾಧಿತವಾಗಿ ಸುಖಾಸೀನಗೊಂಡಿತ್ತು.

"ಮಿಸ್ ಲೆಸ್ಲಿ", ಮ್ಯಾಕ್ಸ್‌ವೆಲ್‌ನಿಗೆ ಅರಿವಿಲ್ಲದಂತೆ ಅವಸರವಸರದಿಂದ ಮಾತು ಸುರಿದವು, "ನನಗಿರುವುದು ಒಂದೇ ಕ್ಷಣ. ಆ ಒಂದೇ ಒಂದು ಕ್ಷಣದಲ್ಲಿ ನಿಮಗೆ ನಾನು ಏನೋ ಹೇಳಲು ಇಷ್ಟಪಡುವೆ. ದಯವಿಟ್ಟು ನೀವು ನನ್ನ ಹೆಂಡತಿಯಾಗುವಿರಾ? ಸರ್ವೇಸಾಮಾನ್ಯ ರೀತಿಯಲ್ಲಿ ನಿಮ್ಮೊಡನೆ ಪ್ರೇಮ ಮಾಡಲಿಕ್ಕೆ ನನಗೆ ಸಮಯವೇ ಇದ್ದಿರಲಿಲ್ಲ. ಆದರೆ ನಿಜವಾಗಿಯೂ ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಮನಸಾ ಪ್ರೀತಿಸುತ್ತೇನೆ. ನನ್ನದು ಪ್ರಾಮಾಣಿಕ ಪ್ರೀತಿ. ಬೇಗ ಮಾತಾಡಿ, ದಯಮಾಡಿ. ಅಗೋ, ಅಲ್ಲಿ ಆ ಎಲ್ಲ ಗ್ರಾಹಕರು ಯೂನಿಯನ್ ಪ್ಯಾಸಿಫಿಕ್‌ದ ಹೊರಗಡೆ ಜಮಾಯಿಸುತ್ತಿದ್ದಾರೆ. ಕಕ್ಕಿರಿಯುತ್ತಿದ್ದಾರೆ."

"ಓಹ್ ! ನೀವು ಯಾವುದರ ಬಗ್ಗೆ ಮಾತಾಡುತ್ತಿದ್ದೀರಿ?", ಆ ಯುವತಿ ಲೆಸ್ಲಿ ಉದ್ಗರಿಸಿದಳು. ಕುಚಿಯಿಂದ ತೂರಲ್ಪಟ್ಟವಳಂತೆ ದಿಢೀರ್ ಎದ್ದು ನಿಂತಳು. ಹುಣ್ಣಿಮೆ ಚಂದ್ರನ ಹೊಳಪನ್ನು ಮೀರಿಸುವ ಬಟ್ಟಲುಗಣ್ಣುಗಳನ್ನು ಅರಳಿಸಿ ಅವನನ್ನೇ ನೋಡುತ್ತ ನಿಂತಳು.

"ಯಾಕೆ? ನನ್ನ ಮಾತು ನಿಮಗೆ ಅರ್ಥವಾಗಲಿಲ್ಲವೆ?", ತುಂಟನಗೆ ಬೀರಿ ಮ್ಯಾಕ್ಸ್‌ವೆಲ್ ಮಾತಾಡಿದ, "ನಾನು ನಿಮ್ಮನ್ನು ಮದುವೆಯಾಗಲು ಇಷ್ಟಪಡುತ್ತೇನೆ. ನಿಮ್ಮನ್ನು ನಾನು ಪ್ರೀತಿಸುತ್ತೇನೆ ಮಿಸ್. ಲೆಸ್ಲಿ... ನಿಜವಾಗ಼್. ಅದನ್ನೇ ನಾನು ನಿಮಗೆ ಹೇಳಲು ಬಯಸಿದ್ದೆ. ಈಗ ಒಂದು ಕ್ಷಣ ಪುರಸೊತ್ತು ಸಿಕ್ಕಿದ್ದರಿಂದ ಅದನ್ನೇ ಒಂದರೆಕ್ಷಣದಲ್ಲಿ ಹೇಳಿಬಿಡೋಣ ಅಂತಾ ಹೇಳಿದೆ. ಈಗ ಅವರೆಲ್ಲಾ ಮತ್ತೆ ನನ್ನ ಫೋನ್‌ಗೆ ಕರೆಯುತ್ತಿದ್ದಾರೆ. ಪಿಚರ್, ಅವರಿಗೆಲ್ಲ ಒಂದು ನಿಮಿಷ ಕಾಯಲಿಕ್ಕೆ ಹೇಳು. ಪ್ರೀತಿಸುವುದಿಲ್ಲವೆ ಮಿಸ್ ಲೆಸ್ಲಿ?"

ಸ್ಟೆನೋಗ್ರಾಫರ್ ಯುವತಿ ವಿಚಿತ್ರ ರೀತಿಯಲ್ಲಿ ವರ್ತಿಸಿದಳು. ಅವಳು ಮಾಡಿದ ಮೊಟ್ಟಮೊದಲ ಕೆಲಸವೆಂದರೆ ಆಶ್ಚರ್ಯಾಘಾತದಿಂದ ಗರಬಡಿದಂತಾಗಿದ್ದ ಅವಳು ಆ ಆಘಾತದಿಂದ ಹೊರಬಂದು ಚೇತರಿಸಿಕೊಳ್ಳಲು ಹರಸಾಹಸಪಟ್ಟಳು. ಆನಂತರ ಆಶ್ಚರ್ಯಭರಿತ ಅವಳ ಕಣ್ಣುಗಳಿಂದ ನೀರು ಧಾರಾಕಾರಗೊಳ್ಳ ತೊಡಗಿತು. ಗಾಜಿನ ಕಣ್ಣುಗಳಲ್ಲಿ ಮುತ್ತಿನ ಹನಿಯಂಥ ಕಣ್ಣೀರು ತುಂಬಿಕೊಂಡೇ ಅವಳು ಮುಗುಳ್ನಗುತ್ತಿದ್ದಳು. ಅವಳ ಒಂದು ತೋಳು ಮರವನ್ನು ಕೋಮಲ ಬಳ್ಳಿ ತಬ್ಬಿಕೊಳ್ಳುವಂತೆ ಬ್ರೋಕರ್‌ನ ಕುತ್ತಿಗೆಗೆ ಹಾರವಾಯಿತು.

ಮುಂಜಾವಿನ ಮೆಲುಗಾಳಿಯಂತೆ ಅವಳು ಮೆಲ್ಲನೆ ಉಸುರಿದಳು, "ಈಗ ನನಗೆ ಗೊತ್ತು. ಸದ್ಯದ ಸ್ಥಿತಿಯಲ್ಲಿ ಈ ನಿಮ್ಮ ಹಾಳಾದ ಬ್ರೋಕರ್ ವ್ಯವಹಾರ ನಿಮ್ಮ ತಲೆಯೊಳಗಿನ ನೆನಪನ್ನೆಲ್ಲ ತಿಂದುಹಾಕಿದೆ. ನಾಲಿಗೆ ಹಚ್ಚಿ ನೆಕ್ಕಿ ಸಂಪೂರ್ಣ ಒರೆಸಿಹಾಕಿದೆ. ಮೊದಮೊದಲಿಗೆ ನನಗೆ ಭಯವಾಗಿತ್ತು. ಹಾರ್ವೆ, ನಿಮಗೆ ನೆನಪೇ ಇಲ್ಲವೆ? ನಿಜಕ್ಕೂ? ಇನ್ನೂ ನಿನ್ನೆಯಷ್ಟೇ ನಾವು ರಾತ್ರಿ ಎಂಟು ಗಂಟೆಗೆ ಈ ಪಟ್ಟಣದ ಹೃದಯ ಭಾಗದಲ್ಲಿರುವ "ಲಿಟ್ಲ್ ಚರ್ಚ್ ಅರೌಂಡ್ ದ ಕಾರ್ನರ್"ದಲ್ಲಿ ನಾವಿಬ್ಬರೂ ಮದುವೆಯಾಗಿದ್ದೇವೆ."

ಇಂಗ್ಲಿಷ್ ಮೂಲ : **ಓ. ಹೆನ್ರಿ**
ಕನ್ನಡಕ್ಕೆ : **ಟಿ. ವಿ. ಮಾಗಳದ**
'ಶ್ರೀ ಬಸವ', ನಿಸರ್ಗ ಬಡಾವಣೆ, ಪುಟ್ಟರಾಜ ನಗರ
ಸಂಭಾಪುರ ರಸ್ತೆ ಅಂಚೆ : ಗದಗ – ೫೮೨ ೧೦೧

## ಅಭಿನಂದನೆಗಳು...

ಕರ್ನಾಟಕ ಸಾಹಿತ್ಯ ಅಕಾಡೆಮಿಯ ೨೦೧೬ನೇ ಸಾಲಿನ 'ಅತ್ಯುತ್ತಮ ಪುಸ್ತಕ ಬಹುಮಾನ'ವು ಎಂ. ಅಬ್ದುಲ್ ರೆಹಮಾನ್ ಪಾಷ (ಅಲ್ಲಾಹ್‌ನಿಂದ ನಿರಾಕೃತರು – ಅನುವಾದಿತ ಕೃತಿ, ನವಕರ್ನಾಟಕ ಪ್ರಕಾಶನ), ಕೃಷ್ಣಮೂರ್ತಿ ಬಿಳಿಗೆರೆ (ಗಾಯಗೊಂಡಿದೆ ಗರಿಕೆಗಾನ), ಜಯಪ್ರಕಾಶ (ಮಾವಿನಕುಳಿ), ಡಾ॥ ಎಸ್. ನಟರಾಜ ಬೂದಾಳು (ಕನ್ನಡ ಕಾವ್ಯ ಮೀಮಾಂಸೆ), ಡಾ॥ ವೀರೇಶ ಬಡಿಗೇರ (ತಿಂತಿಣಿ ಮೌನೇಶ್ವರರ ವಚನಗಳು), ಡಾ॥ ಸಣ್ಣರಾಮ (ದಲಿತ ಚಳುವಳಿ ನಿನ್ನೆ–ಇಂದು–ನಾಳೆ) ಹಾಗೂ ರಾಜೇಶ್ವರಿ ತೇಜಸ್ವಿ (ನಮ್ಮ ಮನೆಗೂ ಬಂದರು ಗಾಂಧೀಜಿ) ಅವರ ಕೃತಿಗಳಿಗೆ ಲಭಿಸಿದೆ.

ಹಾಗೆಯೇ ಸ. ರಘುನಾಥ ಅವರ 'ಒಂಟಿ ಸೇತುವೆ' (ನವಕರ್ನಾಟಕ ಪ್ರಕಾಶನ) ಅನುವಾದಿತ ಕೃತಿಗೆ ೨೦೧೬ನೇ ಸಾಲಿನ 'ಎಲ್. ಗುಂಡಪ್ಪ ಮತ್ತು ಶಾರದಮ್ಮ ದತ್ತಿನಿಧಿ' ಪ್ರಶಸ್ತಿ ಲಭಿಸಿದೆ.

ಇವರೆಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.




# ಉತ್ತರ ಕೊರಿಯ–ಅಮೆರಿಕ ಮಧ್ಯೆ ಶೃಂಗಸಭೆ ಸಾಧ್ಯತೆ

ಅಂತರರಾಷ್ಟ್ರೀಯ ವಿದ್ಯಮಾನಗಳು ಸ್ಥಗಿತವಲ್ಲ. ಬದಲಾವಣೆಗಳು ಸಂಭವಿಸುತ್ತಲೇ ಇರುತ್ತವೆ. ಇಪ್ಪತ್ತನೇ ಶತಮಾನದ ಆದಿಯಲ್ಲೇ ಮಹಾಯುದ್ಧವನ್ನು, ಮಹಾಕ್ರಾಂತಿಯನ್ನು ಕಂಡ ಜಗತ್ತು, ಪೂರ್ವಾರ್ಧದಲ್ಲೇ ಭೀಕರವಾದ ಎರಡನೇ ಮಹಾಯುದ್ಧವನ್ನು, ನಂತರ ಸುದೀರ್ಘಕಾಲದ ಶೀತಯುದ್ಧವನ್ನು ಅನುಭವಿಸಿತು. ಇಪ್ಪತ್ತೊಂದನೇ ಶತಮಾನ ಭಯೋತ್ಪಾದನೆಯ ವಿರುದ್ಧ ಜಾಗತಿಕ ಸಮರಕ್ಕೆ ನಾಂದಿಯಾಯಿತು. ಅದರ ಭಾಗವಾಗಿ ಆಫ್ಘಾನಿಸ್ತಾನದ ಮೇಲೆ ದಾಳಿ ನಡೆಸಿದ ಅಮೆರಿಕ ಇರಾಕ್ ಮೇಲೂ ಯುದ್ಧ ಸಾರಿ ಎರಡೂ ಕಡೆ ಅಶಾಂತಿ ನೆಲೆಸುವಂತೆ ಮಾಡಿತು. ಇಡೀ ಪಶ್ಚಿಮ ಏಶಿಯದಲ್ಲಿ ಮೇಲಾಟಕ್ಕಾಗಿ ಜರುಗಿದ ತಳಮಳ, ಸರ್ವಾಧಿಕಾರಿಗಳ ಪತನ, ಗೊತ್ತುಗುರಿಯಿಲ್ಲದ ಜನಾಂದೋಳನ, ಇಷ್ಟಾದರೂ ಅಸ್ಥಿರತೆ ಮುಂದುವರಿಯುತ್ತಿದೆ. ಬಲಪಂಥೀಯ ರಾಜಕಾರಣ ಜಗತ್ತಿನಲ್ಲಿ ವಿಜೃಂಭಿಸು ತ್ತಿದ್ದರೂ ಹಳೆಯ ದ್ವೇಷ ಅಂತ್ಯಗೊಂಡು, ಹೊಸ ಸಂಬಂಧಗಳು ಸೃಷ್ಟಿಯಾಗಿ ರುವುದೂ ಒಂದು ವಿದ್ಯಮಾನ. ಇರಾನಿನೊಂದಿಗೆ, ಕ್ಯೂಬಾದೊಂದಿಗೆ ಅಮೆರಿಕ ಒಪ್ಪಂದಕ್ಕೆ ಬಂದಿರುವುದು ಒಂದು ಉದಾಹರಣೆ. ಈಗ ಕೊರಿಯಾದ ಸರದಿ.

ಕೆಲ ತಿಂಗಳ ಹಿಂದೆ ಇನ್ನೇನು ನ್ಯೂಕ್ಲಿಯರ್ ಯುದ್ಧ ಸಂಭವಿಸಿಯೇ ಬಿಡುವುದೇನೋ ಎನಿಸಿದ್ದ ಅಮೆರಿಕ–ಉತ್ತರ ಕೊರಿಯ ನಡುವಣ ಜಟಾಪಟಿ ಈಗ ಸ್ತಬ್ಧ. ಶೀತಯುದ್ಧ ಕಾಲದಿಂದ, ಅಂದರೆ ಸುಮಾರು ಏಳು ದಶಕಗಳಿಂದ ಉತ್ತರ ಕೊರಿಯ ಆರ್ಥಿಕ ದಿಗ್ಬಂಧನಕ್ಕೊಳಗಾಗಿದೆ. ಎರಡನೇ ಮಹಾಯುದ್ಧಾನಂತರ ಇಬ್ಭಾಗವಾದ ಈ ಪರ್ಯಾಯ ದ್ವೀಪ ಒಂದಾಗಲೇ ಇಲ್ಲ. ದಕ್ಷಿಣ ಕೊರಿಯ ಅಮೆರಿಕದ ರಕ್ಷಣೆಯಲ್ಲಿದ್ದರೆ, ಉತ್ತರ ಕೊರಿಯ ಸರ್ವಾಧಿಕಾರಿ ಆಡಳಿತಕ್ಕೊಳ ಪಟ್ಟಿದ್ದು ನ್ಯೂಕ್ಲಿಯರ್ ಶಕ್ತರಾಷ್ಟ್ರ.

ಇತ್ತೀಚೆಗೆ ಜರುಗಿದ ಚಳಿಗಾಲದ ಒಲಿಂಪಿಕ್ ಪಂದ್ಯಗಳ ಸಮಯದಲ್ಲಿ ಉತ್ತರ ಮತ್ತು ದಕ್ಷಿಣ ಕೊರಿಯಗಳು ಪರಸ್ಪರ ವೈಮನಸ್ಯ ಮರೆತು ಪಂದ್ಯಗಳ ಯಶಸ್ಸಿಗೆ ಕಾರಣವಾಗಿದ್ದುವು. ಹಲವು ದಶಕಗಳ ಆರ್ಥಿಕ ದಿಗ್ಬಂಧನದಿಂದ ಪರಿತಪಿಸು ತ್ತಿದ್ದರೂ ನ್ಯೂಕ್ಲಿಯರ್ ಶಕ್ತರಾಷ್ಟ್ರವಾಗಿ ಉತ್ತರ ಕೊರಿಯ ಹೊಮ್ಮಿರುವುದು ವಿಸ್ಮಯ. ಈಚೆಗೆ ಒಂದಾದ ಮೇಲೊಂದರಂತೆ ಪ್ರಬಲವಾದ ಕ್ಷಿಪಣಿಗಳನ್ನೂ ಸಹ ಪ್ರಯೋಗಿಸಿ ಅಮೆರಿಕವನ್ನು ಕೆಣಕಿತ್ತು. ಈಗ ಅಮೆರಿಕ ಮತ್ತು ಉತ್ತರ ಕೊರಿಯಗಳು ಮಾತುಕತೆ ನಡೆಸಲು ಸಿದ್ಧವಾಗಿವೆ.

ಅಮೆರಿಕ ಅಧ್ಯಕ್ಷ ಟ್ರಂಪ್ ಪ್ರಕಾರ ಉತ್ತರ ಕೊರಿಯಾದ ವಿಷಯದಲ್ಲಿ ತಳೆದ ಬಿಗಿಧೋರಣೆಯ ಪರಿಣಾಮವೇ ಉತ್ತರ ಕೊರಿಯದ ನಾಯಕ ಕಿಮ್ ಜೋಂಗ್–ಉನ್ ನ್ಯೂಕ್ಲಿಯರ್ ಅಸ್ತ್ರಮುಕ್ತ ರಾಷ್ಟ್ರವಾಗಲು ಒಪ್ಪಿ ಕೊಳ್ಳಲು ಕಾರಣ. ಇದರ ಸತ್ಯಾ ಸತ್ಯತೆ ಏನು ಎನ್ನುವ ಚರ್ಚೆ ಈಗ ಅನಗತ್ಯ. ದಕ್ಷಿಣ ಕೊರಿಯದಲ್ಲಿ ಅಮೆರಿಕದ ಕಾರ್ಪೊರೇಟ್ ಸಂಸ್ಥೆಗಳು ಸಾಕಷ್ಟು ಬಂಡವಾಳ ಹೂಡಿವೆ. ಅದರ ಜೊತೆಗೆ ಈ ಭೂಭಾಗದಲ್ಲಿ ಅಮೆರಿಕಾಗೆ ಸೇನಾನೆಲೆ ಒದಗಿಸಿರುವ ದಕ್ಷಿಣ ಕೊರಿಯ ಭದ್ರಕೋಟೆ. ಹಾಗಿರು ವಾಗ ನ್ಯೂಕ್ಲಿಯರ್ ದಾಳಿಗೆ ಈಡಾದರೆ ದಕ್ಷಿಣ ಕೊರಿಯ ಕೂಡ ಧ್ವಂಸವಾಗುವ ಸಂಭವ ಹೆಚ್ಚು. ಅದರಿಂದ ದಕ್ಷಿಣ ಕೊರಿಯದ ನಾಯಕರು ಒತ್ತಡ ತಂದಿರುವ ಸಾಧ್ಯತೆಯೇ ಹೆಚ್ಚು. ಏನೇ ಇರಲಿ ಮೊದಲು ಹೊಂದಾಣಿಕೆಯಾದ್ದು ಉತ್ತರ ಮತ್ತು ದಕ್ಷಿಣ ಕೊರಿಯಗಳ ಮಧ್ಯೆ ಒಲಿಂಪಿಕ್ ಪಂದ್ಯಗಳ ಸಂದರ್ಭದಲ್ಲಿ. ಉತ್ತರ ಕೊರಿಯದ ಉಪಕ್ರಮವೇ ಇದರಲ್ಲಿ ಪ್ರಧಾನ.



ಮೇ ತಿಂಗಳಲ್ಲಿ ಅಮೆರಿಕ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಮತ್ತು ಉತ್ತರ ಕೊರಿಯದ ನಾಯಕ ಕಿಮ್ ಜೋಂಗ್–ಉನ್ ಇವರ ನಡುವೆ ಶೃಂಗಸಭೆ ಜರುಗುವ ನಿರೀಕ್ಷೆ ಇದೆ. ಅಧ್ಯಕ್ಷ ಟ್ರಂಪ್ ಕೊರಿಯಾದ ನಾಯಕನ ಆಹ್ವಾನವನ್ನು ಅಂಗೀಕರಿಸಿದ್ದಾರೆ. ಶೃಂಗಸಭೆ ನಡೆಯುವ ಸ್ಥಳ ಹಾಗೂ ತಾರೀಕು ಇನ್ನೂ ನಿಗದಿಯಾಗಬೇಕಾಗಿದೆ. ಟ್ರಂಪ್ ಆಡಳಿತದ ವೈಖರಿಯನ್ನು ಒಂದು ವರ್ಷದಿಂದ ನೋಡಿರುವವರಿಗೆ ಯಾವ ಸಂದರ್ಭದಲ್ಲಿ ಏನು ಮಾಡುತ್ತಾರೋ ಅವರು ಎನ್ನುವ ಅನುಮಾನ ಇದ್ದೇ ಇದೆ. ಪೂರ್ವ ಷರತ್ತುಗಳನ್ನು ವಿಧಿಸುವ ಸಂಭವವೂ ಇದೆ. ಹಾಗಿದ್ದರೂ ಇದೊಂದು ಸ್ವಾಗತಾರ್ಹ ಬೆಳವಣಿಗೆ. ಶೃಂಗಸಭೆ ಯಶಸ್ಸುಗೊಂಡು ಸಹಜಸ್ಥಿತಿ ಉಂಟಾಗಲಿ ಎಂದು ಹಾರೈಸೋಣ. ಎಲ್ಲಕ್ಕಿಂತ ಮುಖ್ಯವಾಗಿ ಉತ್ತರ ಕೊರಿಯ ಆರ್ಥಿಕ ದಿಗ್ಬಂಧನದಿಂದ ಮುಕ್ತಗೊಂಡು ಅಲ್ಲಿನ ಜನರಿಗೆ ನೆಮ್ಮದಿ ದೊರಕುವುದು ಮುಖ್ಯ. ಈ ಬೆಳವಣಿಗೆಯನ್ನು ಪ್ರಪಂಚದ ಎಲ್ಲ ದೇಶಗಳೂ ಸ್ವಾಗತಿಸಿವೆ. ಯೂರೋಪಿಯನ್ ಯೂನಿಯನ್, ಜರ್ಮನಿಯ ಚಾನ್ಸೆಲರ್ ಅಂಗೆಲಾ ಮರ್ಕೆಲ್ ಹಾಗೂ ಇತರ ನಾಯಕರುಗಳು ಶೃಂಗಸಭೆಗೆ ಯಶಸ್ಸನ್ನು ಕೋರಿದ್ದಾರೆ.

ಇದಕ್ಕೆ ಮುನ್ನ ಉತ್ತರ ಕೊರಿಯದ ನಾಯಕ ಕಿಮ್ ಜೋಂಗ್ – ಉನ್ ಮತ್ತು ದಕ್ಷಿಣ ಕೊರಿಯದ ನಾಯಕರುಗಳ ಮಧ್ಯೆ ಶೃಂಗಸಭೆ ನಡೆಯಲಿದೆ ಏಪ್ರಿಲ್ ತಿಂಗಳಲ್ಲಿ. ಈ ಐತಿಹಾಸಿಕ ಶೃಂಗ ಸಮಾವೇಶ ಎರಡೂ ದೇಶಗಳ ಮಧ್ಯೆ ಇರುವ ನಿಸ್ಸೇನೀಕೃತ ಪ್ರದೇಶದಲ್ಲಿ ನಡೆಯಲಿದೆ. ಈಗಾಗಲೇ ಈ ಎರಡೂ ದೇಶಗಳ ಅಧಿಕಾರಿಗಳ ಮಧ್ಯೆ ಮಾತುಕತೆಗಳು ಜರುಗಿವೆ. ಅಧಿಕಾರಿಗಳ ಮಟ್ಟದ ಸಭೆಯ ಯಶಸ್ಸೇ ಮುಂದೆ ಶೃಂಗಸಭೆಗೆ ಸಿದ್ಧತೆಯಾಗಿದೆ. ದಕ್ಷಿಣ ಕೊರಿಯಾದ ಅಧಿಕಾರಿಗಳು ನಡೆಸಿದ ಮಾತುಕತೆಗಳ ಸಾರಾಂಶವನ್ನು ಅಮೆರಿಕದ ಅಧ್ಯಕ್ಷ ಟ್ರಂಪ್ ಹಾಗೂ ಇತರ ಅಧಿಕಾರಿಗಳಿಗೆ ಮನವರಿಕೆ ಮಾಡಿಕೊಟ್ಟಿದ್ದೇ ಉತ್ತರ ಕೊರಿಯದೊಂದಿಗೆ ಶೃಂಗಸಭೆಗೆ ನಾಂದಿ ಯಾಯಿತು ಎನ್ನುವುದರಲ್ಲಿ ಸಂಶಯವಿಲ್ಲ.



**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಗಣೇಶ ಅಮೀನಗಡ

# ಮರೆಯಲಾಗದ ಮಹಾನ್ ಕಲಾವಿದ ಏಣಗಿ ಬಾಳಪ್ಪ

ಬಿಳಿ ರುಮಾಲು, ಬಿಳಿ ಅಂಗಿ, ಬಿಳಿ ಧೋತರ, ಎಡ ಹೆಗಲಿಗೊಂದು ಹೆಚ್ಚಾಗಿ ಬಿಳಿ ಶಾಲು, ಬಿಳಿ ಹುಬ್ಬು... ಇಂಥ ಬೆಳ್ಳಿ ಬಾಳಪ್ಪನವರ ಬಣ್ಣದ ಬದುಕಿನ ದಿನಗಳೆಂದರೆ ಚಿನ್ನದಂಥವು.

ಕಳೆದ ಶತಮಾನದ ರಂಗಭೂಮಿಯ ಇತಿಹಾಸಕ್ಕೆ ಸಾಕ್ಷಿಯಾಗಿದ್ದ ನಾಟ್ಯಭೂಷಣ ಏಣಗಿ ಬಾಳಪ್ಪ ಎಂದರೆ ವೃತ್ತಿ ರಂಗಭೂಮಿಯ ನಡೆದಾಡುವ ವಿಶ್ವಕೋಶವಿದ್ದಂತೆ. ಅವರು ಬಾಲನಟಿಯಾಗಿ, ಸ್ತ್ರೀಪಾತ್ರಧಾರಿಯಾಗಿ, ನಟರಾಗಿ, ಗಾಯಕರಾಗಿ, ನಾಟಕ ಕಂಪನಿ ಮಾಲೀಕರಾಗಿ... ಹೀಗೆ ರಂಗಭೂಮಿಯನ್ನೇ ಉಸಿರಾಡಿ ಹೆಸರಾದರು. ೧೮ ಆಗಸ್ಟ್ ೨೦೧೭ರಂದು ನಿಧನರಾದ ಬಾಳಪ್ಪನವರು ೧೦೩ ವರ್ಷ ಬದುಕಿದ್ದರು. ಅವರು ಜನಿಸಿದ್ದು ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಏಣಗಿ ಗ್ರಾಮದಲ್ಲಿ, ೧೯೧೪ರಲ್ಲಿ. ತಾರೀಖು ಗೊತ್ತಿಲ್ಲ. ಅವರ ಅವ್ವ ಬಾಳಮ್ಮ, ತಂದೆ ಕರಿಬಸಪ್ಪ.

ಬಾಳಪ್ಪ ಜನಿಸಿದ ಮೂರು ವರ್ಷಕ್ಕೇ ಅವರ ತಂದೆ ಕರಿಬಸಪ್ಪ ತೀರಿಕೊಂಡರು. ೧೨-೧೩ ವರ್ಷದವರಿದ್ದಾಗ ಅವರ ಅಕ್ಕ ಮತ್ತು ಅಣ್ಣನೂ ತೀರಿಕೊಂಡರು. ಬಾಗಾಯತ (ನೀರಾವರಿ) ಅಲ್ಲದ ಕಾರಣ ಬೆಳೆಯೂ ಅಷ್ಟಕಷ್ಟೆ. ಹೀಗಾಗಿ ೧೪ ಎಕರೆ ಹೊಲವು ಒತ್ತೆ ಬಿತ್ತು. ಸ್ಥಿತಿವಂತರ ಮನೆತನದಿಂದ ಬಂದ ಅವರ ಅವ್ವಳಿಗೆ ಕೂಲಿ ಮಾಡುವ ಅಭ್ಯಾಸ ಇರಲಿಲ್ಲ. ಇದನ್ನು ಬಾಳಪ್ಪ ಹೀಗೆ ನೆನಪಿಸಿಕೊಳ್ಳುತ್ತಾರೆ.

"ನನ್ನ ಅವ್ವ ಬೇರೆಯವರ ಹೊಲದಲ್ಲಿ ಕೆಲಸಕ್ಕೆ ಹೋಗಲು ಮನಸ್ಸು ಗಟ್ಟಿ ಮಾಡಿದಳು. ದುಡೀಲಿಕ್ಕೂ ಹೋದಳು. ಆದರೆ ಬೇರೆ ಆಳುಗಳಂತೆ ಇವಳಿಂದ ಕೆಲಸ ವಾಗುವುದಿಲ್ಲ ಎಂದು ಕಂಡ ಸಾಹುಕಾರರು ನಾಳೆಯಿಂದ ಕೆಲಸಕ್ಕೆ ಬರಬೇಡವೆಂದು ಹೇಳಿದರು. ಕಣ್ಣೀರು ಹಾಕ್ತಿದ್ದ ಅವ್ವಳಿಗೆ ಆಗ ನಾನು ನನ್ನ ಬಾಲ್ಯಬುದ್ಧಿಗೆ ತಕ್ಕಂತೆ ಹೇಳಿದೆ."

"ಅವ್ವಾ, ನಾನೂ ನಿನ್ನ ಕೂಡ ಕೆಲಸಕ್ಕ ಬರ್ತೀನಿ. ಇಬ್ರೂ ದುಡಿದ್ರ ಒಂದೇ ಆಳಿನ ಲೆಕ್ಕ ಸಾಹುಕಾರರು ಕೊಡ್ಲಿ" ಎಂದೆ. ಅವ್ವಳಿಗೆ ನನ್ನನ್ನು ದುಡಿಸಲು ಮನಸ್ಸಿರಲಿಲ್ಲ. ನನ್ನ ಒತ್ತಾಯಕ್ಕೆ ಒಪ್ಪಿದಳು. ಇಬ್ಬರೂ ದುಡಿಯಲು ಯತ್ನಿಸಿದೆವು. ಆದರೆ ದುಡಿದು ಗೊತ್ತೇ ಇಲ್ಲದ ನನ್ನ ಕೈ ತುಂಬ ಗುಳ್ಳೆಗಳೆದ್ದವು. ಮುಂದೆ ಅದೂ ಸಾಗಲಿಲ್ಲ. ಒಮ್ಮೆಯಂತೂ ಕಿತ್ತು ತಿನ್ನುವ ಬಡತನ ನಮ್ಮ ಮೇಲೆ ಎಂತಹ ಸ್ಥಿತಿ ತಂದಿತೆಂದರೆ, ಅದು ನೆನಪಾದರೆ ಈಗಲೂ ಕಣ್ಣಲ್ಲಿ ನೀರು ಬರುತ್ತದೆ. ಒಂದು ದಿನ ರಾತ್ರಿ ಅವ್ವ ನನಗೆ ಊಟ ಬಡಿಸಿದಳು. ನಾನು ಉಂಡೆ. ಕೂಡಲೇ ಆಕೆ ಮಲಗಲು ಹಾಸಿಗೆ ತಯಾರಿಸಿದಳು. ಆಗ ನಾನು 'ಅವ್ವಾ, ನೀ ಊಟ ಮಾಡುವಂಗಿಲ್ಲೇನು?' ಅಂತ ಕೇಳಿದೆ. ಆದರೆ ಏನೇನೋ ಹಾರಿಕೆ ಉತ್ತರ ಕೊಟ್ಟಳು. ಅಂದು ಇಬ್ಬರಿಗೂ ಆಗುವಷ್ಟು ರೊಟ್ಟಿ ಮನೆಯಲ್ಲಿರಲಿಲ್ಲವೆಂಬ ಸತ್ಯಸಂಗತಿ ನನಗೆ ತಿಳಿಯಿತು.

"ಅವ್ವಾ, ನಾಳೆಯಿಂದ ನಾವಿಬ್ರೂ ಕೂಡಿಯೇ ಊಟ ಮಾಡೋಣ. ಒಂದೇ ರೊಟ್ಟಿ ಇದ್ರ ಅರ್ಧ ಅರ್ಧ ತಿನ್ನೋಣ" ಎಂದು ಹೇಳಿದೆ. ಆಗ ಆಕೆ ನನ್ನನ್ನು ತಬ್ಬಿಕೊಂಡು ಅತ್ತಾಗ ನಾನೂ ಅತ್ತುಬಿಟ್ಟೆ.

ಹೀಗೆ ಬಡತನದ ಬೇಗೆಯಲ್ಲಿ ಬಾಲ್ಯ ಕಳೆದ ಬಾಳಪ್ಪ ಅವರು ಓದಿದ್ದು ನಾಲ್ಕನೆಯ ಇಯತ್ತೆಯವರೆಗೆ ಮಾತ್ರ. ಅವರಿಗೆ ಇದ್ದುದು ಒಳ್ಳೆಯ ಕಂಠ. ಓದುವಾಗಲೇ ಕವಿತೆಗಳನ್ನು ಹಾಡುತ್ತಿದ್ದರು. ಅವರ ಊರಿನವರು ಬಯಲಾಟ ಮಾಡಿದರೆ ಬಾಲಪಾತ್ರ ಮಾಡುತ್ತಿದ್ದರು. ಹೀಗಿದ್ದಾಗ ಅವರ ಊರಿನವರು ಗರುಡ ಸದಾಶಿವರಾಯರು ಬರೆದ 'ಪಾದುಕಾ ಪಟ್ಟಾಭಿಷೇಕ' ನಾಟಕ ಆಡಲು ಶುರು ಮಾಡಿದರು. ಅದರಲ್ಲಿ ಬಾಳಪ್ಪ ಅವರು ಭರತನ ಪಾತ್ರ ಮಾಡಿದರು. ಮೆಚ್ಚುಗೆಯೂ ಸಿಕ್ಕಿತು. ಈ ಮೆಚ್ಚುಗೆಯು ಅವರನ್ನು ನಾಟಕ ಕಂಪನಿಗೆ ಕರೆದೊಯ್ಯಿತು. ಅವರು ಊರ ಹಿರಿಯರ ಜೊತೆಗೆ ಹೋಗಿ ಭರತನ ಪಾತ್ರ ಮಾಡಿದರು. ಆ ನಾಟಕದಲ್ಲಿ ದಶರಥನ ಪಾತ್ರ ವಹಿಸಿದವರು ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು. ಅವರು ಬಾಳಪ್ಪನವರ ಪಾತ್ರ ನೋಡಿ ಬೆನ್ನು ಚಪ್ಪರಿಸಿದರು.

ಕೆಲವು ದಿನಗಳಾದ ನಂತರ ಧಾರವಾಡದಿಂದ ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು ತಮ್ಮ ಲಿಂಗರಾಜ ನಾಟ್ಯ ಸಂಘಕ್ಕೆ ಕರೆಸಿಕೊಂಡರು. ಅದು ೧೯೨೮ನೇ ಇಸವಿ. ಅವರು ಕಲ್ಲಾಗಿದ್ದ ಬಾಳಪ್ಪ ಅವರನ್ನು ಕಟೆದು ಮೂರ್ತಿ ಮಾಡಿದರು. ಎಲ್ಲೋ ಬಿದ್ದು ಹೋಗಬಾರದೆಂದು ರಂಗಭೂಮಿ ಗುಡಿಯಲ್ಲಿ ನಿಲ್ಲಿಸಿದರು. ಹೇಗೆ ಮೂರ್ತಿಯಾದರು ಎನ್ನುವುದಕ್ಕೊಂದು ಉದಾಹರಣೆ ಇಲ್ಲಿದೆ ಅವರದೇ ಮಾತುಗಳಲ್ಲಿ :

ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು ಶಿರಸಿ ಕಲಾಸಕ್ತರಿಂದ ಆರ್ಥಿಕ ನೆರವು ಪಡೆದುಕೊಂಡು 'ಶಿರಸಿ ಮಾರಿಕಾಂಬಾ ಪ್ರಾಸಾದಿತ ಸಂಗೀತ ನಾಟಕ ಮಂಡಳಿ'ಯನ್ನು ೧೯೩೦ರಲ್ಲಿ ಸಂಘಟಿಸಿದರು. ಅಬ್ಬಿಗೇರಿ ಕಂಪನಿಯಲ್ಲಿದ್ದ ಕಲಾವಿದರೆಲ್ಲ ಸ್ವಾಮಿಗಳ ಕಂಪನಿಯಲ್ಲಿ ಆಶ್ರಯ ಪಡೆದರು. ನಾಯಕಿ ಪಾತ್ರಕ್ಕಾಗಿ ಧಾರವಾಡದಿಂದ ಭಾಗೀರತಿ ಬಾಯಿ ಎಂಬ ಕಲಾವಿದೆಯನ್ನು ಕರೆಸಿದ್ದರು. ಈ ಕಂಪನಿಯ ಜನಪ್ರಿಯ ನಾಟಕ 'ವೀರರಾಣಿ ರುದ್ರಮ್ಮ'. ಕಂಪನಿಯು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿದ್ದಾಗ ನಡೆದ ಒಂದು ಘಟನೆಯು ನಾನು ಪ್ರಧಾನ ಪಾತ್ರಕ್ಕೆ ಬಡ್ತಿಯಾಗಲು ಕಾರಣವಾಯಿತು.

ರುದ್ರಮ್ಮನ ಪಾತ್ರಧಾರಿ ಭಾಗೀರತಿಬಾಯಿ, ಮಲ್ಲಸರ್ಜ ಪಾತ್ರದ ಗುರುರಾವ್ ದೇಶಪಾಂಡೆಯವರು ನಾಟಕಕ್ಕೆ ಬಣ್ಣ ಹಚ್ಚಲಿಲ್ಲ. ಯಾಕಂದ್ರ ಅವರಿಗೆ ಬಾಕಿ ಬರಬೇಕಿತ್ತು. ಇವತ್ತೇ ಕೊಡ್ರಿ ಎಂದು ಅವರು ಹಟ ಹಿಡಿದರು. ಆಗ ಸ್ವಾಮಿಗಳು ಒಪ್ಪಲಿಲ್ಲ. ಸ್ವಾಮಿಗಳು ನನ್ನನ್ನು ಕರೆದು ರುದ್ರಮ್ಮನ ಪಾತ್ರ ನಿರ್ವಹಿಸಲು ಆದೇಶಿಸಿದರು. ನನಗೆ ಎಲ್ಲಿಲ್ಲದ ಉತ್ಸಾಹ. ತಕ್ಷಣವೇ ಸಿದ್ಧನಾದೆ. ಜೊತೆಗೆ 'ಮಲ್ಲಸರ್ಜ ಯಾರು?' ಎಂದು ಕೇಳಿದೆ.

'ಶಿವಲಿಂಗಸ್ವಾಮಿ ಇನ್ನೂ ಸತ್ತಿಲ್ಲ' ಎಂದು ಹೇಳಿದರು. ಆ ದಿನದ ನಾಟಕ ತುಂಬ ಯಶಸ್ವಿಯಾಯಿತು. ತುಸು ಸಮಯದ ನಂತರ ಪ್ರೇಕ್ಷಕರ ಮಧ್ಯದಲ್ಲಿ ಕುಳಿತು, ನನ್ನ ಅಭಿನಯ ನೋಡುತ್ತಿದ್ದ ದೇಶಪಾಂಡೆ ಗುರುರಾಯರು ನೇಪಥ್ಯಕ್ಕೆ ಬಂದು



ಅಭಿನಂದನೆ ಹೇಳಿದಾಗ ನನ್ನ ಆನಂದಕ್ಕೆ ಮಿತಿ ಇರಲಿಲ್ಲ. ರುದ್ರಮ್ಮನ ಗೆಲುವಿನಿಂದ ನಾಯಕಿ ಪಾತ್ರ ನನಗೆ ಖಾಯಂ ಆಯಿತು. ಆ ಪಾತ್ರಕ್ಕಾಗಿ ಸ್ವಾಮಿಗಳು ಹೇಳಿಕೊಟ್ಟ ಅಭಿನಯ ನನಗಿನ್ನೂ ಚೆನ್ನಾಗಿ ನೆನಪಿದೆ. ರುದ್ರಮ್ಮ ತವರು ಮನೆಗೆ ಹೊರಟು ನಿಂತ ಸನ್ನಿವೇಶ, ಮಲ್ಲಸರ್ಜ ದೊರೆ ಹೊರಗಿನಿಂದ ಬಂದು 'ಇನ್ನೇನು ರಾಣಿಯವರು ತವರುಮನೆಗೆ ಹೊರಟಿದ್ದೀರಿ. ಅಲ್ಲಿಗೆ ಹೋದಮೇಲೆ ನಮ್ಮ ನೆನಪು...' ಮಾತು ಅರ್ಧಕ್ಕೆ ನಿಲ್ಲಿಸುತ್ತಾನೆ.

ಅದಕ್ಕೆ ರುದ್ರಮ್ಮನ ಪ್ರತಿಮಾತು 'ತವರಿಗೆ ಹೋದರೂ ಗಂಡನ ಮನೆ ಮರೆಯಲು ಸಾಧ್ಯವೆ? ಅನೇಕ ರಾಣಿಯರ ಲೀಲಾಭರದಲ್ಲಿ ನಿಮಗೆ ಮಾತ್ರ ಈ ಬಡವಿಯ ನೆನಪು ಆಗುವುದೊ ಇಲ್ಲವೊ?' ಎಂಬುದು ಅಷ್ಟಿಷ್ಟು ಮುಖಭಾವ ಪ್ರಕಟಿಸಿ ಮಾತು ಒಪ್ಪಿಸಿದರೆ ಸ್ವಾಮಿಗಳು ತೃಪ್ತರಾಗುತ್ತಿರಲಿಲ್ಲ. ಆಕೆಯ ಮಾತಿನಲ್ಲಿ ಶೃಂಗಾರವೂ ಇದೆ; ವಿಡಂಬನೆಯೂ ಇದೆ. ಅವೆರಡನ್ನೂ ರಂಗದ ಮೇಲೆ ತೋರಿಸಬೇಕೆಂಬುದನ್ನು ಅವರು ಸ್ವತಃ ಮಾಡಿ ತೋರಿಸುತ್ತಿದ್ದರು.

'ಗಂಡನ ಮನೆ ಮರೆಯಲು ಸಾಧ್ಯವೆ?' ಎಂಬ ಮೊದಲರ್ಧ ಮಾತು ಗಂಡನನ್ನೇ ನೋಡುತ್ತ ನಯವಾಗಿ ಹೇಳಿದರೆ, ನಂತರದ 'ರಾಣಿಯರ ಲೀಲಾಭರದಲ್ಲಿ ನನ್ನ ನೆನಪಾಗುವುದೆ?' ಎಂದು ಹೇಳುವಾಗ ಪ್ರೇಕ್ಷಕರ ಕಡೆಗೆ ತುಸು ಮುಖ ಹೊರಳಿಸಿ, ವೈಯಾರದಿಂದ ಸೆರಗನ್ನು ಸರಿಪಡಿಸಿಕೊಳ್ಳುತ್ತ ಗಂಡನಿಗೆ ಕಾಣದ ಹಾಗೆ ನಾಲಿಗೆ ಕಚ್ಚಿಕೊಳ್ಳಬೇಕು. ಸ್ವಾಮಿಗಳು ಈ ಶೃಂಗಾರ ಅಭಿನಯ ಕಲಿಸುವ ರೀತಿ ಮರೆಯ ದಂಥದು. ಇದನ್ನು ಕಲಿಯುವಾಗ ಅವರಿಂದ ಹೊಡೆಸಿ ಕೊಂಡೆ. ಆದರೆ, ಅಭಿನಯಿಸಿದಾಗ ಪ್ರೇಕ್ಷಕರ ಪ್ರತಿಕ್ರಿಯೆ ಮಾತ್ರ ರೋಮಾಂಚನ ಉಂಟುಮಾಡುತ್ತಿತ್ತು.

ಹೀಗೆ ಮಾಗುತ್ತ ಸಾಗಿದ ಬಾಳಪ್ಪನವರು, ಬಿ. ಪುಟ್ಟಸ್ವಾಮಯ್ಯನವರು ಬರೆದ 'ಅಕ್ಕಮಹಾದೇವಿ' ನಾಟಕದಲ್ಲಿ ಹೂ ಮಾರಿ ಜೀವಿಸುವ ಕುರುಡಿಯ ಪಾತ್ರ ಬರುತ್ತದೆ. ತನಗೆ ಉದ್ಯೋಗ ನೀಡಿದವರಿಗೆ ಆಕೆ ಹೀಗೆ ಹೇಳುತ್ತಾಳೆ: 'ಬೀದಿಯಲ್ಲಿ ಬಿದ್ದಿದ್ದ ನನ್ನನ್ನು ನಿಮ್ಮಲ್ಲಿ ತಂದಿರಿ. ವಿಶಾಲ ಉದ್ಯಾನದಲ್ಲಿ ಆಡಲು, ಹಾಡಲು, ಹೂಗಳ ಜೊತೆ ಇರಲು ಅವಕಾಶ ಮಾಡಿಕೊಟ್ಟಿರಿ ಎನ್ನುವ ಮಾತು ನನ್ನ ಇಡೀ ಜೀವನಕ್ಕೆ ಅನ್ವಯ ವಾಗುತ್ತದೆ. ಜನತೆಯ ಆಶ್ರಯದಲ್ಲಿ ನಾನು ಬಂದೆ, ಆಡಿದೆ, ಹಾಡಿದೆ.'

ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು ಬರೆದ 'ಕಿತ್ತೂರು ರಾಣಿ ರುದ್ರಮ್ಮ' ನಾಟಕದಲ್ಲಿ ರುದ್ರಮ್ಮನ ಪಾತ್ರ, ನಲವಡಿ ಶ್ರೀಕಂಠಶಾಸ್ತ್ರಿಗಳ 'ಹೇಮರಡ್ಡಿ ಮಲ್ಲಮ್ಮ' ನಾಟಕದಲ್ಲಿ ಮಲ್ಲಮ್ಮನ ಪಾತ್ರ, ಜಿ. ಜಿ. ಹೆಗಡೆಯವರು ಬರೆದ 'ಶಾಲಾ ಮಾಸ್ತರ' ನಾಟಕದಲ್ಲಿಯ ಮಾಸ್ತರನ ಪಾತ್ರ, ಎನ್. ರಾಯಚೂರು ಪೇಂಟರ್ ಬರೆದ 'ಮಾವ ಬಂದ್ನಪೊ ಮಾವ' ನಾಟಕದಲ್ಲಿ ಚೆನ್ನಪ್ಪಗೌಡನ ಪಾತ್ರ, ಎನ್. ರಾಯಚೂರು ಅವರ 'ಗೋರಾ ಕುಂಬಾರ' ನಾಟಕದಲ್ಲಿಯ ಗೋರಾ ಕುಂಬಾರನ ಪಾತ್ರ, ಇವೆಲ್ಲಕ್ಕೆ ಕಳಸವಿಟ್ಟಂತೆ 'ಬಸವೇಶ್ವರ' ನಾಟಕದ ಬಸವಣ್ಣನ ಪಾತ್ರ ಅವರಿಗೆ ಕೀರ್ತಿ ತಂದುಕೊಟ್ಟವು.

೧೯೪೦ರಲ್ಲಿ ಅವರು ಕಲಾವೈಭವ ನಾಟ್ಯ ಸಂಘ ಎಂಬ ಸ್ವಂತ ಕಂಪನಿಯನ್ನು ಕಟ್ಟಿದರು. ಇದರ ಮೂಲಕ 'ಬಸವೇಶ್ವರ' ನಾಟಕ ಜಯಭೇರಿ ಬಾರಿಸಿತು. ಮಹಾರಾಷ್ಟ್ರದ ಮುಂಬೈ, ಇಚಲಕರಂಜಿ, ಸಾಂಗಲಿ, ಮಿರಜ, ಸೊಲ್ಲಾಪುರ, ಕೊಲ್ಲಾಪುರ, ಗಡಹಿಂಗ್ಲಜ ಮೊದಲಾದ ಊರುಗಳಲ್ಲಿ ಅವರ ನಾಟಕ ಕಂಪನಿ ಮುಕ್ಕಾಂ ಮಾಡಿತು. ಮಹಾರಾಷ್ಟ್ರದ ಜನರು ಬಯಸುವ ಧರ್ಮಶ್ರದ್ಧೆ, ಸಾಮಾಜಿಕ ಪ್ರಜ್ಞೆಯ ಪ್ರಯೋಗಶೀಲ ನಾಟಕಗಳು ಅವರ ಬತ್ತಳಿಕೆಯಲ್ಲಿದ್ದವು. ಇಚಲಕರಂಜಿಯಲ್ಲಿ ಒಂದು ವರ್ಷಕ್ಕೂ ಹೆಚ್ಚು ಕಾಲ ಕಂಪನಿ ಮುಕ್ಕಾಂ ಮಾಡಿತು.

**ಜೋಳಿಗೆ ಹಿಡಿದು...**

'ಬಸವೇಶ್ವರ' ನಾಟಕಕ್ಕೆ ಮಂಗಲವಾಗುತ್ತಿದ್ದಂತೆಯೇ ಅವರು ಬಸವೇಶ್ವರ ವೇಷದಲ್ಲಿಯೇ ಜೋಳಿಗೆ ಹಿಡಿದು ಮುಖ್ಯದ್ವಾರದ ಬಳಿ ನಿಲ್ಲುತ್ತಿದ್ದರು. ಪ್ರೇಕ್ಷಕರು ಹೋಗುವಾಗ ಕಾಣಿಕೆ ಹಾಕುತ್ತಿದ್ದರು. ಹೀಗೆ ಜೋಳಿಗೆ ಯಲ್ಲಿ ಸಂಗ್ರಹಿಸಿದ ಎಂಟು ಸಾವಿರ ರೂ.ಗಳನ್ನು ವಿಜಾಪುರ (ವಿಜಯಪುರ) ಜಿಲ್ಲೆ ಬಸವನಬಾಗೇವಾಡಿ ಬಸವೇಶ್ವರ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಸಲ್ಲಿಸಿದರು. ವಚನ ಪಿತಾಮಹ ಫ. ಗು. ಹಳಕಟ್ಟಿ ಹಾಗೂ ಧಾರವಾಡದ ಉತ್ತಂಗಿ ಚೆನ್ನಪ್ಪ ಅವರು ಆರ್ಥಿಕವಾಗಿ ತೊಂದರೆಯಲ್ಲಿದ್ದಾಗ ನೆರವಾದರು.

ಹೀಗೆ ಜೋಳಿಗೆ ಹಿಡಿಯಲು ಕಾರಣವೆಂದರೆ, ಅವರು ಮುಂಬೈಗೆ ನಾಟಕದ ಸಾಮಾನುಗಳನ್ನು ಖರೀದಿಸಲು ಹೋದಾಗ ಪೃಥ್ವಿರಾಜ್ ಕಪೂರ್ ಅವರ ನಾಟಕ ನೋಡಲು ಹೋಗುತ್ತಿದ್ದರು. ನಾಟಕ ಮುಗಿದ ನಂತರ ಅವರು ಜೋಳಿಗೆ ಹಿಡಿದು ನಿಲ್ಲುತ್ತಿದ್ದರು. ದೇಶದ ಯಾವುದಾದರೂ ಪರಿಹಾರಕ್ಕೆ ಅವರು ಜೋಳಿಗೆ ಹಿಡಿಯುತ್ತಾರೆಂದು ತಿಳಿಯಿತು. ಇದರಿಂದ ಪ್ರೇರಣೆ ಗೊಂಡ ಅವರು ಬಸವಣ್ಣನ ಪಾತ್ರಧಾರಿಯಾಗಿ ಜೋಳಿಗೆ ಹಿಡಿಯಲು ಆರಂಭಿಸಿದರು. (ಬಾಳಪ್ಪನವರ ಇಂಥ ಹಲವಾರು ಅನುಭವಗಳು ನಾನು ಬರೆದ 'ಬಣ್ಣದ ಬದುಕಿನ ಚಿನ್ನದ ದಿನಗಳು' ಕೃತಿಯಲ್ಲಿ ದಾಖಲಾಗಿವೆ.)

**ಸಾಷ್ಟಾಂಗ ಮಾಡಿದ ಸ್ವಾಮೀಜಿ!**

ಧಾರವಾಡ ಜಿಲ್ಲೆಯ ಗುಡ್ಡದಮಲ್ಲಾಪುರ ಊರಲ್ಲಿ ಬಸವಣ್ಣನ ಜಾತ್ರೆಯಿತ್ತು. ಅಲ್ಲಿ ಬಾಳಪ್ಪ ಅವರ ಕಂಪನಿ ಮುಕ್ಕಾಂ ಮಾಡಿತ್ತು. ಧಾರವಾಡದ ಮುರುಘಾಮಠದ ಮೃತ್ಯುಂಜಯ ಸ್ವಾಮಿಗಳು ಜಾತ್ರೆಗೆ ಬಂದಿದ್ದರು. 'ಬಸವೇಶ್ವರ' ನಾಟಕ ನೋಡಲು ಬರ್ರಿ ಎಂದು ಕೇಳಿಕೊಂಡರು. ನಂತರ ಬಂದ ಸ್ವಾಮಿಗಳನ್ನು ರಂಗದ ಬದಿಗೆ ಕೂಡಿಸಲಾಗಿತ್ತು.

ಅನುಭವ ಮಂಟಪದ ಸನ್ನಿವೇಶ ನಡೆಯುತ್ತಿರು ವಾಗಲೇ ಸ್ವಾಮಿಗಳು, ಬಸವೇಶ್ವರ ಪಾತ್ರ ಮಾಡಿದ ಬಾಳಪ್ಪ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಗಾಬರಿಯಾದರು ಬಾಳಪ್ಪ, ಪ್ರೇಕ್ಷಕರಿಗೆ ಆಶ್ಚರ್ಯ. ಕೂಡಲೇ ನಾಟಕ ನಿಲ್ಲಿಸಿದರು. ಅವರನ್ನು ಆಸನದ ಮೇಲೆ ಕೂಡಿಸಿ 'ಇದು ನಾಟಕ್ರಿ. ಇದು ನಾಟಕ' ಎಂದಾಗ ಹ್ಞಾಂ ಹ್ಞಾಂ ಅಂದರು. ಅಷ್ಟು ಭಾವಪರವಶ ರಾಗಿದ್ದರು ಸ್ವಾಮಿಗಳು. ಇದನ್ನು ಅವರು ಮೆಲುಕು ಹಾಕುವ ಉದ್ದೇಶ ಏನೆಂದರೆ, ಪ್ರೇಕ್ಷಕರು ತಲ್ಲೀನರಾಗಿ ನಾಟಕ ನೋಡುತ್ತಿದ್ದರು, ತಲ್ಲೀನರಾಗುವ ಹಾಗೆ ಕಲಾವಿದರು ಪಾತ್ರ ಮಾಡುತ್ತಿದ್ದರು.

ಇಂಥ ಬಾಳಪ್ಪನವರು ನವಲಗುಂದ ಸ್ವಾಮಿಗಳು ನೀಡಿದ ನಾಟ್ಯಭೂಷಣ ಬಿರುದು, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ನಿಡುಮಾಮಿಡಿ ಮಠದಿಂದ ನಾಟಕ ಕಲಾ ನಿಪುಣ ಬಿರುದು, ಮುಂಬೈನಲ್ಲಿ ಮಹಾರಾಷ್ಟ್ರ ಪ್ರದೇಶ ಬಸವ ಸಮಿತಿ ವತಿಯಿಂದ 'ಬಸವತತ್ವ ಭೂಷಣ' ಪದವಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಗುಬ್ಬಿ ವೀರಣ್ಣ ಪ್ರಶಸ್ತಿ, ಹಂಪಿ ಕನ್ನಡ ವಿಶ್ವವಿದ್ಯಾಲಯ ದಿಂದ ನಾಡೋಜ ಗೌರವ, ಆಳ್ವಾಸ್ ನುಡಿಸಿರಿ ಪ್ರಶಸ್ತಿ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ, ಮೈಸೂರಿನ ಸಂಗೀತ ವಿಶ್ವವಿದ್ಯಾ ಲಯದಿಂದ ಗೌರವ ಡಾಕ್ಟರೇಟ್ ಪುರಸ್ಕೃತರಾಗಿದ್ದಾರೆ.

ಕಲಾವೈಭವ ನಾಟ್ಯ ಸಂಘ ನಿಂತ ಮೇಲೆ ಅವರು ಧಾರವಾಡದಲ್ಲಿ ಮ್ಯಾಳ ಎಂಬ ತಂಡ ಕಟ್ಟಿದರು. ಜತೆಗೆ, ಕರೆದಲ್ಲಿಗೆ ಹೋಗಿ ರಂಗಗೀತೆಗಳನ್ನು ಹಾಡುತ್ತ, ತಮ್ಮ ರಂಗಾನುಭವಗಳನ್ನು ಬಿಚ್ಚಿಡುತ್ತಿದ್ದರು.

ಅವರಿಗೆ ಇಬ್ಬರು ಪತ್ನಿಯರು. ಮೊದಲನೆಯವರು ಸಾವಿತ್ರಮ್ಮ. ಅವರಿಗೆ ನಾಲ್ವರು ಪುತ್ರರು ಹಾಗೂ ಮೂವರು ಪುತ್ರಿಯರು ಇದ್ದಾರೆ. ಇನ್ನೊಬ್ಬರು ರಂಗಕಲಾವಿದೆ ಲಕ್ಷ್ಮಿಬಾಯಿ. ಅವರಿಗೆ ಇಬ್ಬರು ಮಕ್ಕಳು. ನಟರಾಜ ಹಾಗೂ ಕೊಲ್ಲಾಪುರದಲ್ಲಿ ವಾಸವಾಗಿರುವ ಭಾಗ್ಯಶ್ರೀ. ಲಕ್ಷ್ಮಿಬಾಯಿ ಅವರು ಧಾರವಾಡದಲ್ಲಿ ನೆಲೆ ನಿಂತಿದ್ದಾರೆ.

ಬಾಳಪ್ಪನವರು ಜೋಳದರಾಶಿ ದೊಡ್ಡನಗೌಡರು ರಚಿಸಿದ ಹಾಡೊಂದನ್ನು ಹಾಡುತ್ತಿದ್ದರು. ಅದು ಹೀಗಿದೆ:

*ಹೋಗಿಬರ್ತೇನಯ್ಯ ನಮ್ಮೂರಿಗೆ*
*ಎಲ್ಲರಿಗೂ ಶರಣಾರ್ಥಿ ದಯ ತೋರಿ ಕಳುಹಿಸಿರಿ*
*ಏಸೋ ಕಾಲದಿಂದ ಊರೂರು ತಿರುಗುತ*
*ನಿಮ್ಮೂರಿಗೆ ಬಂದೆ ಕಲಾವಿದನಾಗಿ*
*ಹಿಂದಿಲ್ಲ ಮುಂದಿಲ್ಲ, ನಾ ತಂದದ್ದೇನಿಲ್ಲ*
*ಎಲ್ಲ ನೀವೆ ನೀಡಿ ನೆರವಾದಿರಿ ಎನಗೆ*

*ತಂದೆ ತಾಯಿ ಅಣ್ಣತಮ್ಮಂದಿರಾಗುತ*
*ತಂದೆ ತಾಯಿ ಅಕ್ಕತಂಗಿಯರಾಗುತ*
*ಹಾಲು ಸಕ್ಕರೆ ತುಪ್ಪ ಇಕ್ಕಿ ಸಲುಹಿದಿರಿ*
*ಹೆಂಡತಿ ಮಕ್ಕಳ ಸಂಸಾರ ಬೆಳೆಸಿದಿರಿ*
*ಮಮಕಾರವಿದ್ದರೇನು ಬಿಟ್ಟು ಹೋಗಲೇಬೇಕು*

*ನಾ ವಾಸವಾಗಿದ್ದ ಮನೆಯು ಹಳೆಯದಾಯಿತು*
*ಇದ್ದಷ್ಟು ಕಾಲ ಸಂಸಾರಕ್ಕೆ ನೆರವಾಯಿತು*
*ಬಿಟ್ಟು ಹೋಗುವುದೆಲ್ಲ, ನಾ ತಂದದ್ದೇನಲ್ಲ*
*ನೀವಿತ್ತುದುನ್ನೆಲ್ಲ ನಿಮಗೊಪ್ಪಿಸುವೆನಯ್ಯ*

*ಬದುಕಿದ್ದ ಕಾಲದಲ್ಲಿ ಏನೇನೋ ಮಾಡಿದೆ*
*ತಪ್ಪೇನೋ ಒಪ್ಪೇನೋ ಒಪ್ಪಿಸಿಕೊಳ್ಳಿರಯ್ಯ*
*ಹೋಗೆಂದ ದೇವನು ಬಾ ಎಂದು ಕರೆವನು*
*ಎಲ್ಲರಿಗೂ ಶರಣಾರ್ಥಿ ಎಲ್ಲರಿಗೂ ಶರಣಾರ್ಥಿ*
*ಶರಣಾರ್ಥಿ...*

**ಗಣೇಶ ಅಮೀನಗಡ**
೪೦೪, ಸೃಷ್ಟಿ ಸಾಲಿಗ್ರಾಮ ಅಪಾರ್ಟ್‌ಮೆಂಟ್, ಜಯಲಕ್ಷ್ಮಿ ವಿಲಾಸ ರಸ್ತೆ, ಚಾಮರಾಜಪುರಂ, ಮೈಸೂರು – ೫೭೦ ೦೦೫

# ಡಾ॥ ಬಿ. ಆರ್. ಅಂಬೇಡ್ಕರ್ ಮತ್ತು ಕಾಲದ ಕರೆ



ಶ್ರೀಸುಮಿತ್ರಾಸುತ ಅಗಸಬಾಳ

**"ಮನುಷ್ಯನಿಂದ ಮನುಷ್ಯನ, ಒಂದು ವರ್ಗದಿಂದ ಇನ್ನೊಂದು ವರ್ಗದ, ಒಂದು ದೇಶದಿಂದ ಇನ್ನೊಂದು ದೇಶದ ಮೇಲೆ ನಡೆಯುವ ದಬ್ಬಾಳಿಕೆ ಹಾಗೂ ಶೋಷಣೆಗಳಿಂದ ಸಮಾಜವನ್ನು ವಿಮೋಚನೆಗೊಳಿಸುವುದು."**

***– ಡಾ॥ ಬಿ. ಆರ್. ಅಂಬೇಡ್ಕರ್***

*(ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾದ ಗೊತ್ತು – ಗುರಿ ಕುರಿತ ಪ್ರಸ್ತಾವನೆ – ೧೯೫೬)*

ಮೇಲಿನ ಮಾತುಗಳನ್ನು ಅಂಬೇಡ್ಕರ್ ಅವರು ತಮ್ಮ ಅಂತಿಮ ದಿನಗಳಲ್ಲಿ ಬರೆದರು. ತಮ್ಮ ರಾಜಕೀಯ ಹೋರಾಟದ ಪಯಣದಲ್ಲಿ ಸ್ವತಂತ್ರ ಕಾರ್ಮಿಕ ಪಕ್ಷ, ಷೆಡ್ಯೂಲ್ ಕಾಸ್ಟ್ ಫೆಡರೇಶನ್‌ಗಳಂಥ ರಾಜಕೀಯ ವೇದಿಕೆಗಳನ್ನು ಆರಂಭಿಸಿ ಪಡೆದ ಅನುಭವದ ಹಿನ್ನೆಲೆಯಲ್ಲಿ ಆರ್.ಪಿ.ಐ. ಸ್ಥಾಪಿಸುವಾಗ, ಅದರ ಗೊತ್ತು – ಗುರಿಗಳನ್ನು ಹೇಳುವಾಗ ಅವರ ದೃಷ್ಟಿ ಎಷ್ಟು ವಿಶಾಲವಾಗಿತ್ತು ಎಂಬುದನ್ನು ಅವರ ಚಿಂತನೆಗಳು ಸಾಬೀತುಪಡಿಸುತ್ತವೆ. 'ಸಮಾಜವನ್ನು ವಿಮೋಚನೆ'ಗೊಳಿಸುವ ಅವರ ಕನಸಿನಲ್ಲಿ ದಲಿತರು ಮಾತ್ರವಲ್ಲ ಒಟ್ಟಾರೆ ಶೋಷಣೆರಹಿತ ವಿಶ್ವ ಅಡಗಿದೆ. ಅಂಥ ವ್ಯಕ್ತಿಯನ್ನು ಇಂದು ಕೇವಲ ದಲಿತ ವರ್ಗಕ್ಕೆ ಸೀಮಿತಗೊಳಿಸಿ ನೋಡುತ್ತಿರುವುದು ಅಂಬೇಡ್ಕರ್ ಅವರಿಗೆ ಮಾತ್ರವಲ್ಲ ಇತಿಹಾಸಕ್ಕೆ ಬಗೆಯುವ ಅಪಚಾರ.

ಕಳೆದ ತಿಂಗಳು (ಮಾರ್ಚ್ ೧೦–೧೧) ಬೆಂಗಳೂರಿನಲ್ಲಿ 'ಎತ್ತ ಸಾಗುತ್ತಿದೆ ಭಾರತ – ಅಂಬೇಡ್ಕರ್ ಚಿಂತನೆಯ ಬೆಳಕಲ್ಲಿ ವಿಶ್ಲೇಷಣೆ' ಎಂಬ ವಿಷಯದ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ ನಡೆಯಿತು. ರಾಜ್ಯದ, ದೇಶದ ದಲಿತ, ದಲಿತಪರ, ಪ್ರಗತಿಪರ ಚಿಂತಕರು ಈ ವಿಚಾರ ಸಂಕಿರಣದ ವಿವಿಧ ಗೋಷ್ಠಿಗಳಲ್ಲಿ ಭಾಗವಹಿಸಿದ್ದರು. ಒಟ್ಟಾರೆ ಮನುವಾದಿ ಚಿಂತನೆ ಈಗ ಭಾರತದ ಪ್ರಭುತ್ವದ ಭಾಗವಾಗಿದ್ದರ ಕುರಿತು ಆತಂಕ ಮತ್ತು ಅದನ್ನೆದುರಿಸುವ ಪರ್ಯಾಯ ಚಿಂತನೆಗಳು ಆ ಎರಡು ದಿನದ ವಿಷಯಗಳಾಗಿದ್ದವು. ಇಂಥ ವಿಚಾರ ಸಂಕಿರಣಗಳು ಹಲವಾರು ಬಾರಿ ನಡೆದಿವೆ. ಆದರೆ ಈ ಎರಡು ದಿನದ ಕಾರ್ಯಕ್ರಮದ ವಿಶೇಷ ಏನೆಂದರೆ ಅದನ್ನು ಸಂಘಟಿಸಿದ್ದು ರಾಜ್ಯದ ನಾಲ್ಕು ಪ್ರಮುಖ ದಲಿತ ಸಂಘಟನೆಗಳು. ಎಪ್ಪತ್ತರ ದಶಕದಲ್ಲಿ ರಾಜ್ಯದಲ್ಲಿ ಆರಂಭವಾದ ದಲಿತ ಸಂಘಟನೆ ನಾಲ್ಕು ದಶಕದಲ್ಲಿ ಹಲವಾರು ಬಣಗಳಾಗಿ ಒಡೆದುಹೋಗಿತ್ತು. ಬಹುತೇಕ ಬಣಗಳಿಗೂ ಅಂಬೇಡ್ಕರ್ ಚಿಂತನೆಯೆ ತಾತ್ವಿಕ ನೆಲೆಯಾಗಿದ್ದರೂ ದಲಿತಪರ ಹೋರಾಟ ಮಾತ್ರ ಭಿನ್ನವೇದಿಕೆಗಳಿಂದ ನಡೆಯುತ್ತಿತ್ತು. ಪರಿಣಾಮವಾಗಿ ದಲಿತ ಪರ ಹೋರಾಟಗಳು ಸಾಂಕೇತಿಕವಾಗಿದ್ದವು. ಇದನ್ನರಿತ ಮಾವಳ್ಳಿ ಶಂಕರ್, ಲಕ್ಷ್ಮೀನಾರಾಯಣ ನಾಗವಾರ, ಗುರುಪ್ರಸಾದ ಕೆರೆಗೋಡು, ಡಿ. ಜಿ. ಸಾಗರ ಈ ನಾಲ್ಕೂ ಜನ ದಲಿತ ಹೋರಾಟಗಾರರು ತಮ್ಮ ಬಣಗಳನ್ನು ಒಟ್ಟಿಗೆ ತಂದು ಈ ವಿಚಾರ ಸಂಕಿರಣ ಆಯೋಜಿಸಿದ್ದರು. ಸಹಜವಾಗಿಯೇ ರಾಜ್ಯದಾದ್ಯಂತ ಆಗಮಿಸಿದ್ದ ನಾಲ್ಕೂ ಬಣಗಳ ದಲಿತ ಕಾರ್ಯಕರ್ತರಿಗೆ ಈ ಸಮಾವೇಶ ಸ್ಫೂರ್ತಿಯನ್ನು ತಂದಿತ್ತು. ಈ ನಾಲ್ಕೂ ಬಣ ಸದ್ಯಕ್ಕೆ ಒಂದು ಸಂಘಟನೆಯಾಗಿ ರೂಪಗೊಂಡಿಲ್ಲ ನಿಜ, ಆದರೆ ತಮ್ಮ ನಡುವಿನ ಭಿನ್ನತೆಯನ್ನು ಮರೆತು ಒಂದು ವೇದಿಕೆಗೆ ಬಂದು ಅಂಬೇಡ್ಕರ್ ಆಶಯಗಳ ಕುರಿತು ಚಿಂತನ ಮಂಥನ ನಡೆಸಿದ್ದು ಒಂದು ಆಶಾದಾಯಕ ಬೆಳವಣಿಗೆ. ಈ ಬೆಳವಣಿಗೆಗೆ ದೇಶದಲ್ಲಿ, ರಾಜ್ಯದಲ್ಲಿರುವ ಇಂದಿನ ಸಾಮಾಜಿಕ – ರಾಜಕೀಯ ಬೆಳವಣಿಗೆಗಳು ಕಾರಣ. ಇದು ಕಾಲದ ಕರೆಗೆ ಓಗೊಡುವ ಗುಣಾತ್ಮಕ ಬೆಳವಣಿಗೆ. ಇಂಥ ಐಕ್ಯತೆ ಕೇವಲ ಕಾರ್ಯಕ್ರಮಗಳಿಗೆ ಸೀಮಿತವಾಗದೇ ಚಳುವಳಿಗಳಿಗೆ ವಿಸ್ತರಿಸಬೇಕು. ಎಂಭತ್ತರ ದಶಕದ ಆರಂಭದಲ್ಲಿ ದಲಿತ ಚಳುವಳಿ ಪ್ರಬಲವಾಗಿದ್ದರೂ ತನ್ನದೇ ಆದ ರಾಜಕೀಯ ಕಾರ್ಯಕ್ರಮವನ್ನು ಹೊಂದಿರಲಿಲ್ಲ. ಅಂದಿನ ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯವಾದ ರಾಜಕೀಯ ವೇದಿಕೆಯನ್ನು ನಿರ್ಮಿಸಲು ರೈತ, ದಲಿತ, ಕಾರ್ಮಿಕ ಚಳುವಳಿಗಳು ಮುಂದಾಗಿದ್ದರೆ ಖಂಡಿತ ಇಂದು ರಾಜ್ಯದಲ್ಲಿ ಚಳುವಳಿಗಳ ರಾಜಕೀಯ ಪ್ರಬಲವಾಗಿರುತ್ತಿತ್ತು. ಅಂದು ದಲಿತ ಚಳುವಳಿ ರಾಜಕೀಯದಿಂದ ದೂರ ಉಳಿಯಿತು. ರೈತ ಚಳುವಳಿ ರಾಜಕೀಯಕ್ಕೆ ಪ್ರವೇಶ ಮಾಡಬೇಕಾದ ಸಂದರ್ಭದಲ್ಲಿ ಪ್ರವೇಶ ಮಾಡದೇ ವಿಳಂಬಮಾಡಿತು. ಅನಿವಾರ್ಯವಾಗಿ ಕಮ್ಯುನಿಸ್ಟರು ಜನತಾ ಪಕ್ಷದ ಜೊತೆಗೂಡಿದರು. ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯವಾಗಿ ಜನತಾಪಕ್ಷ ರೂಪಗೊಂಡರೂ ೧೯೮೩ರಲ್ಲಿ ಅಧಿಕಾರಕ್ಕೆ ಬಂದ ಜನತಾಪಕ್ಷ ಕಮ್ಯುನಿಸ್ಟರ ಹಾಗೂ ಭಾರತೀಯ ಜನತಾಪಕ್ಷದ ಬೆಂಬಲ ಪಡೆದು ಮೊದಲ ಅವಧಿಯಲ್ಲಿ ಅಧಿಕಾರ ನಡೆಸಿತು. ಆ ದಿನಗಳಲ್ಲಿ ರೈತ, ದಲಿತ, ಕಾರ್ಮಿಕ ಚಳುವಳಿಗಳು ಒಂದಾಗಿ ರಾಜಕೀಯ ಕಾರ್ಯಕ್ರಮ ರೂಪಿಸಿದ್ದರೆ ಖಂಡಿತ ಚಳುವಳಿಯ ರಾಜಕಾರಣ ಆಡಳಿತ ನಡೆಸುತ್ತಿತ್ತು ಅಥವಾ ಆಡಳಿತ ವ್ಯವಸ್ಥೆಯಲ್ಲಿ ಮಧ್ಯಪ್ರವೇಶ ಮಾಡುವ ಶಕ್ತಿ ಪಡೆದಿರುತ್ತಿತ್ತು. ಆಗ ಜನತಾಪಕ್ಷ ಚಳುವಳಿಯ ರಾಜಕೀಯ ವೇದಿಕೆಗೆ ಬೆಂಬಲಿಸುವ ಅನಿವಾರ್ಯತೆಗೊಳಗಾಗುತ್ತಿತ್ತು. ಎಂಭತ್ತರ ದಶಕದ ಆರಂಭದಲ್ಲಿ ರಾಜ್ಯದ ದಲಿತ ಚಳುವಳಿಯ ಮುಖಂಡರು ರಾಜಕೀಯದಿಂದ ದೂರ ಉಳಿದ ಪರಿಣಾಮ ಹಲವಾರು ದಲಿತ ಮುಖಂಡರು, ಕಾರ್ಯಕರ್ತರು ವಿವಿಧ ರಾಜಕೀಯ ಪಕ್ಷಗಳ ಭಾಗವಾದರು, ಕೆಲವರು ಬೆಂಬಲಿಗರಾದರು. ಮನುವಾದದ ವಿರುದ್ಧ ಹೋರಾಡಿದ ದಲಿತ ಮುಖಂಡರಲ್ಲೇ ಕೆಲವರು ಮನುವಾದಿ ಪಕ್ಷದ ಭಾಗವಾಗಿದ್ದು ಈ ರಾಜ್ಯದ ದಲಿತ ಚಳುವಳಿಯ ಒಡಕಿಗೆ, ಹಿನ್ನಡೆಗೆ

ಕಾರಣವಾಯ್ತು. ನಂತರ ದಲಿತ ಬಣಗಳು ಹೆಚ್ಚಿದವು. ದಲಿತ ಚಳುವಳಿಯ ಹುಟ್ಟಿಗೆ ಕಾರಣರಾದ ಹಲವಾರು ದಲಿತ ಚಿಂತಕರು ಸಕ್ರಿಯ ಚಳುವಳಿಯಿಂದ ದೂರವಾಗಿ ಕೇವಲ ಹಿತೈಷಿಗಳಾದರು. ದಲಿತ ಬಣಗಳು ದಲಿತೇತರ ರಾಜಕೀಯ ಹಿತಾಸಕ್ತಿಗೆ ಬಳಕೆಯಾಗತೊಡಗಿದವು. ಕೆಲವು ದಲಿತ ಗುಂಪುಗಳಿಗೆ ಅಂಬೇಡ್ಕರ್ ಚಿಂತನೆಗಿಂತ ಚಿತ್ರ ಪ್ರಧಾನವಾಯಿತು. ಇಂಥ ಸಂದರ್ಭದಲ್ಲಿಯೂ ಕೆಲವು ದಲಿತ ಸಂಘಟನೆ ಗಳು ದಲಿತರ ಸಮಸ್ಯೆಗಳಿಗೆ ಸ್ಪಂದಿಸುತ್ತಲೇ ಬಂದಿವೆ. ಅಂಥ ನಾಲ್ಕು ಬಣಗಳು ಇಂದು ಒಂದಾಗಿ ಅಂಬೇಡ್ಕರ್ ಬೆಳಕಿನಲ್ಲಿ ಮುನ್ನಡೆಯುವ ಕನಸು ಹೊತ್ತಿವೆ.

ಅಂಬೇಡ್ಕರ್ ಅವರ ಚಿಂತನೆಯ ಭಾಗವಾಗಿ ಹುಟ್ಟಿದ ಬಹುಜನ ಸಮಾಜ ಪಕ್ಷ ಉತ್ತರ ಪ್ರದೇಶದಲ್ಲಿ ಅಧಿಕಾರಕ್ಕೇರುವಷ್ಟು ಪ್ರಬಲವಾಯಿತು. ಆದರೆ ಅಧಿಕಾರಕ್ಕೇರಲು ಅದು ನಡೆಸಿದ 'ಸೋಶಿಯಲ್ ಇಂಜನೀಯರಿಂಗ್' ಪ್ರಯೋಗದಲ್ಲಿ ತಾತ್ಕಾಲಿಕ ಮುನ್ನಡೆ ಪಡೆಯಿತು. ಬಿ.ಎಸ್.ಪಿ. ಜೊತೆ ಅಧಿಕಾರ ಹಂಚಿಕೊಂಡ ಮನುವಾದಿ ಬಿ.ಜೆ.ಪಿ., ಅದರ ಲಾಭ ಪಡೆದು ಇಂದು ಏಕಪಕ್ಷೀಯ ಅಧಿಕಾರ ನಡೆಸುತ್ತಿದೆ.

ಬಿ.ಎಸ್.ಪಿ. ಉತ್ತರ ಪ್ರದೇಶದಲ್ಲಿ ಬಿ.ಜೆ.ಪಿ. ಜೊತೆ ಅಧಿಕಾರ ಹಂಚಿಕೊಂಡಿದ್ದರೂ ಸಮಾಜವಾದಿ ಪಕ್ಷದ ಜೊತೆ ಮೈತ್ರಿಗೆ ಮುಂದಾಗಿರಲಿಲ್ಲ. ಇತ್ತೀಚೆಗೆ ನಡೆದ ಲೋಕಸಭೆಯ ಉಪಚುನಾವಣೆಯಲ್ಲಿ ಸಮಾಜವಾದಿ ಪಕ್ಷಕ್ಕೆ ಬೆಂಬಲಿಸಿದ್ದರಿಂದ ಅಲ್ಲಿ ಮನುವಾದಿ ಪಕ್ಷದ ವಿರುದ್ಧ ಗೆಲವು ಸಾಧ್ಯವಾಯಿತು. ಮುಂದಿನ ದಿನಗಳಲ್ಲಿ ಉತ್ತರ ಪ್ರದೇಶದಲ್ಲಿ ದಲಿತ – ಹಿಂದುಳಿದ ವರ್ಗಗಳ ರಾಜಕೀಯ ಮೈತ್ರಿಯನ್ನು ಪ್ರಜ್ಞಾಪೂರ್ವಕವಾಗಿ ಮುನ್ನಡೆಸಿದರೆ ಅಲ್ಪಸಂಖ್ಯಾತರಿಗೂ ಒಂದು ಭರವಸೆ ಮೂಡುತ್ತದೆ. ಎಡಪಂಥೀಯರೂ ಇಂಥ ಮೈತ್ರಿಕೂಟದ ಭಾಗವಾಗಬೇಕು. ಜಾತ್ಯತೀತ, ಪ್ರಗತಿಪರ ಶಕ್ತಿಗಳೆಲ್ಲ ಇಂಥ ಮೈತ್ರಿಕೂಟದ ಬೆಂಬಲಕ್ಕೆ ನಿಂತರೆ ಖಂಡಿತ ಅಂಬೇಡ್ಕರ್ ಅವರ ಆಶಯಗಳನ್ನು ಜಾರಿಗೆ ತರುವ ಮಾರ್ಗ ಗೋಚರಿಸುತ್ತದೆ. ಇದು ಕೇವಲ ಉತ್ತರ ಪ್ರದೇಶಕ್ಕೆ ಸೀಮಿತವಾಗದೆ ಇಡೀ ದೇಶಕ್ಕೆ ವಿಸ್ತರಿಸಬೇಕು.

ಕರ್ನಾಟಕದಲ್ಲಿ ದಲಿತ ಸಂಘಟನೆಗಳಿಗೆ ನಿರ್ದಿಷ್ಟ ರಾಜಕೀಯ ಕಾರ್ಯಕ್ರಮವಿಲ್ಲವಾದರೂ ಈಗ ಒಗ್ಗೂಡಿರುವ ನಾಲ್ಕು ದಲಿತ ಸಂಘಟನೆಗಳ ನಾಯಕರಿಗೆ ಸೈದ್ಧಾಂತಿಕ ಸ್ಪಷ್ಟತೆ ಇದೆ, ಅಂಬೇಡ್ಕರ್ ತತ್ವಗಳಿಗೆ ಬದ್ಧತೆ ಇದೆ, ರಾಜ್ಯದ ಎಡಪಂಥೀಯ, ಜಾತ್ಯತೀತ, ಪ್ರಗತಿಪರ ಸಂಘಟನೆಗಳೊಂದಿಗೆ ಸಂಬಂಧ, ಸಂಪರ್ಕವಿದೆ. ಇದೆಲ್ಲಕ್ಕಿಂತ ಮಿಗಿಲಾಗಿ ಕೋಮುವಾದ ಮತ್ತು ಫ್ಯಾಸಿಸ್ಟ್ ಶಕ್ತಿಗಳ ಅಪಾಯದ ಅರಿವು ಮತ್ತು ಅವುಗಳ ವಿರುದ್ಧ ಹೋರಾಡುವ ಛಲವಿದೆ. ಆದರೆ ಇದು ಕೇವಲ ಸಂಘಟನೆಯ ಚಳುವಳಿಯಾಗದೇ ರಾಜಕೀಯ ಚಳುವಳಿಯಾಗಿ ಪರಿವರ್ತನೆ ಆಗಬೇಕು. ಕಾಂಗ್ರೆಸ್ ಪಕ್ಷ ಕೋಮುವಾದಿ ಅಲ್ಲವಾದರೂ ಬಿ.ಜೆ.ಪಿ.ಯಂತೆಯೇ ಕಾರ್ಪೋರೇಟ್ ಪರವಾದ ಪಕ್ಷ ಎನ್ನುವುದನ್ನು ಮರೆಯಬಾರದು.

ಕರ್ನಾಟಕದಲ್ಲಿ ಬಿ.ಎಸ್.ಪಿ. ಒಂದು ರಾಜಕೀಯ ಪಕ್ಷವಾಗಿ ಬೆಳೆದಿಲ್ಲ. ಈ ಸಲದ ಚುನಾವಣೆಯಲ್ಲಿ ಜನತಾದಳ (ಎಸ್)ದೊಂದಿಗೆ ಮೈತ್ರಿ ಮಾಡಿಕೊಂಡಿದೆ. ಇದರಿಂದ ಎರಡೂ ಪಕ್ಷಗಳಿಗೆ ಪರಸ್ಪರ ಸಹಾಯ ಲಾಭ ಆಗಬಹುದು. ಆದರೆ ರಾಜ್ಯದ ಬಹುತೇಕ ದಲಿತ ಸಂಘಟನೆಗಳು ಬಿ.ಎಸ್.ಪಿ.ಯಿಂದ ಹೊರಗಿವೆ. ಆ ಎಲ್ಲ ಸಂಘಟನೆಗಳ ರಾಜಕೀಯ ನಡೆಯ ಕುರಿತು ಸ್ಪಷ್ಟತೆ ಇಲ್ಲ. ಚಿಂತಕ ದೇವನೂರ ಮಹಾದೇವ ಅವರ ನಾಯಕತ್ವದ ಸ್ವರಾಜ ಇಂಡಿಯಾ ಪಕ್ಷ ರೈತ ಮತ್ತು ದಲಿತ ಸಂಘಟನೆಗಳನ್ನು ಒಗ್ಗೂಡಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದೆ. ಇವೆಲ್ಲ ಚುನಾವಣೆಯ ಸಂದರ್ಭದ ಪ್ರಯತ್ನಗಳಾಗದೇ ದಲಿತ, ರೈತ, ಕಾರ್ಮಿಕ ಮತ್ತು ಎಲ್ಲ ಜನಪರ, ಪ್ರಜಾಸತ್ತಾತ್ಮಕ, ಜಾತ್ಯತೀತ ಶಕ್ತಿಗಳನ್ನು ಒಂದು ಚಳುವಳಿಯ ಭಾಗವಾಗಿ ಒಗ್ಗೂಡಿಸುವ ಪ್ರಯತ್ನವಾಗಬೇಕು. ಎಲ್ಲ ಶೋಷಿತ ಜನಾಂಗದ ಚಳುವಳಿಗಳು ಒಂದು ಸಮಾನ ಹಿತಾಸಕ್ತಿಯ ರಾಜಕೀಯ ಕಾರ್ಯಕ್ರಮ ರೂಪಿಸಿದರೆ ಮಾತ್ರ ಅಂಬೇಡ್ಕರ್ ಅವರು ಕೊನೆಯ ದಿನಗಳಲ್ಲಿ ಕೊಟ್ಟ ಘೋಷಣೆಯನ್ನು ಕಾರ್ಯರೂಪಕ್ಕೆ ತರಲು ಸಾಧ್ಯ.

ಮಾರ್ಚ್ ೧೧ರಂದು ಇನ್ನೊಂದು ಮಹತ್ವದ ಸಮಾವೇಶ ಬೆಂಗಳೂರಿನಲ್ಲಿ ನಡೆಯಿತು. 'ಬಂಡಾಯ ಸಾಹಿತ್ಯ – ನಲವತ್ತರ ಹೆಜ್ಜೆ' ಎಂಬ ಈ ಕಾರ್ಯಕ್ರಮ, ೧೯೭೯ ಮಾರ್ಚ್ ೧೦–೧೧ರಂದು ಆರಂಭವಾಗಿ ರಾಜ್ಯದ ಸಾಹಿತ್ಯ ಮತ್ತು ಸಾಂಸ್ಕೃತಿಕ ರಂಗಕ್ಕೆ ಹೊಸ ದಿಕ್ಕು ತೋರಿಸಿದ ಬಂಡಾಯ ಸಾಹಿತ್ಯ ಸಂಘಟನೆಯ ಅವಲೋಕನವಾಗಿತ್ತು.

ಅಂಬೇಡ್ಕರ್‌ವಾದಿಗಳು, ಮಾರ್ಕ್ಸ್‌ವಾದಿಗಳು, ಲೋಹಿಯಾ ವಾದಿಗಳು, ಗಾಂಧಿವಾದಿಗಳು, ಯಾವ ವಾದಗಳನ್ನೊಪ್ಪದೆಯೂ ಜಾತ್ಯತೀತ, ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಒಪ್ಪುವ ಚಿಂತಕರೆಲ್ಲ ಸೇರಿ ಕಟ್ಟಿದ ಈ ಬಂಡಾಯ ಸಾಹಿತ್ಯ ಸಂಘಟನೆ ಸಹಜವಾಗಿಯೇ ರಾಜ್ಯದ ಎಲ್ಲ ಜನಪರ, ಪ್ರಗತಿಪರ ಚಳುವಳಿಗಳ ಸಾಹಿತ್ಯಿಕ ಸಾಂಸ್ಕೃತಿಕ ಅಭಿವ್ಯಕ್ತಿಯ ವೇದಿಕೆಯಾಗಿತ್ತು. ಸುಮಾರು ಒಂದೂವರೆ ದಶಕಗಳ ಕಾಲ ಜನ ಧ್ವನಿ ಯಾಗಿದ್ದ ಈ ಸಂಘಟನೆ ಕೇವಲ ಸಾಹಿತ್ಯ ಕ್ಷೇತ್ರಕ್ಕೆ ಸೀಮಿತವಾಗದೆ ರೈತ, ದಲಿತ, ಕಾರ್ಮಿಕ, ಮಹಿಳಾ ಹೀಗೆ ಎಲ್ಲ ಜನಪರ ಚಳುವಳಿಗಳ ಭಾಗವಾಗಿತ್ತು. ಆ ಎಲ್ಲ ಚಳುವಳಿಗಳ ಆಶಯಗಳನ್ನು ಸಾಹಿತ್ಯಿಕವಾಗಿ ಅಭಿವ್ಯಕ್ತಿಸಿತ್ತು.



ಇಡೀ ದೇಶದಲ್ಲಿ ಬಂಡಾಯ ಸಾಹಿತ್ಯ ಚಳುವಳಿಗೆ ಚಾರಿತ್ರಿಕ ಮಹತ್ವವಿದೆ. ಅದು ಒಂದೂವರೆ ದಶಕದ ಕಾಲ ಕ್ರಿಯಾಶೀಲವಾಗಿ, ಸಂಘಟನೆಯಾಗಿ, ಸಾಹಿತ್ಯ ವೇದಿಕೆಯಾಗಿ ಉಂಟುಮಾಡಿದ ಪರಿಣಾಮ ಇಂದಿಗೂ ಕನ್ನಡ ಸಾಹಿತ್ಯ ಮತ್ತು ಸೃಜನಶೀಲಕ್ಷೇತ್ರದಲ್ಲಿ ಒಂದು ಮಾದರಿಯಾಗಿಯೇ ಉಳಿದಿದೆ. ಇಂದು ಸಂಘಟನೆ ಕ್ರಿಯಾಶೀಲವಾಗಿಲ್ಲ. ಆದರೆ ಅದರ ಆಶಯಗಳು ಚಲನೆಯಲ್ಲಿವೆ. ಅಂದಿನ ಸಾಹಿತ್ಯ ಕ್ಷೇತ್ರದ ಎದುರಿಗಿದ್ದ ಸವಾಲುಗಳು ಇಂದು ಇನ್ನೂ ವಿಸ್ತೃತವಾಗಿವೆ. 'ಖಡ್ಗ ವಾಗಲಿ ಕಾವ್ಯ : ಜನರ ನೋವಿಗೆ ಮಿಡಿವ ಪ್ರಾಣಮಿತ್ರ', 'ಬಂಡಾಯ ಒಂದು ಮನೋಧರ್ಮ, ಮಾನವೀಯತೆ ಒಂದು ಮೌಲ್ಯ' ಎಂಬ ಬಂಡಾಯ ಸಾಹಿತ್ಯ ಸಂಘಟನೆಯ ಅಂದಿನ ಘೋಷಣೆಗಳು ಇಂದಿಗೂ ಪ್ರಸ್ತುತ ಮತ್ತು ಅಂದಿಗಿಂತ ಇಂದು ಹೆಚ್ಚು ಪ್ರಸ್ತುತ. ಸಮಾವೇಶದ ಉದ್ಘಾಟನಾ ಸಮಾರಂಭದಲ್ಲಿ ನಾಡೋಜ ಬರಗೂರು ರಾಮಚಂದ್ರಪ್ಪನವರು ಇಂದು 'ಜಾಗತೀಕರಣ ಮತ್ತು ದೇಗುಲೀಕರಣ' ನಮ್ಮ ಮುಂದಿರುವ ದೊಡ್ಡ ಸವಾಲು, ಮತ್ತೆ ಬಂಡಾಯ ಸಾಹಿತ್ಯ ಸಂಘಟನೆ ಕ್ರಿಯಾಶೀಲವಾಗಿ ಈ ಸವಾಲನ್ನು ಎದುರಿಸಬೇಕಿದೆ ಎಂದರು. ನಿಜ, ಬಂಡಾಯ ಕೇವಲ ಒಂದು ಪಂಥವಲ್ಲ ಅದೊಂದು ಮನೋಧರ್ಮ. ಬಂಡಾಯ ಮನೋಧರ್ಮಕ್ಕೆ ಪರ್ಯಾಯವಿರುವುದಿಲ್ಲ. ಇಂದಿನ ಹೊಸಪೀಳಿಗೆಯ ಮಧ್ಯೆ ಇರುವ ವ್ಯವಸ್ಥೆಯ ವಿರುದ್ಧದ ಬಂಡಾಯ ಮನೋಭಾವವನ್ನು ಸಂಘಟಿಸ ಬೇಕಿದೆ. ಬಂಡಾಯ ಸಾಹಿತ್ಯ ಬೇರೆ ಬೇರೆ ರೂಪದಲ್ಲಿದೆ, ಈಗ ಬೇಕಿರುವುದು ಸಂಘಟನೆ. ೪೦ ವರ್ಷಗಳಿಂದ ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿದ್ದ ರಾಜ್ಯದ ಚಿಂತಕರು, ಸಾಹಿತಿಗಳು ಒಕ್ಕೊರಲಿನಿಂದ ಹೇಳಿದ್ದು ಮತ್ತೆ ನಾವು ಕ್ರಿಯಾಶೀಲರಾಗಬೇಕು. ಯುವಪೀಳಿಗೆಯ ನಾಯಕತ್ವದಲ್ಲಿ ಬಂಡಾಯದ ಘೋಷಣೆ ಮತ್ತೆ ಮತ್ತೆ ಮೊಳಗಬೇಕು ಎಂದು.

ಇದು ಕಾಲದ ಕರೆ, ಕಾರ್ಪೋರೇಟೀಕರಣ ತನ್ನ ರಕ್ಷಣೆಗಾಗಿ, ಜನರ ದಿಕ್ಕು ತಪ್ಪಿಸಲು ಫ್ಯಾಸಿಸ್ಟ್ ಶಕ್ತಿಗಳನ್ನು ಬೆಳೆಸುತ್ತದೆ. ಇದಕ್ಕೆ ಬಲಿಯಾಗುವ ಎಲ್ಲ ಶಕ್ತಿಗಳು ಒಂದಾಗಬೇಕು. ಅಂಬೇಡ್ಕರ್ ಅವರು ಹೇಳಿದ ಹಾಗೆ ಶೋಷಿತರ ವಿಮೋಚನೆಯಾಗಬೇಕು. ಶೋಷಿತರ ತಳಪಾಯದಲ್ಲಿರುವವರು ದಲಿತರು. ಶ್ರೇಣೀಕೃತ ವ್ಯವಸ್ಥೆಯಲ್ಲಿ ಮೇಲ್‌ಸ್ತರದವರ ಭಾರ ಅತ್ಯಂತ ಕೆಳಗಿರುವವರ ಮೇಲೆ ಬಿದ್ದಿರುತ್ತದೆ. ಸಮಾಜದ ಬದಲಾವಣೆಯ ಅವಶ್ಯಕತೆ ಎಲ್ಲರಿಗಿಂತ ಹೆಚ್ಚು ಅವಶ್ಯಕವಾಗಿರುವುದು, ತುರ್ತಾಗಿ ಆಗ ಬೇಕಿರುವುದು ದಲಿತರಿಗೆ. ದಲಿತರ ವಿಮೋಚನೆಯ ಹೋರಾಟ ಎಲ್ಲ ಶೋಷಿತ ವರ್ಗಗಳ ಜೊತೆಗೂಡಿ ಎಲ್ಲ ರೀತಿಯ ಶೋಷಣೆಗಳ ವಿಮೋಚನೆಗಾಗಿ ನಡೆಸುವ ಹೋರಾಟ ವಾಗಬೇಕಿದೆ. ಡಾ॥ ಬಿ. ಆರ್. ಅಂಬೇಡ್ಕರ್ ಅವರು ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ಕೊಟ್ಟ ರಾಜಕೀಯ ಸಂದೇಶ ಅದು.

**ಶ್ರೀಸುಮಿತ್ರಾಸುತ ಅಗಸಬಾಳ**
೧೬೭ ಮತ್ತು ೧೬೮, ೧೧ನೇ ಮುಖ್ಯರಸ್ತೆ, ೩ನೇ ಘಟ್ಟ
ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು – ೫೬೦ ೦೫೮

# ಎಚ್. ಎಸ್. ದೊರೆಸ್ವಾಮಿ ಎಂಬ ಹರಿಯುವ ನದಿ, ಆಲದ ಮರ!

**ಮಲ್ಲಿಗೆ ಸಿರಿಮನೆ**

ನಮ್ಮ ನಡುವಿನ ಹಿರಿಜೀವ ಶ್ರೀ ಎಚ್. ಎಸ್. ದೊರೆಸ್ವಾಮಿಯವರಿಗೆ ಇದೇ ಏಪ್ರಿಲ್ ೧೦ಕ್ಕೆ ೧೦೦ ವರ್ಷ ತುಂಬಿದೆ. ಅವರನ್ನು ಸ್ವಾತಂತ್ರ್ಯ ಸೇನಾನಿ, ಹಿರಿಯ ಹೋರಾಟಗಾರ, ಅದಮ್ಯ ಚೇತನ, ಪ್ರಾಮಾಣಿಕತೆಯ ಸಾಕಾರ ಮೂರ್ತಿ, ಗಾಂಧಿವಾದಿ, ಸ್ಫೂರ್ತಿಯ ಸಲೆ... ಇನ್ನೂ ಮುಂತಾದ ಅನೇಕಾನೇಕ ವಿಶೇಷಣಗಳಿಂದ ಸರಿಯಾಗಿಯೇ ವರ್ಣಿಸಬಹುದು. ಆದರೆ, ಅವರೊಂದಿಗೆ ಕೆಲವು ಹೋರಾಟಗಳ ಸಂದರ್ಭದಲ್ಲಿ ಒಡನಾಡಿದ ಕಿರಿಯಳಾಗಿ ನನ್ನ ಮಟ್ಟಿಗೆ ಅವರು ಯಾವಾಗಲೂ ತಾಯಿ ಕರುಳಿನ, ನಿಖರ ನಿಲುವಿನ, ಸಮಚಿತ್ತದ ನಲ್ಮೆಯ ಹಿರಿಯ ಜೀವ; ತರ್ಕಕ್ಕಿಂತ ಹೆಚ್ಚು ಭಾವನೆಗಳಿಗೆ, ಲೆಕ್ಕಾಚಾರಕ್ಕಿಂತ ಹೆಚ್ಚು ನೈತಿಕ ಶಕ್ತಿಗೆ ಬೆಲೆಕೊಡುವ, ಅಪಾರ ಆತ್ಮವಿಶ್ವಾಸದ ಅಂತಃಸತ್ವದ ಧೀರೋದಾತ್ತ ಹೋರಾಟಗಾರ ! ಇಂತಹವರೊಬ್ಬರೊಂದಿಗೆ ಒಡನಾಡುವ, ಜೊತೆಗೂಡಿ ಕೆಲಸ ಮಾಡುವ ಅವಕಾಶ ದೊರೆತಿದ್ದು ನಮ್ಮಗಳ ಕಲಿಕೆಗೆ ಅನಂತ ಅವಕಾಶವನ್ನು ಒದಗಿಸಿದಂತಾಗಿದೆ. ನೂರು ವರ್ಷಗಳ ಅವರ ಈ ಸಾರ್ಥಕವಾದ ಬಾಳ್ವೆ ನಮ್ಮೆದುರಿನ ಆಗಸದ ಬೆಳ್ಳಿಗೆರೆಯಂತೆ ಸದಾ ಮಿನುಗುತ್ತಿರುತ್ತದೆ; ನಮಗೆ ಮುಂದಿನ ಪಯಣದ ದಾರಿ ತೋರುತ್ತದೆ.

ಎಚ್. ಎಸ್. ದೊರೆಸ್ವಾಮಿಯವರನ್ನು ಮೊದಲು ಭೇಟಿಯಾದಾಗ, ಅವರು ಕರ್ನಾಟಕದಲ್ಲಿ ತಳವೂರಲು ಪ್ರಯತ್ನಿಸುತ್ತಿದ್ದ ವಿದೇಶೀ ಬಹುರಾಷ್ಟ್ರೀಯ ಕಂಪೆನಿಗಳ ವಿರುದ್ಧ ಸಮರ ಸಾರಿದ್ದರು. ಸರ್ಕಾರಗಳ ಜೊತೆಗೆ ಒಳ ಒಪ್ಪಂದಗಳನ್ನು ಮಾಡಿಕೊಂಡು ಕರ್ನಾಟಕದ ನಾಡು ನುಡಿಯ ಮೇಲೆ ದಾಳಿ ನಡೆಸಲು ಸನ್ನದ್ಧರಾಗಿದ್ದ ಇಂತಹ ಕಂಪೆನಿಗಳ ಇಡೀ ಅಸ್ತಿತ್ವವನ್ನೇ ಪ್ರಶ್ನಿಸುತ್ತಾ ದೊರೆಸ್ವಾಮಿಯವರು ಮಾತನಾಡುತ್ತಿದ್ದರು. ತೊಂಬತ್ತರ ದಶಕದ ಆರಂಭವಿನ್ನೂ ಜಾಗತೀಕರಣ ದೇಶದೊಳಗೆ ಅಡಿಯಿಡುತ್ತಿದ್ದ ಕಾಲ. ಅದರ ಪರ ವಿರೋಧ ಚರ್ಚೆಗಳು ಮೊದಲಾಗಿದ್ದವಷ್ಟೇ. ಜಾಗತೀಕರಣವನ್ನೂ, ಖಾಸಗಿ ಕಂಪೆನಿಗಳ ಪಾರಮ್ಯವನ್ನೂ ಬೆಂಬಲಿಸುವ ಚಿಂತನಾಧಾರೆ ಪ್ರಭುತ್ವದ ಬೆಂಬಲವಿದ್ದರೂ ತನ್ನ ಮಾತುಗಳನ್ನು ದಾಖಲಿಸಲು ಪರದಾಡುತ್ತಿತ್ತು. ಅಂತಹ ವ್ಯಾಕರಣವೊಂದು ಮೊದಲ್ಗೊಳ್ಳುತ್ತಾ ತನ್ನೊಂದಿಗೆ ಬಹಳಷ್ಟು ದ್ವಂದ್ವಗಳನ್ನೂ ವೈರುಧ್ಯಗಳನ್ನೂ ಗೊಂದಲಗಳನ್ನೂ ಹೊತ್ತು ತಂದಿತ್ತು. ಅಂತಹ ಸಂದರ್ಭದಲ್ಲಿ ದೊರೆಸ್ವಾಮಿಯವರು ಮತ್ತು ಅಂತಹ ಹಿರಿಯ ಕೆಲವು ಹೋರಾಟಗಾರರ ಮಧ್ಯಪ್ರವೇಶ ಆ ಸನ್ನಿವೇಶಕ್ಕೆ ಅತ್ಯಗತ್ಯವಾಗಿದ್ದ ಸ್ಪಷ್ಟತೆಯನ್ನು ಕೊಡುತ್ತಿತ್ತು. ಅಂತಹ ಒಂದು ಪತ್ರಿಕಾಗೋಷ್ಠಿಯಲ್ಲಿ ದೊರೆಸ್ವಾಮಿ ಅವರನ್ನು ಉದ್ದೇಶಿಸಿ 'ಹಾಗಾದರೆ ಖಾಸಗಿ ಕಂಪೆನಿಗಳು ಬರೋದೇ ಬೇಡ ಅಂದರೆ ಯುವಕರಿಗೆ ಉದ್ಯೋಗ ಸಿಗೋದು ಬೇಡವಾ? ಸ್ಪರ್ಧೆ ಇಲ್ಲದಿದ್ದರೆ ಸಾರ್ವಜನಿಕ ವಲಯದಲ್ಲಿ ಭ್ರಷ್ಟಾಚಾರ ಹೆಚ್ಚಾಗುತ್ತದೆ... ಆದ್ದರಿಂದ ಜಾಗತೀಕರಣ ಮತ್ತು ಖಾಸಗೀಕರಣ ಒಳ್ಳೆಯದೇ ಅಲ್ಲವಾ?' ಎಂಬ ಪ್ರಶ್ನೆ ತೂರಿಬಂತು. ದೊರೆಸ್ವಾಮಿಯವರು ಒಂದು ಕ್ಷಣವೂ ತಡವರಿಸದೆ, 'ಸ್ವಾತಂತ್ರ್ಯ ಚಳವಳಿ ಅಂದರೆ ಏನು, ಹೇಗೆ ನಡೆಯಿತು ಅಂತ ಗೊತ್ತಾ ನಿಮಗೆ?' ಎಂದು ಮರು ಪ್ರಶ್ನೆ ಎಸೆದರು. 'ಖಾಸಗಿ ಕಂಪೆನಿಗಳು ಬರೋದು ನಿಮಗೆ ಲಾಭ ಮಾಡಿಕೊಡೋಕೆ ಅಲ್ಲ, ತಮಗೆ ಲಾಭ ಮಾಡಿಕೊಳ್ಳೋಕೆ. ಸ್ವಾತಂತ್ರ್ಯಪೂರ್ವದಲ್ಲಿ ಅಂತಹ ಒಂದೇ ಒಂದು ಕಂಪೆನಿ ಬಂದು ನಮ್ಮನ್ನು ದಾಸ್ಯಕ್ಕೆ ತಳ್ಳಿದ್ದು, ಇನ್ನೂ ಆ ಮನಸ್ಥಿತಿಯಿಂದ ಪೂರ್ತಿ ನಾವು ಹೊರಗೆ ಬಂದಿಲ್ಲ ಅನ್ನೋದಕ್ಕೆ ನಿಮ್ಮ ಪ್ರಶ್ನೆೇ ಸಾಕ್ಷಿ. ಆ ಲೂಟಿಕೋರ ಕಂಪೆನಿಯನ್ನು ದೇಶದಿಂದ ಓಡಿಸೋಕೆ ಸಾಕಷ್ಟು ಭಾರತೀಯರು ತ್ಯಾಗ ಬಲಿದಾನ ಮಾಡಬೇಕಾಯ್ತು. ಇವತ್ತೂ ಅಷ್ಟೇ, ಅವರು ಬಂದರೆ ನಮ್ಮ ನೆಲ, ಜಲ, ಸಂಪತ್ತಿನ ಲೂಟಿಗಾಗಿ ಬರ್ತಾರೆಯೇ ಹೊರತು ಇನ್ನೇನಕ್ಕೂ ಅಲ್ಲ. ಅಂತಹದ್ದನ್ನು ಒಪ್ಪೋಕೆ ಸಾಧ್ಯವಿಲ್ಲ, ನೀವೆಲ್ಲ ಯುವಕರು ಬೇಕಾದರೆ ಸಹಿಸಿಕೊಂಡು ಸುಮ್ಮನಿರಿ, ನಾನು ಮಾತ್ರ ಹೋರಾಟ ಮಾಡುವವನೇ, ಒಬ್ಬನೇ ಆದರೂ ಪರ್ವಾಗಿಲ್ಲ, ಅವರ ವಿರುದ್ಧ ಹೋರಾಟ ಕಟ್ಟಿಯೇ ಸಿದ್ಧ!' ಎಂದು ಕಂಚಿನ ಕಂಠದಿಂದ ಘೋಷಣೆ ಮಾಡಿದರೆ, ಪತ್ರಕರ್ತರ ಭವನ ಅವರ ದೃಢ ನಿರ್ಧಾರವನ್ನು ಪ್ರತಿಧ್ವನಿಸಿದಂತೆನಿಸಿತ್ತು! ಆಗ ರವೀಂದ್ರನಾಥ ಟಾಗೋರರ 'ಇನ್ಯಾರೂ ಜೊತೆಗೂಡದಿದ್ದರೂ, ಒಬ್ಬನೇ ಆದರೂ, ನಡೆಯುತ್ತಿರು ಮುನ್ನಡೆಯುತ್ತಲೇ ಇರು' ಎಂಬ ಕವಿವಾಣಿ ನೆನಪಾಯಿತು.

ದೊರೆಸ್ವಾಮಿಯವರನ್ನು ಹತ್ತಿರದಿಂದ ನೋಡುತ್ತಾ ಕಲಿತ ಮತ್ತೊಂದು ಬಹುಮುಖ್ಯ ಪಾಠ 'ಮನುಷ್ಯ ನಿಂತ ನೀರಿನಂತಲ್ಲ, ಹರಿಯುವ ನದಿಯಂತಿರಬೇಕು; ಚಿಂತನೆಗಳು ಹೊಸತಾಗಿರಬೇಕು' ಎಂಬ ಚಲನಶೀಲತೆಯ ತತ್ವ. ಸದಾ



**ಶ್ರೀ ಎಚ್. ಎಸ್. ದೊರೆಸ್ವಾಮಿ ಅವರಿಗೆ ನೂರರ ಸಂಭ್ರಮ**

ಸಮಕಾಲೀನ ಸವಾಲುಗಳಿಗೆ ಮುಖಾಮುಖಿಯಾಗುತ್ತಾ, ಹೊಸ ವಾಸ್ತವಗಳನ್ನೂ, ವಿಚಾರಗಳನ್ನೂ ಅರಗಿಸಿಕೊಳ್ಳುತ್ತಾ, ಅವುಗಳಿಗೆ ತಮ್ಮ ಬದುಕಿನ ತಾತ್ವಿಕತೆಯೊಳಗೆ ಸ್ಥಳಾವಕಾಶ ಮಾಡಿಕೊಡುತ್ತಾ, ಸದಾ ವಿಸ್ತರಿಸುತ್ತಲೇ ಹೋಗುವ ಅವರ ವ್ಯಕ್ತಿತ್ವ ನೋಡು ನೋಡುತ್ತಲೇ ನಮಗೆ ಎಷ್ಟೆಲ್ಲವನ್ನೂ ಕಲಿಸಿಕೊಟ್ಟಿತ್ತು! ಸ್ವಾತಂತ್ರ್ಯ ಚಳವಳಿಯ ಮೂಲಭೂತ ಆಶಯ ಕೇವಲ ಬ್ರಿಟಿಷರಿಂದ ಬಿಡುಗಡೆಯಷ್ಟೇ ಅಲ್ಲ, ಸಮಾನತೆಯ ಸಮಾಜ ನಿರ್ಮಾಣವೂ ಹೌದು ಎಂಬ ನಂಬಿಕೆ ದೊರೆಸ್ವಾಮಿಯವರದ್ದು. ಆದರೆ ಭಾರತ ರಾಷ್ಟ್ರೀಯ ಕಾಂಗ್ರೆಸ್ ನೇತೃತ್ವದ ರಾಷ್ಟ್ರೀಯ ಚಳವಳಿಯಲ್ಲಿ ಜಾತಿಪ್ರಶ್ನೆ, ವರ್ಗ ಸಮಾನತೆ, ಲಿಂಗ ತಾರತಮ್ಯದ ನಿವಾರಣೆಯ ಕುರಿತ ಚಿಂತನೆಗಳು ಮುನ್ನೆಲೆಯಲ್ಲಿರಲಿಲ್ಲ ಎಂಬ ಚರ್ಚೆ ನಡೆಯುವಾಗ ಅದನ್ನು ಬಹಳ ಸರಳವಾಗಿ ನೇರವಾಗಿ ಸ್ವೀಕರಿಸುತ್ತಿದ್ದರು. "ಹೌದಪ್ಪ, ಆಗಿನ ಸಂದರ್ಭ ಹಾಗಿತ್ತು. ಬ್ರಿಟಿಷರಿಗಿಂತ ದೊಡ್ಡ ಅಪಾಯ ಏನೂ ಇಲ್ಲ ಈ ದೇಶಕ್ಕೆ ಅಂತ ಅನಿಸುತ್ತಿತ್ತು; ಆ ಕಾಲಕ್ಕೆ ಗಾಂಧೀಜಿಯವರಿಗೆ ಬಹುಶಃ ಅಂಬೇಡ್ಕರ್ ಎತ್ತುತ್ತಿದ್ದ ಪ್ರಶ್ನೆಯ ಆಳ ಅಗಲ ಅರ್ಥವಾಗಿಲ್ಲದೆ ಇದ್ದಿರಬಹುದು, ಆದರೆ ನಾವು ಯಾಕೆ ನಲವತ್ತರ ದಶಕದಲ್ಲಿ ನಿಲ್ಲಬೇಕು? ಗಾಂಧಿವಾದಿಗಳೆನಿಸಿಕೊಂಡವರು ಇವತ್ತು ಅಂಬೇಡ್ಕರರನ್ನೂ ಅರ್ಥ ಮಾಡಿಕೊಳ್ಳಬೇಕು, ಲೋಹಿಯಾರನ್ನೂ ಓದಬೇಕು" ಎಂದು ಈ ತಲೆಮಾರಿನ ಕಾರ್ಯಕರ್ತರ ಆಲೋಚನೆಗಳನ್ನು ತಿದ್ದುತ್ತಲೇ ಬಂದರು. ಜಾತಿ ವ್ಯವಸ್ಥೆ ಮತ್ತು ಅದರ ಕ್ರೌರ್ಯವನ್ನು ಖಚಿತ ಮಾತುಗಳಲ್ಲಿ ವಿರೋಧಿಸುವ, ಕೋಮುವಾದವು ಈ ದೇಶದ ಅಸ್ತಿತ್ವಕ್ಕೇ ಪೆಟ್ಟು ಎನ್ನುವ ಆಳವಾದ ತಿಳುವಳಿಕೆ ಅವರದ್ದು. ಇತ್ತೀಚೆಗೆ, ಗೌರಿ ಲಂಕೇಶ್‌ರ ಕೊಲೆಯಾದಾಗ, 'ಈ ದೇಶದ ಮುಂದಿರುವ ಬಹುದೊಡ್ಡ ಅಪಾಯ ಫ್ಯಾಸಿಸಂ ಆಗಿದೆ; ಆದ್ದರಿಂದ ದೇಶದ ಸ್ವಾತಂತ್ರ್ಯವನ್ನು ಪ್ರೀತಿಸುವ, ಇದನ್ನು ಪ್ರಜಾತಂತ್ರವನ್ನಾಗಿ ಉಳಿಸಿಕೊಳ್ಳಬಯಸುವ ಪ್ರತಿಯೊಬ್ಬರೂ ಇಂದು ಕೋಮುವಾದಿ ಫ್ಯಾಸಿಸ್ಟ್ ಪಕ್ಷವಾದ ಬಿಜೆಪಿಯನ್ನು ವಿರೋಧಿಸಬೇಕು' ಎಂಬ ಕರೆ ಕೊಡುವಷ್ಟರ ಮಟ್ಟಿನ ಅವರ ಸೈದ್ಧಾಂತಿಕ ಖಚಿತತೆ ನಿಜಕ್ಕೂ ಅಪರೂಪವೇ ಸರಿ.

ಭೂಮಿ ಪ್ರಶ್ನೆಯನ್ನು ಕುರಿತ ಅವರ ನಿಲುವಂತೂ ಅವರೆಷ್ಟು ಆಧುನಿಕ ಮನೋಭಾವದ, ಅಪ್‌ಡೇಟ್ ಆಗಿದ್ದ ಹೋರಾಟಗಾರರು ಎಂಬುದನ್ನು ಖಚಿತಪಡಿಸಿದೆ. ವಿನೋಬಾ ಭಾವೆಯವರ ಭೂದಾನ ಚಳವಳಿಯ ಬಗ್ಗೆ ಅಪಾರ ಗೌರವಾದರಗಳನ್ನು ಇಟ್ಟುಕೊಂಡಿದ್ದ ಸಂದರ್ಭದಲ್ಲೇ ಇಂದು ಕರ್ನಾಟಕದ ಬಡವರ ಭೂಮಿ ಹಕ್ಕಿನ ಪ್ರಶ್ನೆಯನ್ನು ಒಂದು ಆಂದೋಲನವಾಗಿ ರೂಪಿಸಬೇಕೆಂಬ ಬಹುದೊಡ್ಡ ಆಗ್ರಹ ಅವರಿಂದಲೆ ಹುಟ್ಟಿದ್ದು! ಬಡಜನರಿಗೆ ಬದುಕಿನ ಮೂಲಭೂತ ಅವಶ್ಯಕತೆಯಾಗಿ ಕನಿಷ್ಠ ಪ್ರಮಾಣದ ಭೂಮಿ ಇರಬೇಕು ಮತ್ತು ಎಲ್ಲರಿಗೂ ಭೂಮಿ ಹಕ್ಕು ದೊರೆಯುವಂತೆ ನೋಡಿಕೊಳ್ಳುವುದು ಆಳುವವರ ಕರ್ತವ್ಯ ಎಂಬ, ಒಂದಿನಿತೂ ಗೊಂದಲ ಇಲ್ಲದ ಸ್ಪಷ್ಟ ಕಣ್ಣೋಟ ಅವರದ್ದು. ಭೂಮಿ ಮತ್ತು ವಸತಿ ಹಕ್ಕು ವಂಚಿತರ ಹೋರಾಟ ಸಮಿತಿಯು, ಕರ್ನಾಟಕದ ಬಡಜನರ ಭೂಮಿ ಪ್ರಶ್ನೆಯನ್ನು ಎತ್ತಿಕೊಂಡು ಹೋರಾಟ ಆರಂಭಿಸುವುದರಲ್ಲಿ ಮತ್ತು ಸರ್ಕಾರವು ಈ ಹೋರಾಟದ ಬಹುಮುಖ್ಯವಾದ ಮೂರು ಹಕ್ಕೊತ್ತಾಯಗಳನ್ನು ಈಡೇರಿಸುವಂತಾಗುವುದರಲ್ಲಿ ದೊರೆಸ್ವಾಮಿಯವರ ಒತ್ತಾಸೆ, ನಾಯಕತ್ವ ಮತ್ತು ಪ್ರಾಣವನ್ನೇ ಪಣಕ್ಕಿಟ್ಟಂತಹ ಕಠಿಣ ಶ್ರಮವೇ ಕೀಲಕ ಪಾತ್ರ ವಹಿಸಿದ್ದು. ಮುಖ್ಯಮಂತ್ರಿಯಿಂದ ಹಿಡಿದು ದೊಡ್ಡ ಅಧಿಕಾರಿಗಳು ಯಾರೇ ಇರಲಿ, ದೊರೆಸ್ವಾಮಿಯವರದ್ದು ಒಂದೇ ವಾದ; "ಪ್ರತೀ ಕುಟುಂಬಕ್ಕೂ ಐದು ಎಕರೆ ಭೂಮಿ ಬೇಕೇಬೇಕು; ಅದನ್ನು ಸರ್ಕಾರ ಕೊಡದೆ ಇನ್ನು ಯಾರು ಕೊಡುತ್ತಾರೆ? ನಿಮ್ಮಲ್ಲಿ ಭೂಮಿ ಇಲ್ಲ ಅನ್ನುವವರು ದೊಡ್ಡ ಬಂಡವಾಳಿಗರಿಗೆ ಸಾವಿರಗಟ್ಟಲೆ ಎಕರೆ ಭೂಮಿ ಕೊಡುತ್ತೀರಿ, ರಿಯಲ್ ಎಸ್ಟೇಟ್ ಕುಳಗಳು, ಎಸ್ಟೇಟ್ ದೊರೆಗಳು ಒತ್ತುವರಿ ಮಾಡಿಕೊಂಡಿರುವ ಭೂಮಿ ಬಿಡಿಸಿಕೊಂಡು ಬಡವರಿಗೆ ಕೊಟ್ಟರೆ ಸಾಕು, ಸಮೃದ್ಧ ಕರ್ನಾಟಕ ಕಟ್ಟಬಹುದು." ಈ ವಾದ ಪ್ರಾಯೋಗಿಕವೋ ಅಲ್ಲವೋ ಎಂಬ ಬಗ್ಗೆ ಅವರು ಯೋಚಿಸಿದವರೇ ಅಲ್ಲ; ಇದು ನ್ಯಾಯ ಹೌದೋ ಅಲ್ಲವೋ ಎಂಬುದಷ್ಟೇ ಅವರ ಕಾಳಜಿಯಾಗಿತ್ತು; ಇದಕ್ಕಾಗಿ ನಿರಂತರವಾಗಿ ಎರಡು ವರ್ಷ ಶ್ರಮಿಸಿದರು. ಆಗಾಗ ನಡೆಸಿದ ಹೋರಾಟಗಳಲ್ಲದೆ, ಸತತ ೧೮ ದಿನಗಳ ಧರಣಿ ಸತ್ಯಾಗ್ರಹದ ನಂತರ ಭೂಮಿ ಹಕ್ಕಿನ ಕುರಿತಾದ ಬಹು ಮುಖ್ಯವಾದ ಕೆಲವು ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಒಪ್ಪಿಗೆಕೊಟ್ಟಾಗ, ಸತ್ಯಾಗ್ರಹದ ಸ್ಥಳದಲ್ಲಿದ್ದ ಭೂಮಿ ವಸತಿ ವಂಚಿತ ಶೋಷಿತ ಜನತೆ, ತಮ್ಮ ಮನೆಯ ಹಿರಿಯರಲ್ಲೊಬ್ಬರೇನೋ ಎಂಬಷ್ಟು ಪ್ರೀತಿಯಿಂದ ಅಭಿಮಾನದಿಂದ ದೊರೆಸ್ವಾಮಿಯವರನ್ನು ಅಭಿನಂದಿಸುತ್ತಿದ್ದರು. ಅದನ್ನು ನೋಡಿದರೆ ಮನಸ್ಸು ತುಂಬಿ ಬರುತ್ತಿತ್ತು. 'ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎಂಬುದಕ್ಕೆ ಪ್ರಾತ್ಯಕ್ಷಿಕೆಯಂತಿದ್ದ ಈ ಹಿರಿಯ ಚೇತನ, ಹೇಗಿರಬೇಕು ಎಂಬುದನ್ನು ಹೇಳುತ್ತಿದ್ದುದಲ್ಲ; ಬದುಕಿ ತೋರಿಸುತ್ತಿದ್ದಾರೆ!!




ಅವರ ಕ್ರಿಯಾಶೀಲತೆಯ ವ್ಯಾಪ್ತಿಯೂ ತುಂಬಾ ವಿಸ್ತಾರವಾದದ್ದು. ಸ್ವಾತಂತ್ರ್ಯಪೂರ್ವದಲ್ಲಿ ಸ್ವಾತಂತ್ರ್ಯ ಚಳವಳಿ ಅವರನ್ನು ಹೋರಾಟದ ಕಣಕ್ಕೆ ಕರೆತಂದಿತು ಮತ್ತು ಆ ಸಂದರ್ಭದ ಎಲ್ಲ ಬಗೆಯ ಅನುಭವಗಳೂ ಮುಂದಿನ ದಿನಗಳ ನಿತ್ಯ ನಿರಂತರ ಹೋರಾಟದ ಬದುಕಿಗೆ ಬೇಕಾದ ಅಡಿಪಾಯವನ್ನಿಟ್ಟವೆನಿಸುತ್ತದೆ. ಆದರೆ, ಆ ನಂತರದಲ್ಲಿ ಅವರೇ ಕೊಟ್ಟ ಮಾಹಿತಿಯ ಪ್ರಕಾರ ಸುಮಾರು ೪೦ಕ್ಕೂ ಹೆಚ್ಚು ಬಗೆಯ ಚಳವಳಿಗಳಲ್ಲಿ ತೊಡಗಿದ್ದವರು ದೊರೆಸ್ವಾಮಿಯವರು. ಭೂದಾನ ಪಾದಯಾತ್ರೆಯಲ್ಲಿ ಭಾಗವಹಿಸಿದ ಅನುಭವಗಳು, ಸ್ವದೇಶಿ ಚಳವಳಿ ಮತ್ತು ನಂತರದಲ್ಲಿ ಬಹುರಾಷ್ಟ್ರೀಯ ಕಂಪೆನಿಗಳ ವಿರುದ್ಧದ ಹೋರಾಟ, ಪೌರವಾಣಿ ಪತ್ರಿಕೆಯ ಸ್ಥಾಪನೆ, ಅದನ್ನು ಭೂಗತವಾಗಿಯೂ ನಡೆಸಬೇಕಾಗಿ ಬಂದಾಗ ಹಿಂಜರಿಯದೆ ಮುನ್ನಡೆಸಿದ್ದು, ಗ್ರಾಮಸ್ವರಾಜ್ಯ ಮತ್ತು ಪಂಚಾಯತಿಗಳ ಕುರಿತ ಪ್ರಯತ್ನಗಳು, ಸರ್ವೋದಯ ಸಂಘಟನೆಯ ಕಾರ್ಯಚಟುವಟಿಕೆಗಳು, ಖಾದಿ ಗ್ರಾಮೋದ್ಯೋಗ ಆಂದೋಲನ, ಗಾಂಧಿ ಭವನದ ಜೊತೆಗಿನ ಕೆಲಸಗಳು, ಕನ್ನಡ ಪುಸ್ತಕ ಸಂಘಟನೆ ಮತ್ತು ಮಾರಾಟದ ಪ್ರಯತ್ನಗಳು, ಸಹಕಾರ ತತ್ವದಲ್ಲಿ ನಂಬಿಕೆಯಿಟ್ಟು ಸಹಕಾರಿ ಬ್ಯಾಂಕ್‌ನ ಸ್ಥಾಪನೆ, ತುರ್ತು ಪರಿಸ್ಥಿತಿಯ ವಿರುದ್ಧದ ಹೋರಾಟ, ಕನ್ನಡ ಚಳವಳಿಯಲ್ಲಿ ಪಾಲ್ಗೊಳ್ಳುವಿಕೆ, ಕೈಗಾ ಅಣುಸ್ಥಾವರದ ವಿರುದ್ಧ ನಾಗೇಶ್ ಹೆಗಡೆ ಮೊದಲಾದ ಖ್ಯಾತ ಪರಿಸರವಾದಿಗಳೊಂದಿಗೆ ಸೇರಿ ಹೋರಾಟ, ರೈತ ಚಳವಳಿಯ ಜೊತೆಗಿನ ಒಡನಾಟ, ಹರಿಹರ ಪಾಲಿಫೈಬರ್ಸ್ ವಿರುದ್ಧದ ಹೋರಾಟ, ಎಸ್. ಆರ್. ಹಿರೇಮಠ್ ಮತ್ತು ಸ್ನೇಹಿತರೊಂದಿಗೆ ಸೇರಿ ತುಂಗಭದ್ರಾ ನದಿ ಕಲುಷಿತಗೊಳಿಸದಂತೆ ಹೋರಾಟ, ಭೂ ದಾಹಿಗಳ ವಿರುದ್ಧ ಭೂ ಕಬಳಿಕೆ ವಿರೋಧಿ ಹೋರಾಟದಲ್ಲಿ ಎ. ಟಿ. ರಾಮಸ್ವಾಮಿ ಮೊದಲಾದವರೊಂದಿಗೆ ಕೆಲಸ, ಕಾರ್ಯನಿರತ ಪತ್ರಕರ್ತರ ಸಂಘದ ಸ್ಥಾಪನೆ, ಭಾರತಮಾತಾ ವಿದ್ಯಾಮಂದಿರದ ಸ್ಥಾಪನೆ, ಕಸ ವಿಲೇವಾರಿ ಸಮಸ್ಯೆ ವಿರುದ್ಧ ಮಂಡೂರು ಸತ್ಯಾಗ್ರಹ, ಭ್ರಷ್ಟಾಚಾರದ ವಿರುದ್ಧ ರವಿ ಕೃಷ್ಣಾರೆಡ್ಡಿ ಮೊದಲಾದವರೊಂದಿಗೆ ಕೆಲಸ, ಮಾವೋವಾದಿ ಹಿನ್ನೆಲೆಯಿಂದ ಮುಖ್ಯವಾಹಿನಿಗೆ ಬರಲು ಬಯಸಿದ ಹೋರಾಟಗಾರರನ್ನು ಹೊರತರುವ ಸಲುವಾಗಿ ಶಾಂತಿಗಾಗಿ ನಾಗರಿಕರ ವೇದಿಕೆ ಜೊತೆಗಿನ ಕೆಲಸಗಳು, ನಂತರದಲ್ಲಿ ನೂರ್ ಶ್ರೀಧರ್ ಮತ್ತು ಸಿರಿಮನೆ ನಾಗರಾಜ್‌ರವರೊಂದಿಗೆ ಸೇರಿ ಭೂಮಿ ಮತ್ತು ವಸತಿ ಹಕ್ಕು ವಂಚಿತರಿಗಾಗಿ ನಿರಂತರ ಚಳವಳಿ ಆರಂಭ, ಇದರ ಭಾಗವಾಗಿ ಕೊಡಗಿನ ದಿಡ್ಡಳ್ಳಿಯ ಆದಿವಾಸಿ ಹಾಡಿಗಳಿಂದ ಹಿಡಿದು ರಾಜ್ಯದ ಮೂಲೆ ಮೂಲೆಯ ಶೋಷಿತರ ಜಮೀನು ಮತ್ತು ಮನೆಗಳನ್ನು ನೋಡಲು ಭೇಟಿ, ಬೆಳಗಾವಿ ಅಧಿವೇಶನದಲ್ಲಿ ಸತ್ಯಾಗ್ರಹ... ಇದೇ ಫೆಬ್ರವರಿಯಲ್ಲಿ ಬೆಂಗಳೂರಿನಲ್ಲಿ ನಡೆದ ಭೂಮಿ ವಸತಿ ಹಕ್ಕು ವಂಚಿತರ ೧೮ ದಿನಗಳ ನಿರಂತರ ಸತ್ಯಾಗ್ರಹದಲ್ಲಿ ಒಂದು ದಿನವೂ ತಪ್ಪದಂತೆ ಬಂದ ಸತ್ಯಾಗ್ರಹಿಗಳಲ್ಲಿ

ದೊರೆಸ್ವಾಮಿಯವರೇ ಮುಂಚೂಣಿಯಲ್ಲಿದ್ದವರು!!

ಇಷ್ಟೆಲ್ಲ ಆದರೂ ಎಂದೂ ಖ್ಯಾತಿಯನ್ನಾಗಲೀ, ಬಿರುದು ಬಾವಲಿಗಳನ್ನಾಗಲೀ ಬಯಸದ, ಪ್ರಾಮಾಣಿಕವಾದ ದುಡಿಮೆಯಷ್ಟೇ ನಮ್ಮ ಕರ್ತವ್ಯ ಎಂಬ ಪಾರದರ್ಶಕ ನಿಲುವು. ಇತ್ತೀಚೆಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿ ತಾನಾಗಿಯೇ ಅವರಿಗೊಲಿದು ಬಂದಾಗ ಅದರಲ್ಲೂ ಒಂದು ಭಾಗವನ್ನು ದಮನಿತರಲ್ಲಿ ದಮನಿತರಾದ ಭೂಮಿ ವಸತಿ ವಂಚಿತರ ಹೋರಾಟಕ್ಕೆಂದು ಮುಡಿಪಿಡುವ ಉದಾರತೆ; ಇನ್ನೊಂದು ಭಾಗವನ್ನು ಜಯದೇವ ಹೃದ್ರೋಗ ಸಂಸ್ಥೆಗೂ ಮತ್ತು ಉಳಿದದ್ದನ್ನು ಜೀವಮಾನವಿಡೀ ತನ್ನ ಹೋರಾಟ ಹಾರಾಟಗಳನ್ನೆಲ್ಲ ಸಹಿಸಿಕೊಳ್ಳುತ್ತಾ, ಸದಾ ಬೆನ್ನಿಗೆ ನಿಂತು ಕಾಪಾಡಿದ ಬಾಳಸಂಗಾತಿಯ ಉಡಿಗೆ ಹಾಕಿ "ಮಡದಿಗೆ ಇಡೀ ಬದುಕಿನಲ್ಲಿ ನಾನು ಏನನ್ನೂ ಕೊಟ್ಟಿಲ್ಲ, ಈಗ ಇಳಿಗಾಲದಲ್ಲಿ ಇಷ್ಟಾದರೂ ಮಾಡಬೇಕಲ್ಲ" ಎಂಬ ಕಾಳಜಿ, ಅಕ್ಕರೆ...; ಅನನ್ಯವಾದ ಅಪರೂಪದ ವ್ಯಕ್ತಿತ್ವ ದೊರೆಸ್ವಾಮಿಯವರದ್ದು !

ಅದಕ್ಕೇ ದೊರೆಸ್ವಾಮಿಯವರು ವಿವಿಧ ರೀತಿಯ ಹಕ್ಕಿ ಪಕ್ಷಿಗಳೆಲ್ಲವಕ್ಕೂ ನೆರಳು ಆಹಾರ ಒದಗಿಸಿ ಸಲಹುವ ಆಲದ ಮರದಂತೆ; ಚಲಿಸುತ್ತಲೇ ತನ್ನ ಬದುಕಿನ ಪಾತ್ರವನ್ನು ರೂಪಿಸಿಕೊಳ್ಳುವ ನಿರಂತರ ಹರಿಯುವ ನದಿಯಂತೆ; ಎಂದೂ ಬತ್ತದ ನೀರಿನ ಒರತೆಯಂತೆ. ೧೦೧ ವರ್ಷಗಳ ಈ ಸಾರ್ಥಕ ಬದುಕಿನಲ್ಲಿ ಹಾದುಹೋದ ಎಲ್ಲರೂ ಒಂದಷ್ಟು ಹುರುಪನ್ನೂ, ಆದರ್ಶಗಳನ್ನೂ, ಬದುಕುವ ಸ್ಫೂರ್ತಿಯನ್ನೂ ಪಡೆದೇ ಹೋಗಿದ್ದಾರೆ; ಮುಂದಕ್ಕೂ ಪಡೆಯುತ್ತಲೇ ಇರುತ್ತಾರೆ!


**ಮಲ್ಲಿಗೆ ಸಿರಿಮನೆ**
ಕರ್ನಾಟಕ ಜನಶಕ್ತಿ, ಹಳೆ ಪೌರವಾಣಿ ಕಟ್ಟಡ
೪ನೇ ಅಡ್ಡರಸ್ತೆ, ಅಶೋಕ ನಗರ, ಮಂಡ್ಯ


# ನಾನೊಬ್ಬ ರೈತ



ಹೌದು ನಾನೊಬ್ಬ ರೈತ, ನಾನೇನೂ ಕವಿಯಲ್ಲ
ನಿಮ್ಮ ಹಾಗೆ ಇಷ್ಟುದ್ದಾ ಬರೆಯಲ್ಲ
ಯಾವತ್ತೂ ಹಾರತುರಾಯಿ ಪಡೆಯಲ್ಲ
ವಚನಗಳ ಸುರಿಮಳೆ ನಿಮ್ಮುದ್ದಾ ಸುರಿಯಲ್ಲ
ಯಾವುದೋ ಕಡೆ ವಾಲಿ ಯಾರನ್ನೂ ಜರಿಯಲ್ಲ
ಕವಿ ನಾನಲ್ಲ ನಮ್ಮೆತ್ತು ಹುಯ್ದಂಗೆ ನಾ ಬರೆಯಲ್ಲ
ಆದರೆ ನಾನಿರುವೆ ಅಡೆತಡಿಯಾಗಿ ನೀವ್ಕೂಡಲಲ್ಲಿ
ನಮ್ಮ ನಲ್ಗಡಿ ಕಾಯ್ವವವರ ಗುಂಡಿಗೆಗೆ ಬಿಸಿರಕ್ತವಾಗಲ್ಲಿ
ನಮ್ಮನುದ್ದುದ್ದಾ ಕಚ್ಚಿ ಹೀರುವ ಕಚ್ಚೆ ಹರುಕರಿಗೂ ರಕ್ತವಾಗಿರುವೆ
ರೈತ ನಾನಣ್ಣ ಅಗೋ ಅಲ್ಲೆಲ್ಲೋ ಕೂತುಬಿಡುವೆ
ಲೂಟಿಕೋರರ ಧನಾ-ಮೋಸಗಳ ಮನದಿ ಹೂತುಬಿಡುವೆ
ನಾನೇನು ಮಾಡಲಿ ನಾ ಬೆಳೆದ ಬೆಳೆಗಳ ಲೂಟಿ ಮಾಡ್ವ ಬಿಳಿ ಸಲಗಗಳ
ನನ್ನ ನಾಡ ತುಪಾಕಿಗೆ ಯಾ ಗುಂಡು ಅವುಗಳ ಅಂಡು ತಾಕಲ್ಲ
ನನ್ನ ಭೂಮಿಗೆ ಕೊರೆಕೊರೆದೂ ಕನ್ನ ಹಾಕಿ
ಕಿತ್ತಿರೆಲ್ಲಾ ಅಳಿದುಳಿದ ಅಂತರ್ಜಲ
ನನ್ನ ಭೂಮಿಯ ಯೋಜನೆಗೆಂದು ಒತ್ತುವರಿ ಮಾಡಿ
ಇತ್ತಿರೆಲ್ಲಾ ಮಕ್ಕಳಿಗೆ ಮೊಬೈಲ್ ಅಂತರ್ಜಾಲ
ಸಾಕುಬಿಡಿ ರೈತನ ಮಕ್ಕಳಿಗೆ ಅರೆಬರೆ ಓದು
ಫ್ಯಾಕ್ಟರಿ ಕ್ಯಾಶುಯಲ್ಲುಗಲಾಮಗಿರಿ, ಊರಿಗೆರಡೆರಡು ಬಾರು
ಸುರಿಯುತಿ ಹಿರಿಭೂಮಿಗೆ ವಿಷ, ಕಸದಲ್ಲಿ ಪ್ರಗತಿ
ಯಶಸ್ಸಿನತ್ತ ಭಾರತ-ಒಳಜಗಳ ಕಿತ್ತಾಟಗಳಲ್ಲಿ
ಹುಟ್ಟುಹಬ್ಬ ಜಯಂತಿಗಳ ಮಾಡಿ ಹುಚ್ಚೇರಿ ಕುಣಿಯಿರಿ
ಪಕ್ಕದ ಬೀದಿಯಲಿ ಗಬ್ಬೇರಿ ನಾರುತಿರಲಿ
ಸ್ವಚ್ಛ ಭಾರತ ಸ್ಲಂಗಳಲಿ, ಕೊಳಗೇರಿಗಳಲಾಚರಿಸಿ
ಮುಂದೆ ನಾನಿಲ್ಲದ ಜಗವ ನೀವ್ಮರೆಯದಿರಿ
ಸ್ವಾಮಿಗಳೇ ನೀವ್ನೀವೇ ಕಿತ್ತಾಡುತ್ತಿರುವಿರಿ
ನಿಮ್ಮ ಕಾವಿ ಕಿತ್ತೊಗೆದು ಬನ್ನಿ ನನ್ನೊಡನೆ ಬೇಸಾಯಕೆ
ಗೊತ್ತಾಗುವುದು ಅಗೋ ಮೇಲಿರುವ ಆ ಪರಂಜ್ಯೋತಿ
ಬಡರೈತ ನಾನಾಗಿ ಆಳುವವರಲ್ಲಿ ನನ್ನ ದೋಚುವವರೇ
ಪಕ್ಷಾತೀತವಾಗಿ ಕಾಣುತಿರಲು ಸುತ್ತೆಲ್ಲಾ
ಯಾರಿಗೆ ಒತ್ತಲಿನಾ ಓಟು ಪೆಂಗನಾಗಿಹೆ
ಇಕ್ಕಲಾರದ ಒದೆಯಲಾರದ ರೈತ ಕತ್ತೆ ನಾನಣ್ಣ
ಪುಷ್ಟಿಯಾಗಿ ಹಗೋವಲ್ಲ ಹಾಯಲಾರದ ಬಡದನವಣ್ಣ
ರೈತನಿಲ್ಲದ ಜಗವು ಮುಂದೆ ನಿಮಗೆ ಬೇಕೇನು
ಏನು ತಿನ್ನುವಿರಿ ಆಗ ಮಣ್ಣು
ಮಣ್ಣಿನ ಈ ಮಗನ ಮರೆಯದಿರಿ ಎಲ್ಲ
ಎಲ್ಲೋ ಕೂತಿದ್ದರೂ ಇವ ಜಗವನೇಬಲ್ಲ
ಕೊಳ್ಳೆ ಹೊಡೆವ ಕದೀಮರನೆಲ್ಲ ಹೆಡೆಮುರಿ ಕಟ್ಟಲಾರೆ
ಬಡರೈತ ನಾನಾಗಿ ಬರಿ ಕ್ಯಾಕರಿಸಿ ಉಗಿವೆ


**ಶಿವಪ್ರಸಾದ್ ಮಲ್ಲರ ಬಾಣವಾಡಿ**
ಪ್ರಸಾದ್ ಆರ್ಟ್ಸ್, ಮಲ್ಲರ ಬಾಣವಾಡಿ ಅಂಚೆ
ನೆಲಮಂಗಲ ತಾಲ್ಲೂಕು, ಬೆಂಗಳೂರು
ಗ್ರಾಮಾಂತರ ಜಿಲ್ಲೆ – ೫೬೨ ೧೨೩



# ಗುರು ಮತ್ತು ಚಂದ್ರ

ಸಂಜೆಯ ಆಕಾಶದಲ್ಲಿ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಶುಕ್ರ. ಅದು ಇರುವ ದಿಕ್ಕು ಪಶ್ಚಿಮ. ಹೀಗೆ ಅದು ದಿಕ್ಸೂಚಿಯೂ ಹೌದು. ಅದು ದಿನೇ ದಿನೇ ಮೇಲೆ ಏರುತ್ತಿದೆ ಅನ್ನಿಸುತ್ತದೆ. ಅದನ್ನು ೧೮ನೆಯ ತಾರೀಖಿನ ನಂತರ ಗಮನವಿಟ್ಟು ನೋಡಿ. ಅದರ ಪಕ್ಕ ರೋಹಿಣಿ ಮತ್ತು ಕೃತ್ತಿಕಾ ಕಾಣುತ್ತವೆ. ದುರ್ಬೀನು ಇದ್ದರೆ ಇನ್ನೂ ಒಳ್ಳೆಯದು. ಕೃತ್ತಿಕಾ ನಕ್ಷತ್ರಗುಚ್ಛದ ಸಮೀಪ ಅದು ಹಾದುಹೋಗುವುದು. ಕ್ಯಾಮೆರಾ ಇದ್ದವರು ಚಿತ್ರ ತೆಗೆಯುವುದನ್ನು ಪ್ರಯತ್ನಿಸಲು ಇದು ಒಳ್ಳೆಯ ಅವಕಾಶ. ಹೆಚ್ಚು ಎಕ್ಸಪೋಶರ್ ಕೊಟ್ಟು ತೆಗೆದಲ್ಲಿ ಆ ಗುಚ್ಛದ ಬಿಡಿ ಬಿಡಿ ನಕ್ಷತ್ರಗಳು, ಜೊತೆಗೆ ಪ್ರಖರ ನಕ್ಷತ್ರಗಳ ಸುತ್ತಲೂ ವ್ಯಾಪಿಸಿರುವ ಕ್ಷೀಣ ನೆಬ್ಯುಲಾ ಸಹ ಕಾಣುವುದು ಸಾಧ್ಯ.

ತಿಂಗಳ ಆರಂಭವೇ ಹುಣ್ಣಿಮೆ ಚಂದ್ರನಿಂದ. ದಿನೇ ದಿನೇ ತಡವಾಗಿ ಉದಯಿಸುವ ಚಂದ್ರನನ್ನು ೪ನೆಯ ತಾರೀಖು ಗಮನಿಸಿ. ರಾತ್ರಿ ಒಂಭತ್ತರ ನಂತರ ಪೂರ್ವ ದಿಕ್ಕಿನಲ್ಲಿ ಉದಯಿಸುವ ಚಂದ್ರನ ಪಕ್ಕ ಪ್ರಕಾಶಮಾನವಾದ ಚುಕ್ಕೆಯೊಂದು ಕಾಣುತ್ತದೆ. ಅದೇ ಗುರುಗ್ರಹ. ಎರಡು ದಿನ ಬಿಟ್ಟು ಪುನಃ ಅದೇ ಹೊತ್ತಿಗೆ ಅದೇ ಸ್ಥಳದಲ್ಲಿ ಗುರುಗ್ರಹವನ್ನು ಕಾಣಬಹುದು. ಆದರೆ ಚಂದ್ರ ಇನ್ನೂ ಮುಂದಕ್ಕೆ ಹೋಗಿರುತ್ತದೆ. (ಅಂದರೆ ಇನ್ನೂ ತಡವಾಗಿ ಉದಯಿಸುತ್ತದೆ.) ೨೭ ದಿನಗಳ ನಂತರ ಪುನಃ ಚಂದ್ರ ಅದೇ ಸ್ಥಳಕ್ಕೆ ಹಿಂದಿರುಗುತ್ತದೆ ಎಂದು ನಾವು ನಿರೀಕ್ಷಿಸುತ್ತೇವೆ. ಇದು ನಿಜವೇ ಎಂದು ಪರೀಕ್ಷಿಸಲು ಇದು ಸುಸಮಯ. ೩೦ರಂದು ಸಂಜೆಗೇ ಚಂದ್ರ ಮತ್ತು ಗುರು ಎರಡೂ ಉದಯಿಸುತ್ತವೆ. ಹುಣ್ಣಿಮೆಯ ಬೆಳಕಿನಲ್ಲೂ ಗುರುತಿಸಬಹುದಾದಷ್ಟು ಪ್ರಕಾಶಮಾನವಾಗಿದೆ ಗುರು.


೧೮ರಂದು ರಾತ್ರಿ ಚಂದ್ರ, ಶುಕ್ರ, ರೋಹಿಣಿ ಮತ್ತು ಕೃತ್ತಿಕಾ

ಹೀಗೆ ಹುಣ್ಣಿಮೆಯ ಚಂದ್ರನೊಡನೆ ಉದಯಿಸುವುದೆಂದರೆ ಸೂರ್ಯನಿಗೆ ನೇರವಾಗಿ ವಿರುದ್ಧ ದಿಕ್ಕಿನಲ್ಲಿದೆ ಎಂದರ್ಥ. ಅಂದರೆ ಮುಂದಿನ ತಿಂಗಳು ರಾತ್ರಿ ಇಡೀ ನೋಡಲು ಸಿಗುತ್ತದೆ. ಮೇ ೯ರಂದು ವಿಯುತಿ. ಇದರ ಸೂಚಕವಾಗಿ ಅದರ ಹಿನ್ನಡೆಯನ್ನು ಗುರುತಿಸಬಹುದು. ಭೂಮಿ ಇದನ್ನು ಹಿಂದೆ ಹಾಕಿ ಮುಂದೆ ಓಡುವ ಈ ನೈಸರ್ಗಿಕ ಘಟನೆಯನ್ನು "ವಕ್ರ" ಎಂದು ಕರೆದು ಭಯ ಹುಟ್ಟಿಸುವವರೂ ಉಂಟು.




ಇನ್ನೆರಡು ಗ್ರಹಗಳು ಮಂಗಳ ಮತ್ತು ಶನಿ – ಇವನ್ನು ನಡುರಾತ್ರಿಯಿಂದ ಮುಂಜಾವಿನವರೆಗೆ ನೋಡಬಹುದು. ೨ರ ಮುಂಜಾವು ಇವೆರಡೂ ಪರಸ್ಪರ ಬಹಳ ಸಮೀಪವಾಗಿ ಹಾದು ಹೋಗುತ್ತವೆ. ಇದನ್ನು ಚಿತ್ರೀಕರಿಸಿದರೆ ಶನಿಯ ಪಕ್ಕದಲ್ಲಿ ಒಂದು ಪುಟ್ಟ ನಕ್ಷತ್ರಗುಚ್ಛವೂ ದಾಖಲಾಗುತ್ತದೆ. ದೂರದರ್ಶಕ ಇರುವವರು ಅದನ್ನು ಕಾಣಬಹುದು. ಇದು ಧನು ರಾಶಿಯಲ್ಲಿ ಆಕಾಶ ಗಂಗೆಯ ಕೇಂದ್ರ ಭಾಗ. ಆಚೀಚೆ ನಕ್ಷತ್ರಗುಚ್ಛಗಳು ಹಲವಾರಿವೆ. ೮ರಂದು ಚಂದ್ರ ಶನಿ ಮತ್ತು ಮಂಗಳದ ಪಕ್ಕ ಹಾದುಹೋದಾಗ ಮೂರೂ ಪುಟ್ಟ ಗುಂಪಾಗಿ ಕಾಣುತ್ತವೆ. ಶನಿ ೧೮ರಂದು ತಟಸ್ಥವಾಗುತ್ತದೆ. ಆಮೇಲೆ ಅದರ ಚಲನೆ "ವಕ್ರ"ವಾಗುತ್ತದೆ. ಸದ್ಯದಲ್ಲೇ ವಿಯುತಿ ಉಂಟಾಗಲಿದೆ ಎಂಬುದರ ಸೂಚನೆ ಇದು.

ಬುಧ ಗ್ರಹ ತಿಂಗಳ ಕೊನೆಗೆ ಮುಂಜಾವಿನಲ್ಲಿ ಕಾಣುತ್ತದೆ. ೨೯ರಂದು ಅದರ ಗರಿಷ್ಠ ಕೋನೋನ್ನತಿ.

ಸಂಜೆಯ ಆಕಾಶದಲ್ಲಿ ನೆತ್ತಿಯ ಮೇಲೆ ಕಾಣುವ ಪುಂಜಗಳೆಂದರೆ ಮಹಾವ್ಯಾಧ (ಒರೈಯನ್), ಮಿಥುನ, ಪಾರ್ಥ (ಆರಿಗಾ). ಇದಲ್ಲದೆ ವೃಷಭ, ಕಟಕ, ಸಿಂಹ, ಕನ್ಯಾ ಈ ರಾಶಿಗಳು ಮತ್ತು ಮಹಾಶ್ವಾನ, ಸಪ್ತರ್ಷಿಮಂಡಲ, ನೌಕಾಪಟ ಇವುಗಳನ್ನೂ ಗುರುತಿಸಬಹುದು.

ಜನವರಿಯಲ್ಲಿ ಹುಣ್ಣಿಮೆಯ ಬಗ್ಗೆ "ಸೂಪರ್‌ಮೂನ್" ಎಂದು ಗುಲ್ಲು ಎದ್ದಿದ್ದುದು ನೆನಪಿರಬಹುದು. ಈ ತಿಂಗಳಲ್ಲಿ ಚಂದ್ರ–ಭೂಮಿ ಅಂತರ ಗರಿಷ್ಠವಾಗುವುದು ೮ರಂದು; ಕನಿಷ್ಠವಾಗುವುದು ೨೦ರಂದು. ಆ ಎರಡೂ ದಿನಗಳಲ್ಲಿ ಕಾಣುವ ಅರ್ಧ ಚಂದ್ರಗಳನ್ನು ಚಿತ್ರ ತೆಗೆದು ಹೋಲಿಸಿದರೆ ಗಾತ್ರದ ವ್ಯತ್ಯಾಸ ಕಾಣುವುದು.

ಈ ತಿಂಗಳಲ್ಲಿ ಲಿರಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಲೈರಾ ಅಥವಾ ವೀಣಾ ಪುಂಜದ ವೇಗಾ (ಅಭಿಜಿತ್) ಎಂಬ ನಕ್ಷತ್ರದ ದಿಕ್ಕಿನಿಂದ ಹೊರಟುಬರುತ್ತಿರುವಂತೆ ಕಾಣುತ್ತವೆ. ಥ್ಯಾಚರ್ ಎಂಬ ಹೆಸರಿನ ಧೂಮಕೇತು ಉಳಿಸಿಹೋಗಿರುವ ಧೂಳು ಹೀಗೆ ಭೂಮಿಯ ಮೇಲೆ ಸುರಿಯುತ್ತದೆ. ಸಾಧಾರಣವಾಗಿ ೨೧ರಿಂದ ೨೩ರವರೆಗೆ ಬೆಳಗಿನ ಜಾವ ಕಾಣುತ್ತದೆ. ಕೆಲವೊಮ್ಮೆ ಗಂಟೆಗೆ ೫೦–೬೦ ಉಲ್ಕೆಗಳೂ ಕಾಣುತ್ತವೆ.

**ಖಗೋಳ ದಿನಚರಿ**

೨ ಮಂಗಳ–ಶನಿ ನಡುವೆ ಕನಿಷ್ಠ ಕೋನ*
೪ ಗುರು – ಚಂದ್ರ ಜೋಡಿ*
೭–೮ ಶನಿ, ಮಂಗಳ ಮತ್ತು ಚಂದ್ರ ಪುಟ್ಟ ಗುಂಪು*
೮ ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ ಚಾಂದ್ರ ಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೧೪ ಬುಧ – ಚಂದ್ರ ಜೋಡಿ
೧೬ ಅಮಾವಾಸ್ಯೆ
೧೮ ಶುಕ್ರ – ಚಂದ್ರ ಜೋಡಿ*
೧೮ ಶುಕ್ರ – ಕೃತ್ತಿಕಾ ಸಮೀಪ ಹಾದು ಹೋಗುವುದು*
೧೯ ಚಂದ್ರ – ರೋಹಿಣಿ ಜೋಡಿ* (ರೋಹಿಣಿ ಆಚ್ಛಾದನೆ ನಮಗೆ ಕಾಣುವುದಿಲ್ಲ)
೨೦ ಭೂಮಿ–ಚಂದ್ರ ನಡುವೆ ಕನಿಷ್ಠ ಅಂತರ*
೨೧–೨೩ ಲಿರಿಡ್ಸ್ ಉಲ್ಕಾವೃಷ್ಟಿ *
೨೨ ಚಾಂದ್ರಮಾಸದ ಮೊದಲ ಪಾದ – ಚಂದ್ರಾಸ್ತ ನಡುರಾತ್ರಿಗೆ
೨೪ ಮಘ–ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೨೯ ಬುಧಗ್ರಹದ ಗರಿಷ್ಠ ಕೋನೋನ್ನತಿ*
೩೦ ಹುಣ್ಣಿಮೆ : ಗುರು – ಚಂದ್ರ ಜೋಡಿ

*(* ಛಾಯಾಗ್ರಹಣಕ್ಕೆ ಸದವಕಾಶ)*

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು –೧

ನಾನು ಓದಿದ ಪುಸ್ತಕ




# ನವಿರಾದ ಭಾವಾಭಿವ್ಯಕ್ತಿಯ ಕಾವ್ಯ 'ಪರದೆ ಸರಿದಂತೆ'

| | |
|---|---|
| ಕೃತಿಯ ಹೆಸರು : **'ಪರದೆ ಸರಿದಂತೆ'** (ಕವನ ಸಂಕಲನ) | **ಬೆಲೆ : ರೂ. 70/–** |
| ಲೇಖಕರು : **ಡಿ. ಬಿ. ರಜಿಯಾ** | **ಪುಟಗಳು : 76** |
| ಪ್ರಕಾಶಕರು : **ಕೌದಿ ಪ್ರಕಾಶನ,** ಶಿವಮೊಗ್ಗ | |

'ಪರದೆ ಸರಿದಂತೆ' ಶ್ರೀಮತಿ ಡಿ. ಬಿ. ರಜಿಯಾರ ಹೊಸ ಕವನ ಸಂಕಲನ ತನ್ನ ಸರಳ ಭಾವಶೈಲಿ ನಿರೂಪಣೆಯಿಂದ ಓದಿಗೆ ಆಹ್ಲಾದ ನೀಡುತ್ತದೆ. ತೀರ ದೊಡ್ಡವಲ್ಲದ, ತೀರ ಚಿಕ್ಕವಲ್ಲದ ಕವಿತೆಗಳು ಬಂಧದ ದೃಷ್ಟಿಯಿಂದ ಹಿತಯುತ ಆಕೃತಿಯವು. ಈಗಾಗಲೇ ಛಾಯೆ, ಕಳೆದು ಹೋಗುತ್ತವೆ, ಋತು, ಮಡಚಿಟ್ಟ ಕೌದಿ ಹಾಗೂ ರಜಿಯಾ ಅವರ ಕವನಗಳು ತಮ್ಮ ಈ ಹಿಂದಿನ ಕವನ ಸಂಕಲನಗಳಿಂದ ಸಾಕಷ್ಟು ಗಮನ ಸೆಳೆದಿದ್ದಾರೆ.

ಮುಖ್ಯವಾಗಿ ರಜಿಯಾ ಒಬ್ಬ ಭಾವಜೀವಿ ಕವಯತ್ರಿ. ತಮ್ಮ ಇತಿಮಿತಿಯಲ್ಲಿ ಬರುವ ಅನುಭವಗಳನ್ನು ಕಾವ್ಯದ ವಸ್ತುಗಳಾಗಿಸಿ ಬರೆಯುವವರು. ಇದನ್ನೇ ಕೃತಿಯ ಮುನ್ನುಡಿಕಾರ ಡಾ॥ ಜಿ. ಎಸ್. ಸಿದ್ಧರಾಮಯ್ಯನವರು 'ಯಾವುದೇ ಅರಗದ ಸಿದ್ಧಾಂತಗಳಿಗೆ ಬದ್ಧವಾಗಿ ಕಾವ್ಯ ಕಟ್ಟುವ ಹವಣಿಕೆ ರಜಿಯಾ ಅವರಲ್ಲಿಲ್ಲ. ಮಾಗಿದ ಮನಸ್ಸು, ಆದ ಅನುಭವಗಳನ್ನು, ಅವಲೋಕಿಸಿ, ಆಲೋಚಿಸಿ ಕಾವ್ಯಾನುಬಂಧಕ್ಕೆ ಒಳಗುಮಾಡಿದೆ' ಎಂದಿದ್ದಾರೆ.

*ಮಾತಾಡಬೇಕು*
*ಹಿತವಾಗಿ ಮಿತವಾಗಿ*
*ಬಾಳಿನ ಎಳೆ ಎಳೆಯೂ*
*ನೇಯುವ ನೇಕಾರನಂತೆ*

ಸಂಕಲನದ 'ಚಲನೆ' ಎಂಬ ಕವಿತೆಯ ಈ ಸಾಲುಗಳು ಯಾವ ಭಾವ ಭಾರಗಳ ಒತ್ತಡಗಳಿಲ್ಲದೇ 'ಹಿತವಾಗಿ ಮಿತವಾಗಿ' ನೇಯುವ ನೇಕಾರನಂತೆ ಎಂಬ ಧೋರಣೆಯದು. ಇಡೀ ರಜಿಯಾ ಕಾವ್ಯದ ಹಾದಿಯೂ ಇದೇ ಆಗಿದೆ.

'ಪ್ರಣತಿ' ಸಂಕಲನದ ಅತ್ಯುತ್ತಮ ಕವಿತೆಯಲ್ಲೊಂದು. 'ಜಾತಿ ಮತಗಳ ಹೊಟ್ಟ ತೂರಿ, ಎಲ್ಲ ತತ್ವದಲ್ಲೇ ಮೀರಿ' ಎಂಬ ಭಾವದಂತೆ 'ಪ್ರಣತಿ' ಕವಿತೆಯನ್ನು ಕಟ್ಟುತ್ತಾ ಹೋಗುತ್ತಾರೆ. 'ಬೇವು ಬೆಲ್ಲವನ್ನು' ಹದವಾಗಿ ಬೆರೆಸುತ್ತ, 'ಆಜಾನ್, ಅವಾಜಿಗೆ ನಮಾಜಿಗೆ / ಹೊತ್ತಾಯಿತು ಎನ್ನುತ್ತ / ಹೊತ್ತು ಹೊತ್ತಿಗೆ ಅಲ್ಲಾನ ಅಂತರಂಗದೊಳು / ಧ್ಯಾನಿಸುವಳು' ಎಂಬ ಕವಿತೆಯ ಕರಳು ಭಾಷೆಯ ಸಾಲುಗಳು ಹಿಡಿದಿಡುತ್ತವೆ. ನಾಡಿನ ಕಾವ್ಯ ಚಿಂತಕರಾದ ಕಿ. ರಂ. ಕುರಿತು ಬರೆದ ಕವಿತೆಯ ಸಾಲುಗಳು ಹೀಗಿವೆ.

*ಮಗುವಿನಂತೆ ಒಮ್ಮೊಮ್ಮೆ*
*ಮಗದೊಮ್ಮೆ ಮೇಧಾವಿಯಂತೆ*
*ಮಮಕಾರದ ಕಕ್ಕುಲತೆಯಲ್ಲಿ*
*ಜೀವ ತುಂಬುವ ಸಂಜೀವಿನಿ*

ಹೀಗೆ ಮಗುವಿನ ಭಾವದಲ್ಲಿ ಕಿ. ರಂ. ನಾಗರಾಜರನ್ನು ಕಾಣುತ್ತ ಕವಿತೆಯ ಕೊನೆಗೆ

*ಸೂಫಿ ಸಂತನ ಪ್ರೇಮಯಾಗ*
*ನನಗದೇ ಸ್ವರ್ಗ*
*ಎಂಬ ಅಂತಃಸತ್ವದ ರೂವಾರಿ*
*ಜಂಗಮನಾದ ಜಗದಗಲವನ್ನು*
*ಎದೆ ಗೂಡಿನಲ್ಲಿ ಕಟ್ಟಕೊಡೆ ಕಾಪಿಟ್ಟು*

ಅಪಾರ ಪ್ರೀತಿಮಿಂದ, ಭಾವ ಪೂರ್ಣವಾಗಿ ಕವಿತೆಯು ಕಿ. ರಂ.ರನ್ನು 'ಜಗದಗಲವನ್ನೇ ಕಾಪಿಟ್ಟ' ರೀತಿಯಲ್ಲಿ ಕವಯತ್ರಿ ರಜಿಯಾ ಕಾಣುತ್ತಾರೆ.

ಈಗಾಗಲೇ ಗುರುತಿಸಿರುವಂತೆ ತಮ್ಮ ಜೀವ ಮತ್ತು ಭಾವ ಶ್ರದ್ಧಾಕೇಂದ್ರಗಳ ಮಿತಿಯಲ್ಲಿಯೇ ಸ್ವಲ್ಪಮಟ್ಟಿಗೆ ಕಾವ್ಯ ಕಟ್ಟುತ್ತಿದ್ದ ರಜಿಯಾ 'ತೆರೆ ಸರಿದಂತೆ' ಸಂಕಲನದಲ್ಲಿ ದಾಟಲು ಯತ್ನಿಸಿದ್ದಾರೆ. ಈ ಮಾತಿಗೆ ಸಾಕ್ಷಿಯಾಗಿ ಸ್ವರೂಪ, ಅಭೇದ್ಯ, ವರ್ಣಮಾಲೆ ಮುಂತಾದ ಕವಿತೆಗಳಿವೆ.

*ಹೌದು ಮಾತನಾಡಬೇಕೆನಿಸುತ್ತೆ*
*ಈ ಮಾತು*
*ಕೆಲವರಲ್ಲಿ ಮಾತ್ರ ಮಾತನಾಡಲು*
*ಹವಣಿಸುವುದು ಯಾಕೆ ?*

**ಸತೀಶ ಕುಲಕರ್ಣಿ**

ಸಂಕಲನದ 'ಚಲನೆ' ಕವಿತೆಯಲ್ಲಿ ಸಮಾಜಮುಖಿಯಾಗಿ ಒಂದಿಷ್ಟು ಹವಣಿಕೆಯಾಗುವುದನ್ನು ಗುರುತಿಸಬಹುದು.

*ತಣ್ಣಗೆ ನಡೆದಿದೆ*
*ದೃಶ್ಯಗಳ ಅವಲೋಕನ*
*ಒಂದೊಂದೇ 'ಪರದೆ ಸರಿದಂತೆ'*

ಸಂಕಲನದ ತಲೆಬರಹದ 'ಪರದೆ ಸರಿದಂತೆ' ಕವಿತೆಯ ಸಾಲುಗಳು ಈ ರೀತಿಯಾಗಿ ಆರಂಭವಾಗಿ ಕವಯತ್ರಿ ತನ್ನ ಪಯಣವನ್ನು ತಾನೇ ಅವಲೋಕಿಸುವ ಭಾವನೆಯದು.

*ಮೌನದ ಆ ಕಣ್ಣುಗಳೊಳಗೆ*
*ಅಸ್ಮಿತ ನೋಟ*
*ಬೆಂದ ಬಸರಿನಗಾಯ*
*ತೆರೆ ಸರಿದ ಪ್ರದರ್ಶನದೊಳಗಿನ*
*ಬಯಲು ಬಯಲೆ*

ಹೆಣ್ಣು ಬದುಕಿನ ಹಾದಿಯನ್ನು 'ಪರದೆ ಸರಿದಂತೆ' ಸಂಕಲನ ಮುಖ್ಯ ಕವಿತೆ ತೋರಿಸುತ್ತದೆ. ಸಂಕಲನದಲ್ಲಿ ನಾಲ್ಕು ಮಲೆಯಾಳಿ ಭಾಷೆಯ ಅನುವಾದಿತ ಕವಿತೆಗಳಿವೆ. ಜೊತೆಗೆ ಹದಿನೈದು ಚುಟುಕುಗಳಿವೆ.

*ಇಬ್ಬನಿಯ ಹನಿ*
*ತುಳುಕುವಂತೆ*
*ಬಯಲಿನೊಳಗೆ*
*ಎಳೆ ಬೆಳಕು*
*ದೀಪ –*
*ಇಣುಕಲಿ*

ಇಬ್ಬನಿಯ ಮತ್ತು ಬಯಲಿನ ಎಳೆ ಬೆಳಕು ದೀಪದಂತೆ ಕವನ ಸಂಕಲನದ ಕವಿತೆಗಳು ತನ್ನ ಸೂಕ್ಷ್ಮಭಾವವ್ಯಕ್ತಿಯಿಂದ ಕಾವ್ಯ ಪ್ರೀತಿಯನ್ನು ಹುಟ್ಟಿಸುತ್ತವೆ.

| | | |
|---|---|---|
| ಕೃತಿಯ ಹೆಸರು | : | **'ಅನಿಸಿದ್ದು ಆಡಿದ್ದು'** (ಲೇಖನಗಳು) |
| ಲೇಖಕರು | : | **ವಿಜಯಕಾಂತ ಪಾಟೀಲ** |
| ಪ್ರಕಾಶಕರು | : | **ಪಲ್ಲವ ಪ್ರಕಾಶನ,** ಚನ್ನಪಟ್ಟಣ |
| ಪುಟಗಳು | : | **246** |
| ಬೆಲೆ | : | **ರೂ. 220/–** |

# ಅನಿಸಿದ್ದು ಆಡಿದ್ದು

**ಬೇ**ರೆ ಬೇರೆ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿ ಗಮನ ಸೆಳೆದಿರುವ ವಿಜಯಕಾಂತ ಪಾಟೀಲರ 'ಅನಿಸಿದ್ದು ಆಡಿದ್ದು' ಕೃತಿ ತನ್ನ ಸಹಜ – ಹೊಸತನದ ಶೈಲಿಯಿಂದ ಓದಿಗೆ ಸೆಳೆಯುತ್ತದೆ. ಲೇಖಕ ಬರಿ ಬರೆಯುವುದಲ್ಲ, ತನ್ನ ಸಮಕಾಲೀನ ಸಾಹಿತ್ಯದ ಹಲವು ಸಂಗತಿಗಳನ್ನು ಗಮನಿಸುತ್ತ ಅದಕ್ಕೆ ಪ್ರತಿಯಾಗಿ ಬರವಣಿಗೆ ಮಾಡಬೇಕೆಂಬ ಒಟ್ಟಾರೆ ಸಂದೇಶ 'ಅನಿಸಿದ್ದು ಆಡಿದ್ದು' ಕೃತಿಯದ್ದಾಗಿದೆ.

ನಾಲ್ಕು ವಿಭಾಗಗಳಲ್ಲಿ ಪುಸ್ತಕ ಹರಡಿಕೊಂಡಿದೆ. ಮುಖ್ಯವಾಗಿ ವಿಜಯಕಾಂತರು ತನ್ನ ಕಾಲದ ಸಮಕಾಲೀನ ಬರಹವನ್ನು ನೋಡುವ ಬಗೆಯದು. ಈ ಭಾಗದಲ್ಲಿ ಇಂದು 'ಓದು ಹಿಂದೇಕೆ ಬೀಳುತ್ತಿದೆ' ಎನ್ನುತ್ತ ಲೇಖಕರೆ ತಮ್ಮ ಕಾವ್ಯ ಸಂಬಂಧಿ ಕನವರಿಕೆಗಳನ್ನು ಬಿಚ್ಚಿಟ್ಟಿದ್ದಾರೆ. 'ಮಕ್ಕಳ ಸಾಹಿತ್ಯ' 'ಹೊಸ ತಲೆಮಾರಿನ ಕಾವ್ಯ' – ಇತ್ಯಾದಿಗಳ ಬಗ್ಗೆ ಬರೆದಿದ್ದಾರೆ. ಬಹಳ ಹಿಂದೆ ಬರೆದ 'ಗಾಂಧಿ ಎಂಬ ಎಕನಾಮಿಸ್ಟ' ಎಂಬ ಲೇಖನವಿಲ್ಲಿದೆ.

'ಬರೆಯುವುದನ್ನು ನಾನು ಹೋರಾಟ ಎಂದು ಕರೆಯುತ್ತೇನೆ' ಎನ್ನುತ್ತಾರೆ ವಿಜಯಕಾಂತ. 'ಕಾವ್ಯವೆಂಬುದು ಬರೀ ಅಕ್ಷರಗಳನ್ನು ಪೋಣಿಸಿ, ಪದಗಳನ್ನು ಕುಣಿಸಿ, ಮಣಿಸಿ ಅನಾವರಣಗೊಳಿಸಬಲ್ಲ ಸುಂದರ ಅಭಿವ್ಯಕ್ತಿಯಷ್ಟೇ ಅಲ್ಲ, ಸುಮಧುರ ಭಾವನೆಗಳ ಮೆರವಣಿಗೆಯೂ ಅಲ್ಲ, ಅದೊಂದು ನಿರಂತರ ತಿವಿಯುವ, ತಟ್ಟುವ, ಕಟ್ಟುವ, ಬಾರಿಸುವ ನಿರಂತರತೆ' ಎನ್ನುತ್ತಾರೆ ಪಾಟೀಲರು. ಇಂಥ ಎಚ್ಚರದ ನಡುವೆ ಮೊದಲ ಭಾಗದ ಲೇಖನಗಳು ಲೇಖಕರ ನಿಲುವುಗಳನ್ನು ಪ್ರತಿಪಾದಿಸಿವೆ.

'ಅವರು ಅವರ ಮಾತು' ಎಂಬ ಎರಡನೇ ಭಾಗದಲ್ಲಿ ಶಾಂತವೇರಿ ಗೋಪಾಲಗೌಡರ ಕುರಿತಾದ ಸಹಜ ಲೇಖನವಿದು. ಜೊತೆಗೆ ಡಾ॥ ಧರಣೇಂದ್ರ ಕುರಕುರಿ. ನೆಗವಾಡಿ ರಾಜಶೇಖರ ಪಾಟೀಲ ಮುಂತಾದವರ ಅನಿಸಿಕೆಗಳನ್ನು ಪ್ರಶ್ನೋತ್ತರ ಮಾದರಿಯಲ್ಲಿ ಒಂದಿಷ್ಟು ಮುಮ್ಮಾತುಗಳನ್ನು ಬರೆದು ಪ್ರಸ್ತುತ ಪಡಿಸಿದ್ದಾರೆ. ಬಹಳ ಮುಖ್ಯವಾಗಿ ಕೃಷಿಕಾರರಾದ ರಾಜಶೇಖರ ಪಾಟೀಲ ಎಂಬ ಅನಾಮಿಕ ಕವಿಗಳನ್ನು ಪರಿಚಯಿಸಿದ್ದು ವಿಶೇಷವಾಗಿದೆ.

'ಓದಿನ ಹಾದಿಯಲಿ ತುಸು ಹಾದು' ಎಂಬ ಮೂರನೆಯ ಭಾಗದಲ್ಲಿ ಚಂಪಾ, ಆರ್. ಜಿ. ಹಳ್ಳಿ ನಾಗರಾಜ, ಮೋಹನ ನಾಗಮ್ಮನವರ, ಚಂಸು ಪಾಟೀಲ, ವಿಕ್ರಮ ವಿಸಾಜಿ, ಮಾರುತಿ ಶಿಡ್ಲಾಪೂರ, ಎಚ್. ಎಸ್. ವೆಂಕಟೇಶಮೂರ್ತಿ ಮುಂತಾದವರ ಕವನ ಸಂಕಲನಗಳ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ.

ತುಂಬ ವಿಶೇಷವಾಗಿ 'ದೊಡ್ಡ ಕವಿಗಳ ಗಿಡ್ಡ ಸಾಲುಗಳು' ಮತ್ತು 'ತರುಣ ಕವಿಗಳ ಪ್ರೀತಿ ಸಾಲುಗಳು' ಎಂಬ ಲೇಖನಗಳು ಸೆಳೆಯುತ್ತವೆ. ಒಂದರ್ಥದಲ್ಲಿ ಎರಡು ತಲೆಮಾರು ಕವಿಗಳಿಗೆ ತುಂಬು ಆಪ್ತಭಾವದ ಸಾಲುಗಳು ಓದಲು ಸಿಗುತ್ತವೆ.

ಪುಸ್ತಕದ ಕೊನೆಯ ಭಾಗದಲ್ಲಿ 'ಸಮಕಾಲೀನ ಪ್ರಶ್ನೆಗಳು ಮತ್ತು ನಿಲುವುಗಳು' ಎಂಬಲ್ಲಿ ನಾಡಿನ ಪ್ರಮುಖ ಲೇಖಕರಾದ ಚಂದ್ರಶೇಖರ ಪಾಟೀಲ, ಚಂದ್ರಶೇಖರ ನಂಗಲಿ, ರಾಘವೇಂದ್ರ ಪಾಟೀಲ, ಚಂದ್ರಶೇಖರ ತಾಳ್ವ, ಆರ್. ಜಿ. ಹಳ್ಳಿ ನಾಗರಾಜ, ಡಾ॥ ಗೀತಾ ವಸಂತ, ಟಿ. ಯಲ್ಲಪ್ಪ, ಬಿ. ಪೀರ್ ಬಾಷಾ, ಯಮುನಾ ಗಾಂವಕರ, ಚಂಸು ಪಾಟೀಲ ಹಾಗೂ ಹುಲಿಕುಂಟಿಮೂರ್ತಿ ಅವರ ಪ್ರಬುದ್ಧ ಲೇಖನಗಳಿವೆ.

ಸಮಕಾಲೀನ ಚಿಂತಕರ ಹತ್ಯೆ, ಹೊಸ ಧರ್ಮದ ಹುಟ್ಟು, ಕಂದಾಚಾರದ ಕಡಿವಾಣ, ಹಿಂದಿ ಹೇರಿಕೆ ಮುಂತಾದ ಸಮಕಾಲೀನ ಪ್ರಶ್ನೆಗಳಿಗೆ ಪ್ರಮುಖ ಲೇಖಕರು ಖಚಿತವಾಗಿ ಉತ್ತರಿಸಿದ್ದಾರೆ.

'ವಿಶ್ವ ಧರ್ಮ ಒಂದೇ! ಮತ ಧರ್ಮಗಳು ಬೇರೆ ಬೇರೆ ! ಜನರು ಇದನ್ನು ಮರೆತಾಗ ಮತಧರ್ಮಗಳು ಸ್ಥಾವರವಾಗುತ್ತವೆ. ಮನುಷ್ಯರು ಮತ್ತು ಭಾಷೆಗಳು ಯಾರಿಗೂ ತೊಡಕಾಗುವುದಿಲ್ಲ' ಎಂಬ ಡಾ॥ ಚಂದ್ರಶೇಖರ ನಂಗಲಿ ಅವರ ಅಭಿಪ್ರಾಯ ಒಟ್ಟಾರೆ ಕೊನೆಯ ಭಾಗದ ಪ್ರತಿಧ್ವನಿಯಾಗಿದೆ.

ಯಾವ ನಿರ್ದಿಷ್ಟ ಚೌಕಟ್ಟಿಗೆ ಒಳಪಡದೆ 'ಅನಿಸಿದ್ದು ಆಡಿದ್ದು' ತನ್ನ ಸುತ್ತಲಿನ ಪರಿಸರದ ವಿದ್ಯಮಾನಗಳಿಗೆ ಸ್ಪಂದಿಸಿದ ದಾಖಲೆಗಳಂತಿವೆ' ಎಂದು ಡಾ॥ ನರಹಳ್ಳಿ ಬಾಲಸುಬ್ರಮಣ್ಯ ಬೆನ್ನುಡಿಯಲ್ಲಿ ಹೇಳಿದ್ದಾರೆ. ಮುನ್ನುಡಿಕಾರ ಡಾ॥ ಬಾಳಾಸಾಹೇಬ ಲೋಕಾಪೂರ 'ಜೈನ ಧರ್ಮದಲ್ಲಿ ಲೋಕಪ್ರಜ್ಞಪ್ತಿ' ಎನ್ನುವುದಿದೆ. ಇದರರ್ಥ ಅಂದರೆ ಲೋಕದ ಪ್ರಜ್ಞೆಯಲ್ಲಿ ಓಡಾಡುವುದು ಎಂದಾಗಿದ್ದು ಈ ಮಾತುಗಳು ಹಿನ್ನೆಲೆಯಲ್ಲಿ 'ಅನಿಸಿದ್ದು ಆಡಿದ್ದು' ಓದಿದಾಗ ಇಲ್ಲಿಯ ಲೇಖನಗಳು ಬಹಳ ಹತ್ತಿರವಾಗುತ್ತವೆ.

**ಸತೀಶ ಕುಲಕರ್ಣಿ**
ನಂ. ೨೪೨, ೯ನೇ ಅಡ್ಡರಸ್ತೆ, 'ಬಿ' ಬ್ಲಾಕ್, ಬಸವೇಶ್ವರನಗರ, ಹಾವೇರಿ – ೫೮೧ ೧೧೦

ತಿಳಿವು

# ಕನ್ನಡಕದ ಓರೆಕೋರೆಗಳನ್ನು ತೋರಿಸುವ ಎಚ್ಚರಿಕೆಗೆ ಸ್ವಾಗತ

ಮೂಲ : ಟಿ. ಎಂ. ಕೃಷ್ಣ

ಅನುವಾದ

ಪ್ರೊ ॥ ಟಿ. ಎಸ್. ವೇಣುಗೋಪಾಲ್

ಪ್ರೊ ॥ ಶೈಲಜ

ನಮ್ಮನ್ನು ನಾವೇ ಕಳೆದ ಕೆಲವು ತಿಂಗಳುಗಳಿಂದ ನೋಡಿಕೊಂಡಾಗ ನಾವೊಂದು ಜಡ ಸಮಾಜವಾಗಿ ಬಿಡುತ್ತಿದ್ದೇವೆ ಅನ್ನಿಸುತ್ತಿದೆ. ಇಂದಿನ ತೀವ್ರವಾದ ರಾಜಕೀಯ ವಾತಾವರಣದಲ್ಲಿ ಸಂವೇದನೆ, ಅನುಕಂಪೆ ಹಾಗೂ ಹಂಚಿಕೊಳ್ಳುವ ಸಾಮರ್ಥ್ಯ ಎಲ್ಲವನ್ನೂ ಕಳೆದುಕೊಂಡಿದ್ದೇವೆ ಅನ್ನಿಸುತ್ತಿದೆ. ನಮ್ಮೊಳಗೇ ಒಂದು ಅಜೆಂಡಾ ಇಲ್ಲದೆ ಹೋದರೆ ನಮಗೆ ಕೆಲಸಮಾಡುವುದಕ್ಕೇ ಆಗುತ್ತಿಲ್ಲ. ಇದು ಮೋದಿ ಭಕ್ತರ ವಿಷಯದಲ್ಲಿ ಮಾತ್ರವಲ್ಲ, ಎಡಪಂಥೀಯ ಒಲವಿರುವ ಉದಾರವಾದಿಗಳ ವಿಷಯದಲ್ಲೂ ನಿಜವಿರಬಹುದು.

ಹೆಚ್ಚು ಕಡಿಮೆ ಪ್ರತಿವಾರ ದಲಿತರು, ಮುಸ್ಲಿಮರು ಹಾಗೂ ಆದಿವಾಸಿಗಳ ಮೇಲಿನ ದಾಳಿಗಳ ಭಯಾನಕ ಕಥೆಗಳೊಂದಿಗೆ ನಾವು ಮುಖಾಮುಖಿಯಾಗುತ್ತಿದ್ದೇವೆ. ಆಧಾರ್‌ನ ಅತಿಯನ್ನು ಎತ್ತಿಹಿಡಿಯುವ ಪ್ರಕರಣಗಳು ಹೆಚ್ಚುತ್ತಲೇ ಇವೆ. ದಿನಬೆಳಗಾದರೆ ಭಯಂಕರ ಕಥೆಗಳನ್ನು ಕೇಳುತ್ತಿರುತ್ತೇವೆ. ಮನಸ್ಸುಗಳನ್ನು ಒಡೆಯುವಂತಹ ಮಾತುಗಳು ರಾಜಕೀಯ ನಾಯಕರ ಬಾಯಿಗಳಿಂದ ನಿರಂತರವಾಗಿ ಹರಿದುಬರುತ್ತಿರುತ್ತವೆ. ಇವುಗಳ ಮಧ್ಯದಲ್ಲೇ ಎಂದಿನಂತೆ, ಭ್ರಷ್ಟ ವ್ಯಾಪಾರಸ್ಥರು ತಮ್ಮ ಖಾಸಗಿ ಜೆಟ್‌ನಲ್ಲೋ, ಪ್ರಥಮದರ್ಜೆಯಲ್ಲೋ ದೇಶದ ಆಚೆಗೆ ಹಾರಿಹೋಗುತ್ತಾರೆ. ಈ ಎಲ್ಲದರ ಬಗ್ಗೆ ಎಷ್ಟೋ ಓದುತ್ತೇವೆ, ಕೇಳುತ್ತಿದ್ದೇವೆ ಹಾಗೂ ನೋಡುತ್ತಿದ್ದೇವೆ ಅಂದರೆ ಇವೆಲ್ಲಾ ನಮಗೆ ದಿನನಿತ್ಯದ ಬದುಕಿನ ಹೊಸ ಮಾಮೂಲಿ ವಿಷಯಗಳಾಗಿ ಬಿಟ್ಟಿದೆ. ಒಂದು ದಿನ ಇಂಥದ್ದೇನಾದರೂ ಆಗದೇ ಹೋದರೆ ನಾವು ಆಶ್ಚರ್ಯಚಕಿತರಾಗುತ್ತೇವೆ.

ಹಲವರಿಗೆ ಇವೆಲ್ಲಾ ಅತಿಹುರುಪಿನ, ಬ್ರೇಕಿಂಗ್ ನ್ಯೂಸ್–ಗೀಳಿನ ಮಾಧ್ಯಮದವರ ಉತ್ಪ್ರೇಕ್ಷಿತ ಮೇಲು ಮೇಲಿನ ಬುದ್ಧಿಭ್ರಮಣೆಯಾಗಿ ತೋರುತ್ತದೆ. ಇವನ್ನು ಕುರಿತ ನಮ್ಮ ಪ್ರತಿಕ್ರಿಯೆಗಳು ಸ್ಪಷ್ಟವಾದ ಎರಡು ಜಾಡಿನಲ್ಲಿ ಸಾಗುತ್ತವೆ. ಒಂದು ಬಹುಸಂಖ್ಯಾತರು ಹಾಗೂ ಅಲ್ಪಸಂಖ್ಯಾತರ ದೇಹಗಳನ್ನು ಎಣಿಸಿ ಹೋಲಿಸುವ, ಇಂದಿನ ಎಲ್ಲ ಅನ್ಯಾಯಕ್ಕೂ ಮುಘಲರನ್ನು, ಬ್ರಿಟಿಷರನ್ನು ಹಾಗೂ ಕಾಂಗ್ರೆಸ್ಸಿಗರನ್ನು ದೂಷಿಸುವ, ಬಲಪಂಥೀಯ ಕ್ರೋನಿಗಳಿಂದ ತಯಾರಾದ ಸುಳ್ಳು ಸುದ್ದಿಗಳನ್ನು, ವಾಟ್ಸ್ ಆಪ್ ಸುದ್ದಿಗಳನ್ನು, ಬ್ಲಾಗ್ ಪೋಸ್ಟ್‌ಗಳನ್ನು ನಂಬುವರ ವಿರುದ್ಧ ದಾಳಿಯನ್ನು ಮಾಡುವುದು. ಎರಡನೆಯದು ಈ ಎಲ್ಲಾ ದುರಂತಗಳನ್ನು ನಿರ್ಲಕ್ಷಿಸಿ ನರೇಂದ್ರ ಮೋದಿಯವರ ೫೬ ಇಂಚಿನ ಎದೆಯೊಳಗೆ ಜೀವಿಸುತ್ತಾ, ಅವರ ಎಲ್ಲಾ ನಾಟಕೀಯವಾದ ಮಾತುಗಳಿಗೆ ಜೋತುಬೀಳುವುದು.

ಇನ್ನೊಂದು ಬದಿಯಲ್ಲಿ ನನ್ನಂತಹವರು ಇದ್ದೇವೆ. ಈ ದುರಂತಗಳನ್ನು ಮುನ್ನೆಲೆಗೆ ತರುತ್ತೇವೆ. ಅವಕ್ಕೆ ಇನ್ನೊಂದಿಷ್ಟು ಪುರಾವೆಗಳನ್ನು ಸೇರಿಸಿ ನಮ್ಮ ವಾದವನ್ನು ಸಮರ್ಥಿಸುತ್ತಿರುತ್ತೇವೆ ಮತ್ತು ನಮ್ಮ ಕಾಲದ ತೊಂದರೆಗಳ ಬಗ್ಗೆ ಹೆಚ್ಚಿನ ಜನರಲ್ಲಿ ತಿಳುವಳಿಕೆ ಮೂಡಿಸಲು ನಮ್ಮ ಕೈಯಲ್ಲಾದಷ್ಟು ಮಾಡುತ್ತಿರುತ್ತೇವೆ. ನಮಗೆ ಗೊತ್ತಿಲ್ಲದೆಯೇ ಸರ್ಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸುವ ಘೋರವಾದ, ವಿಷಾದದ ಸುದ್ದಿಗಾಗಿ ಹೊಂಚುಹಾಕುತ್ತಿರುತ್ತೇವೆ. “ನಾನು ಹೇಳಲಿಲ್ಲವಾ?” ಅಂತ ಹೇಳುವ ಇನ್ನೊಂದು ಅವಕಾಶಕ್ಕಾಗಿ ಕಾಯುತ್ತಿರುತ್ತೇವೆ. ಬಲ ಪಂಥದ ಕಡೆಗೆ ಅದು ವಾಲಿದೆ ಅಂತ ಸ್ವಲ್ಪ ಅನ್ನಿಸಿದರೂ ಸಾಕು ಒಂದು ಕ್ಷಣವೂ ಯೋಚಿಸದೆ ಅದನ್ನು ಆಕ್ರಮಣಕಾರಿ, ವಿಚ್ಛಿದ್ರಕಾರಿ ಎಂದು ತೀರ್ಮಾನಿಸಿ ಅದರ ಮೇಲೆ ಎರಗುತ್ತೇವೆ.

ನಾವು ಯಾವುದೇ ಕಡೆಯಲ್ಲಿರಲಿ, ಈಗ ಒಂದು ನಿಮಿಷ ನಿಂತು ಆತ್ಮಾವಲೋಕನ ಮಾಡಿಕೊಳ್ಳುವ ಅವಶ್ಯಕತೆ ಇದೆ.

ನಿಜವಾದ ಕಳಕಳಿಯನ್ನೇ ಕಳೆದುಕೊಂಡ ಹಂತಕ್ಕೆ ಬಂದು ನಿಂತಿದ್ದೇವಾ? ಇವೆಲ್ಲವೂ ನಮ್ಮ ನಮ್ಮ ರಾಜಕೀಯವಾಗಿರಬಹುದು. ಪ್ರತಿಯೊಂದು ಪಕ್ಷವೂ ಮೋದಿಯನ್ನು ದೇವತೆಯನ್ನಾಗಿ ಇಲ್ಲವೇ ರಾಕ್ಷಸನನ್ನಾಗಿ ಮಾಡಲು ಪ್ರಯತ್ನಿಸುತ್ತಿರುತ್ತದೆ. ನಾವು ನಿರಂತರವಾಗಿ ಈ ಅಘೋಷಿತ ಸಾಮ್ರಾಟನನ್ನು ರಕ್ಷಿಸಲು ಇಲ್ಲ, ಉರುಳಿಸಲು ಪ್ರಯತ್ನಿಸುತ್ತಿರುತ್ತೇವೆ. ಹಾಗಾಗಿ ಪ್ರತಿಯೊಂದೂ ಆ ನಿಟ್ಟಿನಲ್ಲಿ ನಮಗೆ

ಒಂದು ಅಸ್ತ್ರವಾಗಿದೆ. ನಾನು ರಾಜಕಾರಣಿಗಳ ಮತ್ತು ಅವರ ರಾಜಕೀಯ ತಂತ್ರಗಾರಿಕೆಯ ಬಗ್ಗೆ ಮಾತನಾಡುತ್ತಿಲ್ಲ. ಈ ಅಂತರ್‌ಯುದ್ಧದಲ್ಲಿ ಭಾಗವಹಿಸುತ್ತಿರುವ ನನ್ನ ಹಾಗೂ ನಿಮ್ಮ ಬಗ್ಗೆ ಮಾತನಾಡುತ್ತಿದ್ದೇನೆ.

ಈ ಗದ್ದಲದಲ್ಲಿ ಕಳೆದುಹೋಗಿರುವುದು ನಿಜವಾದ ಜನ, ಸತ್ತವರು, ಗಾಯಗೊಂಡವರು, ಆರ್ಥಿಕವಾಗಿ ನಾಶವಾದ ರೈತರು ಹಾಗೂ ಅಂಚಿಗೆ ತಳ್ಳಲ್ಪಟ್ಟವರು. ಅವರೆಲ್ಲಾ ಚರ್ಚೆಯ ವಿಷಯಗಳಾಗಿದ್ದಾರೆ. ಇದು ಒರಟಾಗಿ ಕಾಣಿಸಬಹುದು, ಅಯ್ಯೋ ಸಂವೇದನೆಯೇ ಇಲ್ಲವಲ್ಲ ಅನ್ನಿಸಬಹುದು. ಆದರೆ ನಾನು ಯಾರಾಗುತ್ತಿದ್ದೇನೆ ಅನ್ನುವುದರ ಬಗ್ಗೆ ನನಗೆ ಆಶ್ಚರ್ಯವಾಗಬೇಕು. ಬೆಳಗ್ಗೆ ಎದ್ದು ನ್ಯೂಸ್‌ಪೇಪರ್ ಓದಿದಾಗ ಅದರಲ್ಲಿ ಒಂದು ಕೊಲೆಯೋ, ದಾಳಿಯೋ ಕಣ್ಣಿಗೆ ಬಿದ್ದಾಗ ಅದರ ಅಮಾನವೀಯತೆಯನ್ನು ನೋಡಿ ನನಗೆ ನಿಜವಾಗಿ ಆತಂಕ ಆಗುತ್ತಿದೆಯಾ? ನನಗೆ ಅದರ ನೋವು ಕಾಡುವ ಮೊದಲೇ, ನನ್ನ ಮನಸ್ಸು ಭಾರತೀಯ ಜನತಾಪಕ್ಷದ ಕಡೆಗೆ, ಮೋದಿಯ ಕಡೆಗೆ ತಿರುಗುತ್ತದೆ. ಅದೇ ರೀತಿಯಲ್ಲಿ ಮೋದಿ ಬೆಂಬಲಿಗರು ಈ ಸಾವನ್ನು ನೋಡಿಯೂ ನೋಡದಂತೆ, ಏನೂ ಆಗಿಲ್ಲದಂತೆ, ಅದೇನೂ ಮಹತ್ವದ್ದೇ ಅಲ್ಲ ಎನ್ನುವಂತೆ ಬಲಪಂಥೀಯ ಕೋಟೆಯನ್ನು ಸಮರ್ಥಿಸುತ್ತಾ ಹೋಗುತ್ತಾರೆ. ನಾವಿಬ್ಬರೂ ಮಾಡುತ್ತಿರುವುದು ಒಂದೇ ಅಲ್ಲವೇ? ಸಮಾಜದ ಕೆಳವರ್ಗದ ಜನರನ್ನು ಚದುರಂಗದ ಕಾಯಿಗಳಂತೆ ನಡೆಸುತ್ತಿಲ್ಲವೇ? ಬಲಪಂಥೀಯರು ಇವರು ಶೋಷಿತರು ಅನ್ನುವುದನ್ನೇ ಅಲ್ಲಗಳೆಯಲು ಪ್ರಯತ್ನಿಸುತ್ತಾರೆ. ಕಥೆ ತಿರುಚುತ್ತಾರೆ. ಅವರ ಕಥೆಯನ್ನು ನೆಚ್ಚಿಹೊರಟರೆ, ಅಲ್ಲಿ ಕುದುರೆ ಹಾಗೂ ಒಂಟೆಗಳಿಗೆ ಕೆಲಸವೇ ಇರುವುದಿಲ್ಲ. ಆದರೆ, ನಮ್ಮ ಮಟ್ಟಿಗೆ ಪ್ರತಿ ಕಾಯಿಯ ನಾಶ ಅವರ ಹೇಯತೆಗೆ ಒಂದು ಪುರಾವೆ ಆಗಿಬಿಡುತ್ತದೆ. ಇಬ್ಬರೂ ಅಂತಿಮವಾಗಿ ಜೀವಗಳನ್ನು ಕೇವಲ ಚದುರಂಗದಾಟದ ಕಾಯಿಗಳ ಮಟ್ಟಕ್ಕೆ ಇಳಿಸಿಬಿಟ್ಟಿರುತ್ತೇವೆ.

**ಹೊಸ ಹಾದಿಯನ್ನು ಕಂಡುಕೊಳ್ಳಬೇಕಾಗಿದೆ**

ಉಗ್ರವಾದ ಎನ್ನುವುದು ನಮ್ಮಲ್ಲಿ, ನಮ್ಮ ಒಳಗೇ ಇದೆ ಎನ್ನುವುದನ್ನು ಬಲದ ಒಲವಿರುವವರು ಗಮನಿಸುವುದಿಲ್ಲ. ಹಾಗಾಗಿ ಪ್ರತೀಕಾರ ಸರಿ ಅನ್ನಿಸಿಬಿಡುತ್ತದೆ. ಮತ್ತು ಉದಾರವಾದಿಯಾದ ನಾನು ನಿಜವಾದ ಜನರೊಂದಿಗೆ ಒಡನಾಡಬೇಕು, ನನ್ನ ರಾಜಕೀಯ ಅವರ ನಡುವಿನಿಂದಲೇ ಹೊಮ್ಮಬೇಕು. ಉದಾರವಾದಿಯಾಗುವುದರ ಅರ್ಥವೇ ಗಮನಿಸುವುದು ಹಾಗೂ ಪ್ರಶ್ನಿಸುವುದು. ಆದರೆ ಇಂದು ನಾವು ಕೇವಲ ಪ್ರತಿಕ್ರಿಯಿಸುತ್ತಿದ್ದೇವೆ. ಮೋದಿಯನ್ನು ಹಾಗೂ ಬಿಜೆಪಿಯನ್ನು ಭಾರತ ಚುನಾಯಿಸಿದೆ ಎಂಬ ಸಂಗತಿಯ ಬಗ್ಗೆ ಇಂದಿಗೂ ಗಾಬರಿಗೊಳ್ಳುತ್ತೇವೆ. ಕಾರಣಕ್ಕಾಗಿ ನಿರಂತರವಾಗಿ ಹೊರಗೆ ನೋಡುತ್ತಿದ್ದೇವೆ. ಆ ಪ್ರಕ್ರಿಯೆಯಲ್ಲಿ, ಮುಕ್ತವಾಗಿರುವುದು ಅಂದರೆ ನಮ್ಮ ಒಳಗನ್ನು ನೋಡಿಕೊಳ್ಳುವುದು ಅನ್ನುವುದನ್ನು ಮರೆತಿದ್ದೇವೆ.

ನಾವು ನಮ್ಮ ಕಾರ್ಯಚಟುವಟಿಕೆಯನ್ನು ಬದಲಿಸಿಕೊಳ್ಳದೇ ಹೋದರೆ, ಮೋದಿ ಅಧಿಕಾರದಿಂದ ಕೆಳಗಿಳಿದ ಮೇಲೂ ಏನೂ ಬದಲಾಗುವುದಿಲ್ಲ. ಮೋದಿಯ ನಂತರದ ಭಾರತ ಬರುತ್ತಿದ್ದಂತೆ ನಾವು ಸೂಕ್ತವಾದ ಚಟುವಟಿಕೆಯನ್ನು ರೂಪಿಸಿಕೊಳ್ಳಬೇಕು. ಮೋದಿ ಮತ್ತವರ ಪಕ್ಷದವರು ಸಮಾಜವನ್ನು ಒಡೆಯುತ್ತಿದ್ದಾರೆ. ಈ ಕೆಲಸವನ್ನು ಅವರು ಪರಿಣಾಮಕಾರಿಯಾಗಿ ಮಾಡುತ್ತಿದ್ದಾರೆ ಅಂತ ನಮಗೆ ಅನ್ನಿಸುತ್ತಿದೆ. ಇದನ್ನು ನಾವು ಸರಿಪಡಿಸಬೇಕು. ಅಷ್ಟೇ ಅಲ್ಲ, ನಮ್ಮ ದೇಶ ಗುಣಮುಖ ಆಗುವಂತೆ ನೋಡಿಕೊಳ್ಳಬೇಕು. ಈ ಸರ್ಕಾರ ನಮಗಾಗಿ ತೋಡಿರುವ ಹಳ್ಳದಲ್ಲಿ ನಾವು ಸಿಕ್ಕಿಕೊಂಡಿದ್ದರೆ ಇದು ಸಾಧ್ಯವಾಗುವುದಿಲ್ಲ. ಅವರು ಅರಚುತ್ತಾರೆ, ಪ್ರತಿಯಾಗಿ ನಾವೂ ಅರಚುತ್ತೇವೆ. ಇಬ್ಬರೂ ಏನೋ ಸಾಧಿಸಿಬಿಟ್ಟವರಂತೆ ನಮ್ಮ ನಮ್ಮ ಲೋಕದಲ್ಲಿ ಭ್ರಮೆಯಲ್ಲಿರುತ್ತೇವೆ. ಬಿಜೆಪಿಯ ಉದ್ದೇಶವೂ ಇದೇ. ನಮ್ಮನ್ನು ಜನರಿಂದ ಪ್ರತ್ಯೇಕಿಸುವುದು. ಅವರು ಸಮಾಜದ ಹೆಚ್ಚಿನ ಜನರ ಬ್ರೇನ್‌ವಾಷ್ ಮಾಡುತ್ತಾ ಹೋದಾಗ ಅವರನ್ನು ದೂಷಿಸುತ್ತಾ, ಆರೋಪಿಸುತ್ತಾ ಹೋಗುತ್ತಿರುತ್ತೇವೆ. ದುರಂತ ನಮಗೆ ಗೊತ್ತಾಗದ ಹಾಗೆ ನಮ್ಮನ್ನು ತಟ್ಟುವವರೆಗೆ ನಾವು ಕಾಯುತ್ತಾ ಕೂರಲಾಗುವುದಿಲ್ಲ. ಘಟನೆಯಾದ ನಂತರ ಅದು ನಡೆದ ಸ್ಥಳಕ್ಕೆ ಧಾವಿಸುತ್ತೇವೆ. ಘಟನೆಯನ್ನು ಕುರಿತು ಪ್ರಲಾಪಿಸುತ್ತೇವೆ. ನಮ್ಮ ಬೌದ್ಧಿಕತೆಯನ್ನು ಮತ್ತಷ್ಟು ಹೆಚ್ಚಿಸಿಕೊಳ್ಳಲು ಅದನ್ನು ಬಳಸಿಕೊಳ್ಳುತ್ತೇವೆ. ಹಾಗೆ ಮಾಡುವುದರ ಮೂಲಕ ನಾವೂ ಕೂಡ ಬಿಜೆಪಿಯವರಂತೆಯೇ – ಅವಕಾಶವಾದಿಗಳಾಗುತ್ತೇವೆ. ಸಾಮಾನ್ಯ ಜನರ ಬಗೆಗಿನ ನಮ್ಮ ಕಾಳಜಿ ನಿಜವಾದ ಕಾಳಜಿಯಾಗಬೇಕು. ಲಿಂಗ, ಜಾತಿ, ಧರ್ಮ ಮತ್ತು ಕುಲವನ್ನು ಮೀರಿ ಅವರ ಕೈಹಿಡಿಯಬೇಕು. ಅವರ ನೋವನ್ನು ಹಂಚಿಕೊಳ್ಳುವಂತೆ ಅವರ ನಗುವನ್ನೂ ಹಂಚಿಕೊಳ್ಳಬೇಕು. ನಾವು ಸಮಾಜದ ಯಾವುದೇ ಗುಂಪನ್ನು ನಿರ್ಲಕ್ಷಿಸುವುದಕ್ಕೆ ಅಥವಾ ಬಿಡುವುದಕ್ಕೆ ಆಗುವುದಿಲ್ಲ. ಬಲಪಂಥೀಯರು ಇದನ್ನು ನಮಗೆ ಕಲಿಸಿದ್ದಾರೆ. ಪ್ರತಿ ಹಳ್ಳಿಯಲ್ಲಿ, ಊರಿನಲ್ಲಿ, ಶಾಲೆಯಲ್ಲಿ, ಕಾಲೇಜಿನಲ್ಲಿ ಉದಾರವಾದಿ ಧ್ವನಿ ಕೇಳಿಸಬೇಕು. ಅದನ್ನು ನಿರ್ಲಕ್ಷಿಸುವುದಕ್ಕೆ ಸಾಧ್ಯವೇ ಇಲ್ಲ.

ಸಮಾಜದ ಮೂಲೆ ಮೂಲೆಯಲ್ಲೂ ಹರಡಿರುವ ನಕಾರಾತ್ಮಕತೆಯ ಪಿಡುಗು ಕೇವಲ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದಲ್ಲ. ಇದು ನಾವು ಏನಾಗಿದ್ದೇವೆ ಅನ್ನುವುದರ ಪ್ರತಿಫಲನ. ಮೋದಿ ಹಾಗೂ ಬಿಜೆಪಿ ನಮ್ಮ ಸಮಾಜದ ದೌರ್ಬಲ್ಯಗಳನ್ನೇ ಬಂಡವಾಳ ಮಾಡಿಕೊಂಡಿದೆ. ನಮ್ಮ ಮನಸ್ಸುಗಳಿಗೆ ಮಂಕು ಬಡಿಸಲು ಅವರಿಗೆ ಬಿಡಬಾರದು. ನಮ್ಮ ಸಮಾಜದ ಮಿತಿಗಳಿಂದ ತೀವ್ರವಾಗಿ ಹಾನಿಗೊಳಗಾದವರೊಂದಿಗೆ ನಾವು ನಿಲ್ಲಬೇಕು. ಯಾವುದೇ ರಾಜಕೀಯ ಕನ್ನಡಕವೂ ಇಲ್ಲದೆ ಅವರನ್ನು, ಅವರ ಮಾತುಗಳನ್ನು ಕೇಳಿಸಿಕೊಳ್ಳಬೇಕು. ಸಂವೇದನಾಶೀಲತೆಯನ್ನು ನಮ್ಮ ಉದಾರವಾದಿ ಸಮುದಾಯ ನಿಜವಾದ ಅರ್ಥದಲ್ಲಿ ಅನಂತವಾಗಿ, ಜೀವಂತವಾಗಿ ಉಳಿಸಿಕೊಂಡಾಗ ಮಾತ್ರ ಮರುಚೇತರಿಕೆ ಸಾಧ್ಯ.

ಮೂಲ : ಟಿ. ಎಂ. ಕೃಷ್ಣ
ಅನುವಾದ : **ಪ್ರೊ॥ ಟಿ. ಎಸ್. ವೇಣುಗೋಪಾಲ್**
**ಪ್ರೊ॥ ಶೈಲಜ**
ನಂ. ಸಿ ಹೆಚ್ – ೭೩, ೭ನೇ ಮುಖ್ಯರಸ್ತೆ
ಸರಸ್ವತಿಪುರಂ, ಮೈಸೂರು – ೫೭೦ ೦೦೯

## ಸಿ. ವಿ. ರಾಜಗೋಪಾಲ ಪುರಸ್ಕಾರ

ಶ್ರೀ ಸಿ. ವಿ. ರಾಜಗೋಪಾಲ ಅವರು ಕನ್ನಡದ ಪತ್ರಕರ್ತರಾಗಿ ವಿಶೇಷ ಖ್ಯಾತಿ ಗಳಿಸಿದ್ದವರು. 'ಪ್ರಜಾವಾಣಿ'ಯಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದ ಮಾನ್ಯ ರಾಜಗೋಪಾಲ್ ನಿವೃತ್ತಿಯ ನಂತರ "ಕೆಂಬಾವುಟ" ಪತ್ರಿಕೆಗೂ ಬರೆಯುತ್ತಿದ್ದವರು. ಅಂತೆಯೇ ಬೇರೆ ಕೆಲವು ಪತ್ರಿಕೆಗಳ ಅಂಕಣಕಾರರಾಗಿ ವಿಶಿಷ್ಟ ವಿಶ್ಲೇಷಣೆಗಳಿಗೆ ಹೆಸರಾಗಿದ್ದವರು. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫,೦೦೦/– ಪುರಸ್ಕಾರ ೨೦೧೩–೧೪ರಿಂದ ನೀಡುತ್ತಿದ್ದಾರೆ. ಪ್ರತಿ ವರ್ಷ, ಹೊಸತು ಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯಿಂದ ಮುಂದಿನ ಜುಲೈವರೆಗಿನ ಸಂಚಿಕೆಗಳಲ್ಲಿ ಪ್ರಕಟವಾಗುವ ಲೇಖನಗಳನ್ನು ಈ ಪುರಸ್ಕಾರಕ್ಕೆ ಪರಿಗಣಿಸಲಾಗುತ್ತದೆ. ೨೦೧೬–೨೦೧೭ರ ಬಹುಮಾನಗಳನ್ನು **ಶ್ರೀ ಎಂ. ಸತ್ಯಾನಂದ (ನೋಟು ರದ್ದತಿ – ಒಂದು ಕಣ್ಣುಮುಚ್ಚಾಲೆ ವರ್ಗ ಸಮರ** – *ಜನವರಿ ೨೦೧೭*) ಮತ್ತು **ಶ್ರೀ ಬಿ. ಎನ್. ವೇಣುಗೋಪಾಲ್ (ಅಳಿದ ಅಮೆರಿಕಾ ವಿಶ್ವವಿದ್ಯಾಲಯಗಳು** – *ಸೆಪ್ಟೆಂಬರ್ ೨೦೧೬*) ಅವರಿಗೆ ನೀಡಲಾಗಿದೆ. ಪುರಸ್ಕರಿಸಿದ ಚಿಣ್ಯ ಕುಟುಂಬದವರಿಗೂ, ಪುರಸ್ಕೃತರಿಗೂ 'ಹೊಸತು' ಅಭಿನಂದಿಸುತ್ತದೆ.

***– ಸಂ.***







# ರೇಖೆಯ ಓಟ ಕಲಾತ್ಮಕ ನೋಟ
# ಸೆಂಥಿಲ್ ಕುಮಾರ್ ಜೆ.

ಕಲಾವಿದ, ಉಪನ್ಯಾಸಕ ಸೆಂಥಿಲ್ ಕುಮಾರ್ ಜೆ. ಅದ್ಭುತ ಕಲಾವಿದರಲ್ಲಿ ಒಬ್ಬರು. ಪ್ರಸ್ತುತ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಇತ್ತೀಚೆಗೆ ಹಂಪೆಗೆ ಭೇಟಿಕೊಟ್ಟ ಸಂದರ್ಭದಲ್ಲಿ ಅಲ್ಲಿಯ ವಿಶಿಷ್ಟ ತಾಣಗಳನ್ನು ರೇಖೆಗಳ ಮೂಲಕ ಚಿತ್ರಿಸಿ ಎಲ್ಲರ ಗಮನ ಸೆಳೆದಿರುವುದು ವಿಶೇಷ. ಇವರು ಕರ್ನಾಟಕ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ವ್ಯಾಸಂಗ ಮಾಡಿದ್ದಾರೆ. ವೆಂಕಟಪ್ಪ ಆರ್ಟ್ ಗ್ಯಾಲರಿ, ಚಿತ್ರಸಂತೆ, ಎಥೋಸ್ ಕಲಾ ಗ್ಯಾಲರಿ ಗ್ರೂಪ್ ಶೋ, ಲಲಿತಕಲಾ ಅಕಾಡೆಮಿ ನವದೆಹಲಿ ಸೇರಿದಂತೆ ಹಲವಾರು ಕಡೆ ಕಲಾಪ್ರದರ್ಶನ ಮಾಡಿ ಮೆಚ್ಚುಗೆ ಪಡೆದಿದ್ದಾರೆ.

–ಬಳಕೂರು ವಿ. ಎಸ್. ನಾಯಕ









Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru.
Editor : Dr. Siddanagouda Patil. 

